# ಕೀರ್ತನಕಂಠಾಭರಣ

## (ರಾಮಾಯಣ)



ಗ್ರಂಥಕರ್ತ

**ಹೊಸಕೆರೆ ಚಿದಂಬರಯ್ಯ**

ಭಕ್ತಬಂಧು ಕಾರ್ಯಾಲಯ, ಬಸವನಗುಡಿ,

**ಬೆಂಗಳೂರು ಸಿಟಿ**

ಶಾ. ೧೮೫೧ | ಮೊದಲನೆ ಮುದ್ರಣ ೧,೦೦೦ ಪ್ರತಿಗಳು | ಕ್ರಿ. ೧೯೨೮

ಬೆಲೆ: ರೂ. ೧—೮—೦

# ಮುನ್ನುಡಿ

—•*•*•—

ಪುರುಷಾರ್ಥಗಳಲ್ಲಿ ಧರ್ಮಕ್ಕೆ ಮೊದಲನೆಯ ಸ್ಥಾನವನ್ನು ಕೊಟ್ಟಿರುವ ನಮ್ಮ ದೇಶದಲ್ಲಿ ಹಿಂದೆ ಧಾರ್ಮಿಕಶಿಕ್ಷಣಕ್ಕಿದ್ದಷ್ಟು ಪ್ರಾಶಸ್ತ್ಯವು ಮತ್ತೊಂದಕ್ಕೆ ಇರಲಿಲ್ಲವೆಂದರೆ ಅತ್ಯುಕ್ತಿಯಾಗಲಾರದು. ಬಹಳ ಹಿಂದಿನ ಕಾಲದಲ್ಲಿ—ಜನರ ಮನಸ್ಸಿನ ಪ್ರವೃತ್ತಿಯು ವಿಷಯಗಳ ಕಡೆಗೆ ಬಹು ಮಂದವಾಗಿ ಮಾತ್ರ ಹರಿಯುತ್ತಿದ್ದಾಗ— ಧಾರ್ಮಿಕಶಿಕ್ಷಣವು ಶ್ರುತಿಯ ಅಧ್ಯಯನದ ಮೂಲಕವಾಗಿದ್ದಂತೆ ತೋರುತ್ತದೆ. ಈಚೆಗೆ ಜನರ ಮನಸ್ಸಿಗೆ ವಿಷಯಗಳ ಸೆಳೆತವೂ ಹೆಚ್ಚಾಗಿ ವೈದಿಕಧರ್ಮಾಭಿಮಾನಿಗಳಾದ ಅರಸರೂ ಕಳೆಗುಂದುತ್ತ ಬಂದು ಪರಧರ್ಮೀಯರ ಆಳಿಕೆಯ ಸೆಳೆಯೂ ಬಡಿಯುತ್ತ ಬಂದ ಹಾಗೆಲ್ಲ ನಮ್ಮ ದೇಶದ ದೇವಭಾಷೆಯಾದ ಸಂಸ್ಕೃತದ ನೈಪುಣ್ಯವೂ ಸಂಸ್ಕೃತಿಯ ಶುದ್ಧತೆಯೂ ಮಸುಕಾಗುತ್ತ ಬಂದದ್ದರಿಂದ ಮೆಲ್ಲಮೆಲ್ಲಗೆ ಸ್ಮೃತಿಗಳೂ ಪುರಾಣಗಳೂ ಇತಿಹಾಸಗಳೂ ರಂಗಸ್ಥಲಕ್ಕೆ ಹೆಜ್ಜೆಯನ್ನಿಟ್ಟಮೇಲೆ ಪುರಾಣಪದ್ಧತಿಯಾರಂಭವಾಯಿತು. ಇದನ್ನು ನೋಡಿದರೆ ಮನಸ್ಸಿನ ಹರಿದಾಟವು ಹೊರಗಡೆಗೆ ಹೆಚ್ಚಿದಷ್ಟೂ ಧಾರ್ಮಿಕಶಿಕ್ಷಣಪದ್ಧತಿಯಲ್ಲಿ ಮನಸ್ಸನ್ನು ಆಕರ್ಷಣೆಮಾಡುವ ಉದ್ಯೋಗವೂ ಹೆಚ್ಚುಹೆಚ್ಚು ಸೇರುತ್ತ ಬಂತೆಂದು ತೋರುತ್ತದೆ. ಆದ್ದರಿಂದಲೇ ಪುರಾಣಗಳಲ್ಲಿಯೂ ಇತಿಹಾಸಗಳಲ್ಲಿಯೂ ಅನೇಕ ಕಥೆಗಳೂ ವರ್ಣನೆಗಳೂ ರಸಿಕತೆಯೂ ಹೆಚ್ಚುಹೆಚ್ಚು ಮೈಗೂಡಿ ತೋರುತ್ತಿವೆ. ಈಗಿನ ಕಾಲದಲ್ಲಂತು ವಿಷಯಗಳು ಮನುಷ್ಯನನ್ನೆ ಹತ್ತುಕಡೆಯಿಂದಲೂ ಕಿತ್ತುಕೊಂಡು ತಿನ್ನುವ ಸಡಗರದಲ್ಲಿ ಅವನು ಧಾರ್ಮಿಕಶಿಕ್ಷಣದ ಕಡೆಗೆ ಒಂದು ಕುಡಿನೋಟವನ್ನು ಹಾಕುವದಕ್ಕೂ ಅವಕಾಶವಿಲ್ಲ. ಆದ್ದರಿಂದ ಜನತೆಯಲ್ಲಿ ಧರ್ಮದ ಸಂಸ್ಕಾರವೇನಾದರೂ ಉಳಿಯಬೇಕಾದರೆ ಧಾರ್ಮಿಕಶಿಕ್ಷಣವನ್ನು ಈಗಿನ ಕಾಲಕ್ಕೆ ಕೂಡ ಮನೋರಂಜಕವಾಗುವಂತೆ ಹೊಸ ಸ್ವರೂಪದಲ್ಲಿಡಬೇಕಾದ ಅಗತ್ಯವುಂಟಾಗಿ ಕೀರ್ತನಪದ್ಧತಿಯು ಹೊರಬಿದ್ದಿರುವದು. ಏನೋ ಒಂದು ಪ್ರಾಕ್ತನಸುಕೃತವಿಶೇಷದಿಂದ ಧರ್ಮಗ್ರಂಥಗಳ ಅಧ್ಯಯನಕ್ಕೆ ಹೆಚ್ಚು ಲಕ್ಷ್ಯವನ್ನು ಹಾಕಿರುವ ಕೆಲವರ ಹೊರತು ಉಳಿದ **ಜನಮಂಡಲಿಗೆಲ್ಲ ಧಾರ್ಮಿಕಶಿಕ್ಷಣಕ್ಕೆ ಕೀರ್ತನವೇ ಗತಿ**ಯಾಗಿದೆ. ಈ ಕೀರ್ತನಪದ್ಧತಿಯು ಯಾವ ಕಾಲದಲ್ಲಿ ತಲೆ ಎತ್ತಿತೆಂದು ಹೇಳುವದಕ್ಕೆ ತಕ್ಕ ಸಾಧನಗಳಿಲ್ಲವಾದರೂ ಇದರ ಉತ್ಪಾದಕರು ನಾರದರೆಂದು ಜನರು ಭಾವನೆಯನ್ನಿಟ್ಟುಕೊಂಡು ಎಷ್ಟೋ ಕಾಲದಿಂದ ಕೀರ್ತನಗಳನ್ನು

**ಕೀರ್ತನಗಳ ಹುಟ್ಟು**

ನಡೆಸುತ್ತಿರುವರು. ಕರ್ಣಾಟಕದಲ್ಲಿ ನಡೆಯುವ ಕೀರ್ತನಗಳ ಶ್ಲಾಘನೆಯು ಮಹಾರಾಷ್ಟ್ರಕ್ಕೆ ಸಲ್ಲುವದೆಂದು ಕೆಲವರೆನ್ನುವರು. ಕೀರ್ತನಪದ್ಧತಿಗಲ್ಲ ಮಹಾರಾಷ್ಟ್ರವೇ ಗುತ್ತಿಗೆಯನ್ನು ಹೊತ್ತಿರುವದಕ್ಕೂ ಕರ್ಣಾಟಕವು ಅದನ್ನು ಬಾಡಿಗೆಗೆ ತೆಗೆದುಕೊಂಡಿರುವದಕ್ಕೂ ಆಧಾರಗಳೇನೂ ಇಲ್ಲ. ಮಹಾರಾಷ್ಟ್ರಭಾಷೆಯ ಸುಳಿವನ್ನೇ ಅರಿಯದ ಶುದ್ಧಕನ್ನಡಿಗರು ಕೀರ್ತನಮಾಡುತ್ತಿದ್ದದ್ದನ್ನು ಕಂಡವರೆಷ್ಟೋ ಉಂಟು. ಅವರಲ್ಲಿ ನಾನೊಬ್ಬನು. ಕೀರ್ತನಗಳಲ್ಲಿ ಉಪಯೋಗಿಸಬಹುದಾದ ಪದಪದ್ಯಗಳನ್ನಂತು ಶುದ್ಧಕನ್ನಡಿಗರಾದ ಪುರಂದರದಾಸರೇ ಮೊದಲಾದ ವೈಷ್ಣವದಾಸರೂ ಸರ್ಪಭೂಷಣ ಶಿವಯೋಗಿಗಳೇ ಮೊದಲಾದ ಶಿವದಾಸರೂ ಬೇಕಾದಷ್ಟು ಬರೆದು ಹಾಕಿರುವರು.

ಧಾರ್ಮಿಕಶಿಕ್ಷಣವೆಂದ ಕೂಡಲೆ ಜಗತ್ತನ್ನೆಲ್ಲ ಹೀಯಾಳಿಸುವ ವೈರಾಗ್ಯದ ಮಾತು ಬರುವದೆಂದು ಎಲ್ಲರೂ ಮುಖವನ್ನು ಸುಕ್ಕಿಸುವರು. ನಿಜವಾಗಿ ನೋಡಿದರೆ ನಮ್ಮ ದೇಶವು ವಿರಕ್ತರಿಂದಲೇ ಹೆಸರುವಾಸಿಯಾದದ್ದು.

ವೈರಾಗ್ಯದ ತಾತ್ಪರ್ಯ

ನಮ್ಮ ಮೂಲಪುರುಷರೆಂದು ನಾವು ಪರಮಭಕ್ತಿಯಿಂದ ಯಾರ ಗೋತ್ರವನ್ನು ಬಿಡದೆ ಉಚ್ಚಾರಮಾಡುವೆವೊ ಅವರೆಲ್ಲ ವೈರಾಗ್ಯಚಕ್ರವರ್ತಿಗಳು. ನಾವು ನಮ್ಮ ಪೂರ್ವಿಕರ ವಂಶದವರೆನಿಸಿಕೊಳ್ಳಬೇಕಾದರೆ ನಿಜವಾಗಿ ವಿರಕ್ತರೇ ಆಗಬೇಕು. ಆದರೆ ಈಚೀಚೆಗೆ ಜನಕ್ಕೆ ವಿಷಯಸುಖದ ಕಡೆಯ ಮೋಹವು ಹೆಚ್ಚಿರುವದರಿಂದ ವಿಷಯಸುಖವನ್ನು ತುಚ್ಛವೆಂದರೆ ತಮ್ಮನ್ನೆ ತುಚ್ಛವೆಂದಂತೆ ಭಾವನೆಯಾಗುವ ಕಾಲ ಬಂದಿದೆ. ವಿಚಾರದೃಷ್ಟಿಯನ್ನು ಮುಂದುಮಾಡಿದರೆ ಈ ಮೋಹವು ಬಯಲಾಗುವದು. ಮನುಷ್ಯನು ಅತ್ಯಂತವಿಷಯಾಸಕ್ತನೇ ಆದರೂ ಕೂಡ ಅವನಲ್ಲಿ ಒಂದಿಲ್ಲೊಂದು ಬಗೆಯ ವೈರಾಗ್ಯವಿದ್ದೇ ಇರುತ್ತದೆ. ವಿದ್ಯೆಯಿಂದಾಗುವ ಸುಖವು ಹೆಚ್ಚೆಂದು ತಿಳಿದು ಅದನ್ನು ಬಯಸುವವರು ಊಟತಿಂಡಿಗಳ ಮತ್ತು ಮನೆಮಠಗಳ ಸುಖದ ಮೇಲೆ ವೈರಾಗ್ಯವನ್ನು ಹೊಂದಿ ಅಭ್ಯಾಸ ಮಾಡುತ್ತಾರೆ. ನಾಟಕ ಮೊದಲಾದವುಗಳ ನೋಟಗಳ ಸುಖವನ್ನು ಹೆಚ್ಚೆಂದು ತಿಳಿದು ಬಯಸುವವರು ನಿದ್ರೆಯಲ್ಲಿ ವೈರಾಗ್ಯವನ್ನು ಹೊಂದುತ್ತಾರೆ. ಧನಾರ್ಜನೆಯ ಸುಖವು ಹೆಚ್ಚೆಂದು ತಿಳಿದು ಬಯಸುವವರು ಹೆಂಡತಿಮಕ್ಕಳನ್ನೆಲ್ಲ ಎಷ್ಟೋ ಉಪೇಕ್ಷೆಮಾಡುತ್ತಾರೆ. ಕೀರ್ತಿಯ ಸುಖವನ್ನು ಹೆಚ್ಚೆಂದು ತಿಳಿದು ಬಯಸುವವರು ಧನ ಮೊದಲಾದ ಹೊರಗಣ ಉಪಕರಣಗಳಲ್ಲಿ ಮಾತ್ರವೇ ಅಲ್ಲದೆ ತಮ್ಮ ಶರೀರದಲ್ಲಿ ಕೂಡ ವೈರಾಗ್ಯವನ್ನು ಹೊಂದಿ ಹೆಣಗುತ್ತಾರೆ. ತಾತ್ಪರ್ಯವೇನೆಂದರೆ **ಒಂದು ಹೆಚ್ಚಿನ ಸುಖವನ್ನು ಪಡೆಯುವದಕ್ಕಾಗಿ ಕಡಿಮೆಯ ಸುಖವನ್ನು ಉಪೇಕ್ಷೆಮಾಡುವದೇ ವೈರಾಗ್ಯ.** ನಮ್ಮ ಪೂರ್ವಿ-

ಕರಲ್ಲಿ ಹೆಸರುಗೊಂಡಿದ್ದ ವೈರಾಗ್ಯವು ಯಾವದೆಂದರೆ ಭಗವದನುಗ್ರಹದಿಂದಾಗುವ ಸುಖವು ಹೆಚ್ಚೆಂದು ತಿಳಿದು ಉಳಿದ ಪ್ರಾಪಂಚಿಕಸುಖಗಳನ್ನು ಉಪೇಕ್ಷೆಮಾಡುವದು. ಹೀಗೆ ಉಪೇಕ್ಷೆಮಾಡಿದ ಮಾತ್ರಕ್ಕೇ ವಿಷಯಗಳೆಲ್ಲ ಅಂತರ್ಧಾನವಾದಾವೆಂದು ಯಾರೂ ಗಾಬರಿಗೊಳ್ಳಬಾರದು. ಬಾಳೆಯ ಹಣ್ಣಿನ ಕಡೆಗೇ ದೃಷ್ಟಿ ಇಟ್ಟಿದ್ದರೂ ಬಾಳೆಯ ಎಲೆಯೂ ಹೇಗೆ ಬಂದೇ ಬರುವದೋ ಹಾಗೆ ಭಗವದನುಗ್ರಹವನ್ನು ಬಯಸುವವರಿಗೆ ಪ್ರಾಪಂಚಿಕಸುಖವೂ ಆನುಷಂಗಿಕವಾಗಿ ಬಂದೇ ಬರುವುದು. ಒಂದು ಪಕ್ಷ ಹೊರಗಣ್ಣಿಗೆ ಅದು ಕೊರತೆಯಾದರೂ ಒಳಗಣ್ಣಿಗೆ ಅದರ ಕೊರತೆ ತೋರುವದೇ ಇಲ್ಲ. ಆದಕಾರಣ ವೈರಾಗ್ಯವೆಂದರೆ ತಿರಿಯುವಂತೆ ಮಾಡುವದೆಂದು ಯಾರೂ ಭಾವಿಸಬಾರದು. ಧಾರ್ಮಿಕಶಿಕ್ಷಣದ ವಿರಕ್ತನು ತನಗೆ ತನ್ನದೆಂಬುದೇನೂ ಇಲ್ಲದಿದ್ದರೂ ಯಾರನ್ನೂ ಎಂದೂ ತಿರಿಯದೆ ಆನಂದಪೂರ್ಣನಾಗಿರುವನು. ಆದ್ದರಿಂದ ಇಂಥದ್ದಕ್ಕೆ ಯಾರು ತಾನೆ ಶುಭಾಗಮನವನ್ನು ಬಯಸಬಾರದು? ವಿಷಯಸುಖಕ್ಕೂ ಭಗವದನುಗ್ರಹದ ಸುಖಕ್ಕೂ ವ್ಯತ್ಯಾಸವೇನೆಂದರೆ ವಿಷಯಸುಖವು ಕಾಫಿಯ ಕಷಾಯದಂತೆ ನರಮಂಡಲವನ್ನು ತತ್ಕಾಲದಲ್ಲಿ ಎಬ್ಬಿಸಿಕುಣಿಸುವದು. ಆದರೆ ಅದರ ವೇಗವು ಇಳಿಯುತ್ತಲೇ ಮನಸ್ಸು ಪೂರ್ವಾಧಿಕವಾಗಿ ನಿರ್ವೀರ್ಯವಾಗುವದು. ಭಗವದನುಗ್ರಹದ ಸುಖವು ಹಾಲಿನಂತೆ ಏಕಪ್ರಕಾರವಾದ ಶಾಂತಿಯನ್ನೂ ಪುಷ್ಟಿಯನ್ನೂ ಕೊಡುವಂಥದ್ದು. ಕಾಫಿಯ ಬಟ್ಟಲನ್ನು ಹಿಂದಕ್ಕೆ ಜರುಗಿಸಿ ಹಾಲಿನ ಬಟ್ಟಲನ್ನು ಮುಂದಕ್ಕೆಳೆದುಕೊಳ್ಳುವ ಪ್ರವೃತ್ತಿ ಈಗ ಕಡಿಮೆಯಾಗಿ ಕಂಡರೂ ನಿತ್ಯಸುಖವನ್ನು ಪಡೆಯಬೇಕಾದರೆ ಹಾಗೆ ಮಾಡಿಯೇ ತೀರಬೇಕಾಗುವದೆಂಬುದನ್ನು ಸೆರಗಿಗೆ ಗಂಟುಹಾಕಿಕೊಂಡು ಧಾರ್ಮಿಕಶಿಕ್ಷಣದಲ್ಲಿ ಹೇಳುವ ವೈರಾಗ್ಯವನ್ನು ಬಗ್ಗಿಸಿಕೊಳ್ಳುವದಕ್ಕೆ ಯತ್ನಿಸುವದೊಳ್ಳೆಯದು.

**ಧಾರ್ಮಿಕಶಿಕ್ಷಣದ ಅವಶ್ಯಕತೆ**

ಧರ್ಮದ ತಿರುಳನ್ನರಿಯದವರು ಧಾರ್ಮಿಕವಿಚಾರವೆಂದರೆ ಹೆಂಡತಿ, ಮಕ್ಕಳು—ಮೊದಲಾದ ವಿಷಯಕೋಟಿಯಿಂದ ಮನುಷ್ಯನನ್ನು ದೂರಕ್ಕೆ ಸೆಳೆದೊಯ್ದು ಕಗ್ಗಾಡಿನಲ್ಲಿ ಎರಡು ಕಣ್ಣನ್ನೂ ಕಟ್ಟಿಬಿಡುವಂಥ ಅಪಾಯಕರವಾದ ವಿಚಾರಗಳೆಂದು ತಿಳಿಯುತ್ತಾರೆ. ಚೆನ್ನಾಗಿ ನೋಡಿದರೆ ಅವರ ತಪ್ಪು ಅವರಿಗೆ ತಿಳಿಯುತ್ತದೆ. ಧಾರ್ಮಿಕವಿಚಾರವು ವಿಷಯಗಳಿಗೆಲ್ಲ ವಿರೋಧಿಯಲ್ಲವೆಂಬುದಿಷ್ಟೇ ಅಲ್ಲ; ವಿಷಯಗಳು ಒಮ್ಮೆ ಸುಖವನ್ನೂ ಒಮ್ಮೆ ದುಃಖವನ್ನೂ ಕೊಡುವ ಸ್ವಭಾವದವುಗಳಾಗಿದ್ದರೂ **ಧಾರ್ಮಿಕವಿಚಾರಗಳು** ತಮ್ಮ ಪ್ರಭಾವದಿಂದ ವಿಷಯಗಳ ದುಸ್ಸ್ವಭಾವಕ್ಕೆ ಗ್ರಹಣವನ್ನುಂಟುಮಾಡಿ—ಆಟಗಾರರು ಪ್ರಾಣಭಯವಿಲ್ಲದೆ ಹುಲಿ, ಸಿಂಹ ಮೊದ

ಲಾದ ಕ್ರೂರಮೃಗಗಳೊಡನೆ ಬೇಕಾದಹಾಗೆ ಚಿನ್ನಾಟವಾಡುವಂತೆ–**ದುಃಖದ ಭಯವಿಲ್ಲದೆ ವಿಷಯಗಳೊಡನೆ ಬೇಕಾದಹಾಗೆ ಚೆಲ್ಲಾಟವಾಡುವ ಸಾಮರ್ಥ್ಯವನ್ನು ಮನುಷ್ಯನಿಗೆ ತಂದುಕೊಡುವವು.** ಈ ಸಾಮರ್ಥ್ಯವು ಯಾರಿಗೆ ಬೇಡ? ಇದು ಬರೀ ನನ್ನ ಕಲ್ಪನೆಯು ಮಾತಲ್ಲ. "**ವಿಜ್ಞಾಯ ಸೇವಿತಶ್ಚೋರೋ ಮೈತ್ರೀಮೇತಿ ನ ಚೋರತಾಮ್**"–(ಪಂಚದಶಿ)ಎಂಬಂತೆ ಕಳ್ಳನೊಡನೆ ಅವನು ಕಳ್ಳನೆಂದು ತಿಳಿದು ನಡೆದರೆ ಅವನು ಗೆಳೆಯನಾಗುವನು; ಕಳ್ಳನಾಗುವದಿಲ್ಲ. ಇದರಂತೆ ವಿಷಯಗಳ ಹಣೆಯಬರೆಹವಿಷ್ಟೆಂದು ತಿಳಿದುಕೊಂಡು ಆಮೇಲೆ ಅವುಗಳೊಡನೆ ಎಷ್ಟು ವ್ಯವಹಾರವನ್ನುಮಾಡಿದರೂ ವಿಷಯಗಳ ದುಷ್ಪರಿಣಾಮವು ಮನಸ್ಸಿನ ಮೇಲೆ ಆಗುವದಿಲ್ಲ. ಪುರಾಣಕಾಲದ ಜನಕ, ಅಶ್ವಪತಿ– ಮೊದಲಾದವರೂ ಈ ಕಾಲದ ಎಷ್ಟೋಜನ ಸಾಧುಗಳೂ ಜ್ಞಾನಿಗಳಾಗಿದ್ದೂ ಪ್ರಪಂಚವ್ಯವಹಾರದಲ್ಲಿ ತೊಡಗಿ ಹೆಸರುಗೊಂಡಿರುವದಕ್ಕೆ ನಿದರ್ಶನರಾಗಿರುತ್ತಾರೆ. ಆ ವಿಷಯಗಳ ಹಣೆಯ ಬರಹವನ್ನು ತಿಳಿಸುವ ವಿದ್ಯೆಯೇ ಧಾರ್ಮಿಕಶಿಕ್ಷಣ. ಭೌತಿಕ ವಿದ್ಯೆಯು ವಿಷಯಗಳ ಸ್ಥೂಲರೂಪಗಳನ್ನೂ ಉಪಯೋಗಗಳನ್ನೂ ಪರಿಶೀಲನೆ ಮಾಡುವದೇ ಹೊರತು ಧಾರ್ಮಿಕಶಿಕ್ಷಣದಂತೆ ಅವುಗಳ ಬೆಲೆಯನ್ನೇ ಗೊತ್ತು ಮಾಡಿಬಿಡುವದಕ್ಕೆ ಹೊರಟಿಲ್ಲ. ಈಗಿನ ಕಾಲದಲ್ಲಿ ಧಾರ್ಮಿಕಶಿಕ್ಷಣವು ಪರದೆಯ ಹಿಂದೆ ಉಳಿದಿರುವದರಿಂದ ವ್ಯವಹಾರವು ಹೆಚ್ಚು ತ್ರಾಸದಾಯಕವಾಗಿರುವದು. ಆ ಪರದೆಯನ್ನು ಹಾರಹೊಡೆಯುವದೇ ಈ ಕೀರ್ತನಗಳ ಮುಖ್ಯವಾದ ಉದ್ದೇಶವು. ನಾವೆಯಲ್ಲಿ ಕುಳಿತು ಹೋದರೆ ಎಂಥಸಮುದ್ರದಲ್ಲಿಯೂ ಹೇಗೆ ಭಯವಾಗುವದಿಲ್ಲವೋ ಹಾಗೆ ಧಾರ್ಮಿಕವಿಚಾರಗಳನ್ನು ಮೈಗೂಡಿಸಿಕೊಂಡು ಎಂಥ ಪ್ರಬಲವಾದ ವ್ಯವಹಾರಕ್ಕೆ ಮೈಗೊಟ್ಟರೂ ಅವನಿಗೆ ಭಯವಿರುವದಿಲ್ಲ. ಆದ್ದರಿಂದ ಧಾರ್ಮಿಕಶಿಕ್ಷಣವೆಂದು ಯಾರೂ ಮೂಗುಮುಚ್ಚಿಕೊಳ್ಳಬೇಕಾದ್ದಿಲ್ಲ.

ಈಗ ಪ್ರಚಾರದಲ್ಲಿರುವ ಕೀರ್ತನಗಳ ಪದ್ಧತಿಯನ್ನು ಲಕ್ಷ್ಯದಲ್ಲಿಟ್ಟುಕೊಂಡು ಇವುಗಳಿಂದ ಜನಸಾಮಾನ್ಯಕ್ಕಾಗುವ ಧಾರ್ಮಿಕಶಿಕ್ಷಣದ ಮಹತ್ತ್ವವನ್ನು ನಿರ್ಣಯಿಸಬಾರದು. ಏಕೆಂದರೆ ಈಗಿನ ಕೀರ್ತನಗಳಲ್ಲಿ ಬರೀ ವಿನೋದದ ಭಾಗಗಳು

**ಪದ್ಧತಿ**

ಹೆಚ್ಚಿ ಉಪದೇಶಪದ್ಧತಿಯು ಬಹಳ ಕೊರತೆಯಾಗಿರುವದರಿಂದ ಅದರ ಪರಿಣಾಮದ ಕೊರತೆಯೂ ಬಹಳವಾಗಿಯೇ ಇರುವದು. ಭೌತಿಕಶಿಕ್ಷಣವು ಕೂಡ ಮೊದಮೊದಲು ಅತೃಪ್ತಿಕರವಾಗಿದ್ದರೂ ಈಚೀಚೆಗೆ ಪದ್ಧತಿಗಳನ್ನು ಮೈಗೂಡಿಸುತ್ತ ಬಂದಹಾಗೆಲ್ಲ ಹೆಚ್ಚುಹೆಚ್ಚು ಒಳ್ಳೆ ಪರಿಣಾಮಕಾರಕಗಳಾದವೆಂದು ಹೇಳಿಕೊಳ್ಳುತ್ತಿರುವ ಸ್ಥಿತಿಯು ಈ ಸಾರ್ವಜನಿಕಧಾರ್ಮಿಕಶಿಕ್ಷಣಕ್ಕೂ ಅನ್ವಯಿಸುವದು. ಈ ಧಾರ್ಮಿಕಶಿಕ್ಷಣ

ಕ್ಕೊಂದು ಪದ್ಧತಿಯನ್ನು ಹಾಕಿತೋರಿಸಬೇಕೆಂದು ಪ್ರಯತ್ನಿಸುವಾಗ ಮಹಾರಾಷ್ಟ್ರಭಾಷೆಯಲ್ಲಿರುವ **ತರಂಗಿಣಿ, ಮುಕ್ತಾಹಾರ, ಸುಮನಹಾರ**-ಎಂಬ ಗ್ರಂಥಮಾಲೆಗಳು ನನ್ನ ಕಣ್ಣೆದುರಿಗೆ ಬಂದವು. ಅವುಗಳಲ್ಲಿ **ಔಂಧ (Aundh) ಸಂಸ್ಥಾನದ ಪಂತಪ್ರತಿನಿಧಿ ಶ್ರೀಮಂತ ಬಾಳಾಸಾಹೇಬರು** ಅವರ ತಂದೆಯ ನಿಧನದ ದಿನ ಅವರ ಸ್ಮರಣಾರ್ಥವಾಗಿ ತಾವೇ ಒಂದು ಕೀರ್ತನವನ್ನು ಮಾಡಿ '**ಸುಮನಹಾರ**'ಎಂಬ ಗ್ರಂಥಮಾಲೆಯಾಗಿ ಪ್ರಕಟಿಸುತ್ತಿರುವದರಲ್ಲಿರುವ ಪ್ರತಿಪಾದನೆಯ ಪದ್ಧತಿಯು ನನಗೆ ಹೆಚ್ಚು ರುಚಿಸಿತು. ಅದರ ಜೊತೆಗೆ ಕೀರ್ತನದ ವಿಷಯದಲ್ಲಿ **ಶ್ರೀಸಮರ್ಥರಾಮದಾಸರು** ಹೇಳಿರುವ ಲಕ್ಷಣಗಳನ್ನು ಮನಸ್ಸಿಗೆ ತಂದುಕೊಂಡೆನು. ಅವರು ತಮ್ಮ '**ದಾಸಬೋಧ**'ವೆಂಬ ಗ್ರಂಥದಲ್ಲಿ ಈ ವಿಷಯವಾಗಿ ಬರೆದಿರುವ ಸಾರಸರ್ವಸ್ವವನ್ನು ಇಲ್ಲಿ ನಾನು ರಗಳೆಯ ರೂಪದಲ್ಲಿ ಕೊಡುತ್ತೇನೆ.

ರ|| ಕೀರ್ತನವೃತ್ತಿಯತೀವಪವಿತ್ರ | ಕೀರ್ತನಕಾರನ ಯೋಗ್ಯತೆ ಚಿತ್ರ | ಬಹು ಪುಸ್ತಕಗಳ ನೋದಿರಬೇಕು | ಬಹುಪಾಠವು ಕಂಠದೊಳಿರಬೇಕು | ಜನರಿಗಾಗಿ ಕೀರ್ತಿಸುತಿರಬೇಕು | ತನಗಾದೊಡ ಮಿದ ಬಿಡದಿರಬೇಕು | ಸಗುಣದ ಕಥೆಗಳ ವಿವರಿಸಬೇಕು | ಭಗವತ್ಕೀರ್ತಿಯ ಹಬ್ಬಿಸಬೇಕು | ಧ್ಯೇಯ ಮೂರ್ತಿಗಳ ವರ್ಣಿಸಬೇಕು | ಜ್ಞೇಯತತ್ತ್ವವನು ಸೂಚಿಸಬೇಕು | ಬೇರೆಬೇರೆ ಛಂದಸ್ಸಿರಬೇಕು | ಬೇರೆಯವರ ಪದಪದ್ಯವು ಬೇಕು | ನೀತಿಧರ್ಮ ಗುಣಮಹಿಮಾದಿಗಳು| ಪೂತು ಫಲಿಸಬೇಕಾ ಕಾಲದೊಳು | ಭಾಷೆಯೊಳಿರೆ ಬಲು ಹೆಚ್ಚಿದ ಭಾಗ್ಯ | ವೇಷದೊಳಿರಬೇಕುರೆ ವೈರಾಗ್ಯ | ಕಟ್ಟುಕಥೆಗಳಿತಿಹಾಸದ ಕಥೆಗಳು | ಪುಟ್ಟುಪಕಥೆಯಾಗಿರಬೇಕಿದರೊಳು| ಕರುಣಾರಸವುಕ್ಕೇರಿರೆ ಜೊತೆಗೆ | ಪರಮಾನಂದವೆ ಧ್ಯೇಯವು ಕೊನೆಗೆ | ಹೇಳಹೇಳುತಲಿ ಮೈಹುರಿಯೇರಿ | ಬೀಳಬೇಕು ಪ್ರೇಮಾಶ್ರುವು ಮೀರಿ | ಭೂರಿರಸಾಸ್ವಾದವು ಬರುವಂತೆ | ನೀರಶ್ರೀಭಾಷಣಕಿದು ಸಂತೆ | ಹಾಸ್ಯರಸದಿ ಮುಖವರಳಲು ಬೇಕು | ದೂಷ್ಯವಿಚಾರವ ತರದಿರಬೇಕು | ತುಂಬಿ ತುಳುಕುತಿರೆ ಶಾಸ್ತ್ರಾಧಾರ | ಬಿಂಬಿಸಬೇಕು ವಿವೇಕವಿಚಾರ | ಭಕ್ತಿಭಾವಕಿದು ಬಲುಭಂಡಾರ | ಯುಕ್ತಿವಿಶೇಷಂಗಳಿಗಾಧಾರ | ಭಗವಂತನು ಮೆಚ್ಚುವನಿದರಿಂದ | ಜನರುನ್ನತಿಯಾಗುವುದಿದು ಚೆಂದ ||

ಇಂಥ ವಿಚಾರಗಳನ್ನೇ ಇನ್ನೂ ಸ್ವಲ್ಪಮುಂದೆ ನಡೆಸಿ ಕೀರ್ತನಗಳಿಗೊಂದು ಕಟ್ಟುಪಾಡುಮಾಡಿಕೊಂಡು ಆ ಕಟ್ಟಿನೊಳಗೆ ಎಲ್ಲ ಕೀರ್ತನಗಳನ್ನೂ ಅಡಕ ಮಾಡಿ ಈ ಗ್ರಂಥವನ್ನು ಬರೆದಿದ್ದೇನೆ. ಹೀಗೆ ಉತ್ತಮವಾದ ಪದ್ಧತಿಯನ್ನು ಹಿಡಿದು ಬರೆದ ಕೀರ್ತನಗ್ರಂಥಕ್ಕೆ ಇದೇ ಮೊದಲು. **ಈ ಗ್ರಂಥವು ಜೀವಿಕೆಗಾಗಿ ತಿರುಗುತ್ತಿರುವ ಕೀರ್ತನಕಾರರಿಗೆ ಗೃಹಸ್ಥಶಿಕ್ಷಣದ ಬೋಧನಕ್ರಮವನ್ನು ತಿಳಿಸುವ ಉತ್ತಮವಾದ ಕೈಪಿಡಿಯಾಗಿದ್ದು ಅವರನ್ನು ಅನ್ವರ್ಥನಾಮದ ಸಾರ್ವಜನಿಕಗೃಹಸ್ಥಶಿಕ್ಷಕಮಂಡಲಿಯಾಗಿ ಮಾರ್ಪಡಿಸುವ ಮಹತ್ಕಾರ್ಯವನ್ನು ಮಾಡುವದು.**

ಈಗಿನ ಕಾಲದಲ್ಲಿ ಎಲ್ಲವಿದ್ಯಾರ್ಥಿಗಳಿಗೂ ನಿರ್ಬಂಧದ ಶಿಕ್ಷಣವೂ ಕೂಡಏರ್ಪಟ್ಟು ಸರ್ವಶಾಸ್ತ್ರಜ್ಞಾನಗಳ ಸೂರೆಯಾಗುತ್ತಿರುವಾಗ ಸಮುದ್ರದ ಮುಂದೆ ಅರವಂಟಿಗೆಯನ್ನು ಹೊಗಳಿದಂತೆ ಕೀರ್ತನವನ್ನು ಇದೊಂದು ಬೇರೆ ಸಾರ್ವಜನಿಕಶಿಕ್ಷಣರೂಪವೆಂದು ಹೇಳುವದು ಹೇಗೆ ಒಪ್ಪುವದೆಂದು ಕೆಲವರಿಗೆ ಸಂಶಯ ತೋರಬಹುದು. ಈ ಶಿಕ್ಷಣವು ಆ ಶಿಕ್ಷಣಧಿಂದ ಸಾಧ್ಯವಾಗದಿರುವಂಥ ಮಹತ್ಕಾರ್ಯವನ್ನು ಸಾಧಿಸುವ ಸಾಮರ್ಥ್ಯವುಳ್ಳದ್ದಾಗಿರುವದರಿಂದ ಇದರ ಪ್ರತಿಭೆಯು ಅದರ ಪ್ರಭಾವವನ್ನು ಸೂರ್ಯಪ್ರಕಾಶದ ನಡುವಣ ದೀಪದಂತೆ ಮಾಡುವಷ್ಟು ಮಹತ್ತ್ವವುಳ್ಳದ್ದೆಂದು ತೋರಿಸಬಹುದಾಗಿರುವದು. ಅದು ಹೇಗೆಂದರೆ–ಶಿಕ್ಷಣಶಾಲೆಗಳಲ್ಲಿ ದೊರೆಯುವ ಶಾಸ್ತ್ರಜ್ಞಾನಗಳೆಲ್ಲ ಕತ್ತಲೆಯಲ್ಲಿ ಹಚ್ಚಿದ ದೀಪದಂತೆ ಅಜ್ಞಾನಿಗಳ ಮೆದುಳಿನಲ್ಲಿ ಹಚ್ಚಿದ ದೀಪಗಳಾಗಿರುವವು. ಅದು ತನ್ನ ಬೆಳಕಿನಿಂದ ವಿದ್ಯುಚ್ಛಕ್ತಿಯ ದೀಪವನ್ನು ಕೂಡ ಹಿಂದಕ್ಕೆ ಹಾಕುವಂತೆ ಎಷ್ಟೇ ಝುಗಝುಗಿಸಿದರೂ ಬರೀ ಅದು ಆರೋಗ್ಯಕರವಲ್ಲ. ಮನುಷ್ಯನ ಆರೋಗ್ಯಕ್ಕೆ ಸೂರ್ಯನ ಬೆಳಕು ಬೇಕು. ಹೃದಯದಲ್ಲಿ ಆಗುವ ಬೆಳಕೇ ಸೂರ್ಯ. ಎಲ್ಲಿಯವರೆಗೆ ಶಿಕ್ಷಣವು ವಿದ್ಯಾರ್ಥಿಯ ಹೃದಯವನ್ನು ವಿಕಾಸಗೊಳಿಸುವದಿಲ್ಲವೊ ಅಲ್ಲಿಯವರೆಗೂ ಅವನ ಬುದ್ಧಿಯೆಂಬ ಶಸ್ತ್ರದ ಧಾರೆಯನ್ನು ಎಷ್ಟು ತೀಕ್ಷ್ಣವಾಗಿಮಾಡಿದರೂ ಅದು ಅವನಿಗೆ ಅಭಯವನ್ನು ಕೊಡಲಾರದು. ಜಗತ್ತಿನಲ್ಲಿ ಒಬ್ಬರಿಗೊಬ್ಬರು ಮಾಡುವ ಹಾನಿಯ ಹೋರಾಟಗಳೆಲ್ಲ ಸಮುದ್ರದ ಉಪ್ಪುನೀರಿನಿಂದಾಗುವ ಬಾಯಾರಿಕೆಯ ಪರಿಣಾಮದಂತೆ ಈ ಬುದ್ಧಿಯೆಂಬ ಶಸ್ತ್ರದ ಧಾರೆಯ ತೀಕ್ಷ್ಣತೆಯ ಪರಿಣಾಮವು. ಅಲ್ಲಲ್ಲಿ ನಡುವೆ ಎಲ್ಲಿಯಾದರೂ ತಲೆದೋರುವ ಶಾಂತಿಯ ವೃತ್ತಿಗಳೆಲ್ಲ ಅರವಂಟಿಗೆಯ ಸಿಹಿನೀರಿನಿಂದಾಗುವ ದಾಹಶಾಂತಿಯ ಪರಿಣಾಮದಂತೆ ಹೃದಯವಿಕಾಸದ ಪರಿಣಾಮವು. ಮನುಷ್ಯಶರೀರದಲ್ಲಿ ಮೆದುಳು, ಹೃದಯ–ಎಂಬೆರಡೂ ಸಮಪ್ರಮಾಣದಿಂದ ಮುಖ್ಯವಾದ ಅವಯವಗಳೆ. ಆದ್ದರಿಂದ ಅವೆರಡರ ಶಿಕ್ಷಣಕ್ಕೂ ಸಮಾನವಾದ ಬೆಲೆಯೇ ಉಂಟು. ಆದರೆ ಜನತೆಯ ನೆಮ್ಮದಿಯು ಬಹುಮಟ್ಟಿಗೆ ಹೃದಯದ ಶಿಕ್ಷಣವನ್ನವಲಂಬಿಸಿಕೊಂಡಿರುವದರಿಂದ **ಒಂದು ಪಕ್ಷ ಬುದ್ಧಿಯ ಶಿಕ್ಷಣದಲ್ಲಿ ಏನಾದರೂ ಸಂಕೋಚ ಉಂಟಾದರೂ ಸಾಗಬಹುದೇ ಹೊರತು ಹೃದಯದ ಶಿಕ್ಷಣದಲ್ಲಿ ಕೊರತೆಯಾದರೆ ಕಷ್ಟವು ತಪ್ಪುವದಿಲ್ಲ.** ಶಿಕ್ಷಣಶಾಲೆಗಳ ಶಿಕ್ಷಣವು ಈ ಭಾಗದಲ್ಲಿ ಉಪೇಕ್ಷೆಯನ್ನು ವಹಿಸಿರುವದರಿಂದ ಇದಕ್ಕೊಬ್ಬರು ದೀಕ್ಷೆಯನ್ನು ವಹಿಸಿದವರು ಬೇಕಾಯಿತು. ಕೀರ್ತನಗಳು ಈ ಕೆಲಸ

**ಧಾರ್ಮಿಕಶಿಕ್ಷಣದ ಮಹತ್ತ್ವ**

ವನ್ನು ಮಾಡುವವು. ಆದ್ದರಿಂದ ಇದಕ್ಕೆ ಸಾರ್ವಜನಿಕಶಿಕ್ಷಣರೂಪವೆನ್ನುವ ಮಾತು ಚೆನ್ನಾಗಿ ಒಪ್ಪುವದು.

**ದೇಶಭಾಷೆಯ ಪ್ರಾಚೀನಭಂಡಾರದ ಉಪಯೋಗ**

ಕೀರ್ತನಗಳು ಸಾರ್ವಜನಿಕಧಾರ್ಮಿಕಶಿಕ್ಷಣಸಂಸ್ಥೆಗಳು. ಆದ್ದರಿಂದ ಧರ್ಮವಿಚಾರವನ್ನು ಪ್ರಸಾರಮಾಡುವದಕ್ಕಾಗಿ ಹೆಣಗಿರುವ ನಮ್ಮ ದೇಶದ ಎಲ್ಲ ಪಂಗಡದ ಗ್ರಂಥಕರ್ತರ ದೇಶಭಾಷೆಯ ಉಕ್ತಿಗಳಿಗೂ ಇದರಲ್ಲಿ ಪ್ರಾಶಸ್ತ್ಯವಿರಬೇಕು. ನಾವು ಯಾವಾಗಲೂ ಬರೀ ನಮ್ಮ ಮಾತನ್ನೇ ಹೇಳುವದಕ್ಕಿಂತಲೂ ಪೂಜ್ಯತೆಯನ್ನು ಪಡೆದಿರುವ ಹಿಂದಿನವರ ಮಾತುಗಳನ್ನು ಮುಂದುಮಾಡಿದರೆ ಮೊದಲೇ ವಿಶ್ವಾಸಕ್ಕೆ ಪಾತ್ರರಾಗಿರುವಂಥ ಅವರ ಉಜ್ಜ್ವಲವಾದ ಅಭಿಪ್ರಾಯಗಳು ಜನಮಂಡಲಿಯ ಮೇಲೆ ಪರಿಣಾಮವನ್ನುಂಟುಮಾಡುತ್ತವೆ. ಯಾವ ಕೀರ್ತನವೂ ಬರೀ ಯಾವದೋ ಒಂದು ಪಂಗಡದ ಪದಪದ್ಯಗಳ ಮೇಲೆ ನಿಲ್ಲಬಾರದು. ನಮ್ಮ ಕನ್ನಡನಾಡಿನ ಏಕೀಕರಣವಾಗುವಂತೆ ಎಲ್ಲ ಪಂಥದವರ ಪದಪದ್ಯಗಳಿಗೂ ಕೀರ್ತನಕಾರರು ಶುಭಾಗಮನವನ್ನು ಬಯಸಬೇಕು. ಆದರೆ ಅರ್ಥಗಾಂಭೀರ್ಯವಿಲ್ಲದ ಮತ್ತು ಪರನಿಂದೆಗಳಿರುವ ಪದಪದ್ಯಗಳು ಕೀರ್ತನಕಾರನ ಪಂಥದವರದಾಗಿಯೇ ಇದ್ದರೂ ಕೂಡ ಬಿಡತಕ್ಕವುಗಳೆ. ಪದಗಳನ್ನು ಮಾಡಿರುವ ದಾಸರುಗಳಲ್ಲದೆ ಪದ್ಯಗಳನ್ನು ಮಾಡಿರುವ ಕವಿಗಳೂ ಧರ್ಮಪ್ರಚಾರಕ್ಕೆ ಬೇಕಾದಷ್ಟು ನೆರವಾಗಿರುವದರಿಂದ ಅವರಲ್ಲಿ ಯಾರನ್ನೂ ಮೂಲೆಗೆ ಕೂಡಿಸುವದು ಯೋಗ್ಯವಲ್ಲ. ಹೀಗೆ ಪ್ರತಿಯೊಂದು ಕೀರ್ತನದಲ್ಲಿಯೂ ಅನೇಕ ಕವಿಗಳ ಉಕ್ತಿಗಳು ಬಂದರೆ ಬೇರೆ ಬೇರೆ ಪಾಕಗಳಲ್ಲಿರುವ ಮತ್ತು ಬೇರೆ ಬೇರೆ ಛಂದಸ್ಸಿನಲ್ಲಿರುವ ಕವಿತೆಗಳು ಮನಸ್ಸಿಗೆ ಕ್ಷಣಕ್ಕೊಂದೊಂದು ಹೊಸರುಚಿಯನ್ನುಂಟುಮಾಡಿ ಬಾಯಿನೀರು ಕರೆಸುವದಕ್ಕೆ ಸಮರ್ಥವಾಗುವವು. ಮುಖ್ಯವಾಗಿ **ಕೀರ್ತನವು ಪ್ರಸಿದ್ಧ ಪ್ರಾಚೀನಕವಿಗಳ ಕವಿತಾವೈಭವದೊಂದು ಪ್ರದರ್ಶನಶಾಲೆಯಾಗಬೇಕು.** ಇದರಿಂದ ಧಾರ್ಮಿಕಶಿಕ್ಷಣಕ್ಕೆ ಉತ್ತೇಜನವಾಗುವದೊಂದೇ ಅಲ್ಲ. ಕನ್ನಡದಲ್ಲಿ ಎಂಥೆಂಥ ರಮ್ಯವಾದ ಗ್ರಂಥರಾಶಿ ಇರುವದೆಂಬುದರ ಕಡೆಗೆ ಜನರ ದೃಷ್ಟಿಯು ಹರಿದು ಮುಂದೆ ಅವರು ತಾವಾಗಿ ಅದರ ಅಧ್ಯಯನಕ್ಕೆ ಮುಂದುವರಿದು ಅದರ ರಸಾಸ್ವಾದವನ್ನು ಮಾಡುವದಕ್ಕೆ ದಾರಿಯಾಗುವದರಿಂದ ದೇಶಭಾಷೆಯ ಗ್ರಂಥಗಳನ್ನೆಲ್ಲ ಉಜ್ಜೀವನಗೊಳಿಸಿದಂತಾಗುತ್ತದೆ. ಇಷ್ಟಾದರೆ ಎಷ್ಟೋ ಮಹತ್ವದ ಕಾರ್ಯವಾದಂತಾಗುವದು.

ಕೀರ್ತನವೆಲ್ಲ ದೇಶಭಾಷೆಯಲ್ಲಿಯೇ ಮೊದಲಿಂದ ಕೊನೆಯವರೆಗೂ ನಡೆಯಬಹುದಾದರೂ ನಾವು ಸಂಸ್ಕೃತಭಾಷೆಗೆ ತಕ್ಕಷ್ಟು ಪ್ರಾಶಸ್ತ್ಯವನ್ನು

ಕೊಡುವದನ್ನು ಮರೆಯಬಾರದು. ಏಕೆಂದರೆ ನಮ್ಮ ಮೂಲಧರ್ಮಗ್ರಂಥಗಳೆಲ್ಲ ಸಂಸ್ಕೃತದಲ್ಲಿಯೇ ಇರುವದರಿಂದ ನಾವೆಲ್ಲರೂ ನಿಜವಾಗಿ ಸಂಸ್ಕೃತದಲ್ಲಿ ಪಾಂಡಿತ್ಯವನ್ನೆ ಪಡೆಯಬೇಕಾದ ಅಗತ್ಯವಾಗಿರುವಾಗ ಅದರ ಪರಿಚಯವನ್ನೆ ಉಪೇಕ್ಷೆಮಾಡುವದು ಯಾವ ನ್ಯಾಯ? ಆದ್ದರಿಂದ ನಡುನಡುವೆ ಅರ್ಥಗಾಂಭೀರ್ಯವುಳ್ಳ ಮತ್ತು ಚಮತ್ಕಾರವಾದ ಸಂಸ್ಕೃತಶ್ಲೋಕಗಳಿಂದ ಕೀರ್ತನವು ಭೂಷಣಗೊಳ್ಳಲೇ ಬೇಕು. ಜಗತ್ತಿನಲ್ಲಿರುವ ಭಾಷೆಗಳಲ್ಲೆಲ್ಲ ಪೂರ್ಣಭಾಷೆಯೆನಿಸಿರುವ ಸಂಸ್ಕೃತವೆಂಬ ಸಮುದ್ರದಲ್ಲಿ ಮುಳುಗಿ ಪಾಶ್ಚಾತ್ಯರು ಕೂಡ ನವನಿಧಿಗಳನ್ನು ಪಡೆಯುತ್ತಿರುವಾಗ ನಮ್ಮ ದೇಶದಲ್ಲಿ ನಾವೇ ಅದಕ್ಕೆ ಮುಸುಕು ಹಾಕಿ ಕೂಡಿಸುವದು ಹೇಗೆ ಒಪ್ಪೀತು? **ಸಂಸ್ಕೃತಭಾಷಾವೈಭವದಿಂದಲೇ ನಮ್ಮ ದೇಶಕ್ಕೆ ಪ್ರಾಶಸ್ತ್ಯವಾದ್ದರಿಂದ ನಾವು ಅದನ್ನು ಸಮಯಾನುಸಾರವಾಗಿ ಎತ್ತಿ ಹಿಡಿಯಲೇ ಬೇಕು.** ಇದರಿಂದ ಆ ಭಾಷೆಯ ಅಧ್ಯಯನಕ್ಕೆ ಜನರ ಮನಸ್ಸು ಒಲಿಯುವಂತೆ ಕೂಡ ಆಗಬೇಕು.

ಸಂಸ್ಕೃತದ ಅಗತ್ಯ

ಒಂದು ಭಾಷೆಯ ಕೀರ್ತನದಲ್ಲಿ ಪರಭಾಷೆಗಳನ್ನು ತಂದು ಸೇರಿಸುವ ವಿಷಯವೂ ವಿಚಾರಾಸ್ಪದವಾಗಿದೆ. ಶಿಕ್ಷಣವನ್ನು ಎಲ್ಲರಿಗೂ ಹಂಚುವದಕ್ಕಾಗಿ ಆಯಾ ದೇಶಭಾಷೆಗಂತು ಕೀರ್ತನದಲ್ಲಿ ಮೊದಲಿಂದ ಕೊನೆಯವರೆಗೂ ಪ್ರಾಶಸ್ತ್ಯವು ಇದ್ದೇ ಇರಬೇಕು. ಭರತಖಂಡದ ಎಲ್ಲ ದೇಶಭಾಷೆಗಳ ಮಾತೃಭಾಷೆಯೆಂಬ ಮತ್ತು ನಮ್ಮ ಎಲ್ಲ ಧರ್ಮಗ್ರಂಥಗಳ ಭಂಡಾರವೆಂಬ ದೃಷ್ಟಿಯಿಂದ ಸಂಸ್ಕೃತಕ್ಕೂ ಅಲ್ಲಲ್ಲಿ ಅವಕಾಶವು ದೊರೆಯಬೇಕು. ಮರಾಠಿ, ಹಿಂದಿ—ಮೊದಲಾದ ಭಾಷೆಗಳ ಅವಶ್ಯಕತೆ ಅಷ್ಟೇನೂ ಇಲ್ಲ. ಪರಭಾಷೆಗಳ ಸುಭಾಷಿತಗಳನ್ನು ಉಪಯೋಗಿಸುವದರಿಂದ ಹಾನಿಯೇನೂ ಇಲ್ಲ. ಇದರಿಂದ ಕೀರ್ತನಕಾರರಿಗೆ ಅನೇಕ ಭಾಷೆಗಳ ಜ್ಞಾನ ಉಂಟೆಂಬ ಒರೀ ಹೆಸರುವಾಸಿಯು ಮಾತ್ರ ಫಲವಾಗುವದು. ಆದ್ದರಿಂದ ಇದಕ್ಕಾಗಿ ಇವುಗಳನ್ನು ಪ್ರಯಾಸಪಟ್ಟು ಸಂಪಾದಿಸುವದು ಅಪೇಕ್ಷಣೀಯವಲ್ಲ. ಆದರೆ ಅವು ವಾಕ್ಪ್ರವಾಹದಲ್ಲಿ ಅನಾಯಾಸವಾಗಿ ಬಂದರೆ ಬರಬಹುದು. ಬೇರೆಬೇರೆ ಭಾಷೆಗಳನ್ನಾಡುತ್ತಿದ್ದ ಸಾಧುಗಳ ಕಥೆಗಳನ್ನು ಪ್ರತಿಪಾದಿಸುವಾಗ ಅವರವರು ಆಯಾ ಭಾಷೆಗಳಲ್ಲಿ ಮಾಡಿರುವ ಉಪದೇಶಗಳನ್ನೆ ಹೇಳಿ ಅದರ ಅರ್ಥವನ್ನು ಸ್ವಭಾಷೆಯಲ್ಲಿ ಪ್ರತಿಪಾದಿಸುವದು ಶ್ರೇಯಸ್ಕರವೇ ಆಗಿರುವದು. ಅಂತು **ಕೀರ್ತನರಂಗವು**

ಪರಭಾಷೆಗಳ ಉಪಯೋಗ

**ಕೇವಲ ಪಂಚಭಾಷೆಯು ಬಾಲಲೀಲೆಯು ಅಂಗಳವಾಗಬಾರದೆಂಬದರ** ಕಡೆಗೆ ಕೀರ್ತನಕಾರರ ಲಕ್ಷ್ಯವಿರಬೇಕು.

ಕೀರ್ತನದಲ್ಲಿ ಕಥೆಯಂತು ಮುಖ್ಯವಾಗಿರುವದಷ್ಟೆ. ಬರೀಕಥೆಯ ಪ್ರತಿಪಾದನೆಯ ಮಾತ್ರದಿಂದ ಕೀರ್ತನವು ಸಾಂಗವಾಗುವುದಿಲ್ಲ. ಪುರಾಣಗಳ ಉದ್ದೇಶವು ಪ್ರತಿಯೊಂದು ಕಥೆಯಲ್ಲಿಯೂ ಧರ್ಮನೀತಿಗಳನ್ನು ಕಳೆಗಟ್ಟಿಸಿ ತೋರಿಸುವದೇ ಹೊರತು ಬರೀ ಕಥೆಗಳನ್ನು ತಿಳಿಸುವದಲ್ಲವೇ ಅಲ್ಲ. ಪ್ರತಿಯೊಂದು ಕಥೆಗೂ ಪೀಠಿಕೆಯೆಂಬದೊಂದು ಭಾಗವು ರೂಢಿಯಲ್ಲಿದ್ದು ಅದರಲ್ಲಿ ಕೀರ್ತನಕಾರರು ಏನಾದರೂ ಧಾರ್ಮಿಕವಿಚಾರಗಳನ್ನು ಸಮಾವೇಶ ಮಾಡಿಸುವರಷ್ಟೆ! ಅವು ಅಂತು ಇಂತು ಧಾರ್ಮಿಕವಿಚಾರಗಳೆನಿಸಿದರೆ ಉಪಯೋಗವಿಲ್ಲ. **ಪೀಠಿಕೆಯಲ್ಲಿ ಆ ಕಥೆಗೆ ಸಂಬಂಧಪಟ್ಟೇ ಇರುವ ಧರ್ಮನೀತಿಗಳ ಹೆಚ್ಚುಗಟ್ಟಲೆಯ ವಿವರಣೆಯು ಇರಬೇಕು.** ಮತ್ತು ಕಥೆಯಲ್ಲಿ ಆ ಧರ್ಮನೀತಿಗಳ ಉದಾಹರಣೆಯು ಎದ್ದು ಕಾಣುವಾಗ ಪೀಠಿಕೆಯ ಉಪದೇಶದ ನೆನಪು ಕೊಡಬೇಕು. ಇದರಿಂದ ಪೀಠಿಕೆಗೂ ಕಥೆಗೂ ಇರುವ ಸಂಬಂಧವು ಎಲ್ಲರ ಹೃದಯದಲ್ಲಿಯೂ ಒಡೆದು ಮೂಡುವದು. ಹೀಗೆ ಮಾಡದೆ ಇದ್ದರೆ ಪೀಠಿಕೆಯು ಕಥೆಗೆ ಸಂಬಂಧಪಡದ ಏನೋ ಒಂದು ಅಧಿಕಪ್ರಸಂಗವಾಗಿ ಪರಿಣಮಿಸುವದು. ಕೆಲವರು ಸಿದ್ಧಾಂತದ ಪ್ರತಿಪಾದನೆಗೂ ಕೀರ್ತನದ ಪೀಠಿಕೆಯನ್ನು ಉಪಯೋಗ ಮಾಡುವರು. **ಸಿದ್ಧಾಂತಗಳಿಗೆ ಕೀರ್ತನವು ತಕ್ಕಸ್ಥಲವಲ್ಲ.** ಸಿದ್ಧಾಂತವನ್ನು ಗ್ರಹಣಮಾಡುವದಕ್ಕೆ ತಕ್ಕ ಸಾಧನಚತುಷ್ಟಯಸಂಪತ್ತನ್ನುಂಟುಮಾಡಿಕೊಟ್ಟರೆ ಅಷ್ಟೇ ಇಲ್ಲಿಗೆ ಸಾಕಾಗಿದೆ. ಆಮೇಲೆ ಅವರು ತಮ್ಮ ತಮ್ಮ ಪಂಥದ ಸಿದ್ಧಾಂತವನ್ನು ತಾವು ಬೇರೆ ಬೇರೆ ತಮ್ಮ ಗುರುಗಳಿಂದ ತಿಳಿದುಕೊಳ್ಳಬಹುದು. ಕೀರ್ತನದಲ್ಲಿ ಪ್ರತಿಪಾದನೆ ಮಾಡುವ ಧರ್ಮನೀತಿಗಳನ್ನು ಸಿದ್ಧಾಂತವಿಚಾರಗಳಿಗಿಂತ ಕಡಿಮೆಯವೆಂದು ತಿಳಿಯಬಾರದು. ಭಗವದ್ಗೀತೆಯು ಅಮಾನಿತ್ವ ಮೊದಲಾದ ಧರ್ಮನೀತಿಗಳನ್ನು ಜ್ಞಾನವೆಂದೇ ಕರೆದಿರುತ್ತದೆ. ಸಾರ್ವಜನಿಕವಾದ ಉಪದೇಶಕ್ಕೆ ಇದೇ ಹೊಂದತಕ್ಕದ್ದಾಗಿದೆ. ಈ ಜ್ಞಾನದ ತಳಹದಿ ಇಲ್ಲದವರ ಮುಂದೆ ಕೆಲವು ಗೂಢತತ್ತ್ವಗಳ ಮಾತು ತೆಗೆದರೆ ಅದು "**ಸಂತೆಯಲಿ ತತ್ತ್ವವನು ಜನರಿಗೆ ಸಂತಸದಿ ಪೇಳ್ವಾತ ಮೂರ್ಖನು**" ಎಂಬ ಮಾತನ್ನು ನೆನಪಿಗೆ ತಂದು ಕೊಡುವಂಥದ್ದಾಗಿರುತ್ತದೆ. ಆದ್ದರಿಂದ ಪೀಠಿಕೆಯನ್ನು ಜ್ಞಾನಸಾಧನವಾದಂಥ ಸರ್ವಜನಗ್ರಾಹ್ಯವಾದಂಥ ಭಕ್ತಿಯ ಪ್ರತಿಪಾದನೆಯಲ್ಲಿ ಮುಗಿಸಬೇಕು.

**ಇದರಲ್ಲಿ ನಾನು ಮಾಡಿರುವ ಕೆಲಸ**

ಇಷ್ಟೆಲ್ಲ ವಿಚಾರಗಳಿಗೂ ಮೂರ್ತಸ್ವರೂಪವನ್ನು ತಂದುಕೊಡಬೇಕೆಂದು ನನಗೊಂದು ಸಂಕಲ್ಪವುಂಟಾಯಿತು. ಇದಕ್ಕೆ ಮೊದಲೇ ನಾನು '**ಭಕ್ತಬಂಧು**' ಗ್ರಂಥಮಾಲೆಯಲ್ಲಿ ಇದೇ ಪದ್ಧತಿಯಲ್ಲಿಯೇ ಕೆಲವು ಕೀರ್ತನಗಳನ್ನು ಪ್ರಕಟಿಸಿದ್ದೆನು. ನಮ್ಮ ಕನ್ನಡಿಗರು ಅವುಗಳಿಗೆಲ್ಲ ಉದಾರಾಶ್ರಯವನ್ನೇ ಕೊಟ್ಟಿದ್ದರು. ಆ ಭರವಸೆಯ ಮೇಲೆಯೇ ಈಗ ಈ ಗ್ರಂಥಕ್ಕೂ ಕೈಹಾಕಿರುವೆನು. ಕೀರ್ತನದ ಕಥೆಗಳು ಪೌರಾಣಿಕವಾಗಿಯೂ ಸಾಧುಗಳದಾಗಿಯೂ ಮತ್ತು ಐತಿಹಾಸಿಕವಾಗಿಯೂ ಅನೇಕವಿರುವವಾದರೂ ಈ ಕಾಲದಲ್ಲಿ ಎಲ್ಲೆಲ್ಲಿಯೂ ಶ್ರೀರಾಮನವರಾತ್ರಿಗಳು ಹೆಚ್ಚಾಗಿ ನಡೆಯುತ್ತಿರುವದರಿಂದ ಆ ಹತ್ತು ದಿವಸಗಳಲ್ಲಿ ರಾಮಾಯಣವೆಲ್ಲ ಮುಗಿಯುವಂತೆ ಹತ್ತು ಕಥೆಗಳಲ್ಲಿ ಇದರಲ್ಲಿ ರಾಮಾಯಣವನ್ನೆಲ್ಲ ಮುಗಿಸಿರುವೆನು. ಇದರಂತೆ ಭಾರತಭಾಗವತಗಳ, ಕೆಲವು ಉಪಾಖ್ಯಾನಗಳ ಮತ್ತು ಸಾಧುಗಳ ಕಥೆಗಳನ್ನು ರಚಿಸಬೇಕೆಂದು ಯೋಚನೆ ಇದೆ. ಇದರಲ್ಲಿರುವ ಕೀರ್ತನಗಳನ್ನು ಓದಿ ಮತ್ತು ಮಾಡಿ ಕೀರ್ತನಕಾರರಾಗಲಿ ಬೇರೆ ಯಾರಾಗಲಿ ದಯಮಾಡಿ ನನಗೆ ಏನಾದರೂ ತಿದ್ದುಪಾಡುಗಳನ್ನು ಸೂಚನೆಮಾಡಿದರೆ ಆಗತ್ಯವಾಗಿ ಅವುಗಳನ್ನು ತಲೆಯ ಮೇಲೆ ಹೊತ್ತುಕೊಳ್ಳುತ್ತೇನೆ. ಹಿಂದೆ ಮಾಡಿದ ನನ್ನ ಗ್ರಂಥಗಳಲ್ಲಿ ನಾನು ನನ್ನ ವಿವರಣೆಯನ್ನು ಹೆಚ್ಚಾಗಿ ಉಪಯೋಗಿಸಿದ್ದೆನು. ಹಾಗೆ ಮಾಡಿದರೆ ಗ್ರಂಥವು ಅತಿವಿಸ್ತಾರವಾಗುವದೆಂದೂ ಮತ್ತು ಅಂಥ ವಿಚಾರಗಳನ್ನೆಲ್ಲ ಕೀರ್ತನಕಾರರು ಪ್ರತ್ಯೇಕವಾಗಿ ತಾವೇ ಓದಿ ಅರಗಿಸಿಕೊಂಡು ಕೀರ್ತನರಂಗದಲ್ಲಿ ಅದನ್ನು ಸಮಯಕ್ಕೆ ತಕ್ಕ ರೂಪಕ್ಕೆ ಎರಕ ವನ್ನು ಹೊಯ್ದುಹೊರತು ಆ ಪ್ರತಿಪಾದನೆಯು ಸರಸವಾಗುವದಿಲ್ಲವೆಂದೂ ಯೋಚಿಸಿ ಇದರಲ್ಲಿ ಅಂಥ ವಿವರಣೆಯನ್ನೆಲ್ಲ ಕಡಿಮೆಮಾಡಿದ್ದೇನೆ. **ಧರ್ಮನೀತಿಗಳ ವಿಚಾರವಿಶೇಷಗಳ ಪದಪದ್ಯಗಳನ್ನು ಜೈನರು, ವೀರಶೈವರು, ಬ್ರಾಹ್ಮಣರು—ಈ ಎಲ್ಲರ ಗ್ರಂಥಗಳಿಂದಲೂ ಕೃತಜ್ಞತಾಪೂರ್ವಕವಾಗಿ ಆರಿಸಿ ಜೋಡಿಸಿದ್ದೇನೆ.** ಹೀಗೆ ಆರಿಸಿದ್ದು ಒಂದು ಕಡೆಯದು ಬಹು ಕಡೆ ಬರದಂತೆಯೂ ಲಕ್ಷ್ಯವನ್ನು ಕೊಟ್ಟಿರುತ್ತೇನೆ. ನಮ್ಮ ಪ್ರಾಚೀನಕವಿಗಳ ಬುದ್ಧಿವೈಭವದ ಬೆಳಕು ಚೆನ್ನಾಗಿ ಬೀಳುವಂತೆ ಎಲ್ಲ ದಿಕ್ಕುಗಳಿಂದಲೂ ಆರಿಸಿರುವ ಈ ಪದಪದ್ಯಗಳ ಜೋಡಣೆಯು ಶ್ರೋತೃಗಳಿಗೆ ನವರಸಗಳ ಮೇಲೋಗರದಂತೆ ಅಥವಾ ಜೇನತುಪ್ಪದಂತೆ ಪರಿಣಮಿಸೀತೆಂದು ನಿರೀಕ್ಷಿಸುತ್ತೇನೆ. ನಡುನಡುವೆ ಸಂಸ್ಕೃತಶ್ಲೋಕಗಳನ್ನು ಭೂಷಣಗೊಳಿಸಿ ಅವುಗಳಿಗೆ ಅರ್ಥವನ್ನೂ ಬರೆದಿದ್ದೇನೆ. ಹೀಗೆ ಆರಿಸಿದ ಪದಪದ್ಯಗಳ ಮುಂದೆ ಅವುಗಳ ಮೂಲಗ್ರಂಥಗಳನ್ನು ಸೂಚಿಸುವ ಸಂಜ್ಞೆಯನ್ನು ಕೊಟ್ಟು ಪುಸ್ತಕದ ಆದಿಯಲ್ಲಿ ಆ ಸಂಜ್ಞೆ

ಗಳ ವಿವರಣೆಯುನ್ನು ಬರೆದಿದ್ದೇನೆ. ಒಂದು ಗೊತ್ತಾದ ಗ್ರಂಥದಲ್ಲಿ ಮಾತ್ರ ಇಲ್ಲದೆ ಅನೇಕ ಕಡೆ ದೊರೆಯುವ ಅಥವಾ ಅವುಗಳ ಕರ್ತರ ಹೆಸರನ್ನು ನಿರ್ಣಯಿಸಿಕೊಡುವದು ಕೂಡ ಕಷ್ಟವಾಗಿ ಕಂಡುಬಂದ ಸಂದರ್ಭದಲ್ಲಿ ಆ ಪದಗಳನ್ನು ಸಾಮಾನ್ಯವಾಗಿ ದಾಸರಪದಗಳೆಂದು ಕರೆದು '(ದಾ)' ಎಂಬ ಸಂಜ್ಞೆಯುನ್ನು ಕೊಟ್ಟಿರುತ್ತೇನೆ. ಕವಿಯ ಹೆಸರು ನನಗೆ ನಿರ್ಣಯವಾಗಿ ಗೊತ್ತಾಗದೆ ಇರುವ ಪದ್ಯಗಳನ್ನೆಲ್ಲ ಸುಭಾಷಿತಗಳೆಂದು ಕರೆದು '(ಸು)' ಎಂಬ ಸಂಜ್ಞೆಯುನ್ನು ಕೊಟ್ಟಿರುತ್ತೇನೆ. ಯಾವ ಸಂಜ್ಞೆಯೂ ಇಲ್ಲದಿರುವ ಪದಪದ್ಯಗಳು ಮಾತ್ರ ನಾನು ಆಯಾ ಸಮಯಕ್ಕೆ ತಕ್ಕಂತೆ ರಚಿಸಿದವುಗಳೆಂದು ತಿಳಿಯಬೇಕು. ಆರಿಸಿರುವ ಕನ್ನಡದ ಪದಪದ್ಯಗಳಲ್ಲಿ ಸ್ವಲ್ಪಸ್ವಲ್ಪ ಹಳಗನ್ನಡದ ಮಿಶ್ರಣವೂ ಇರಬಹುದು. ಕೀರ್ತನಕಾರರು ಮರಾಠಿ, ಹಿಂದಿ—ಮೊದಲಾದ ಪರಭಾಷೆಗಳನ್ನು ಪಯೋಗಿಸಿದರೂ ಸಾಗುತ್ತಿರುವಾಗ ಹಳಗನ್ನಡದ ನೋಂಕಿರುವದೇನೂ ಅಶಾಸ್ತ್ರ್ಯವಾಗಲಾರದೆಂದು ತಿಳಿಯುತ್ತೇನೆ. ಅಗತ್ಯವೆಂದು ತೋರಿದ ಕಡೆ ಅವುಗಳಿಗೆ ಅರ್ಥವನ್ನೂ ಕೊಟ್ಟಿದ್ದೇನೆ. ಇಲ್ಲಿರುವ ನನ್ನ ಆರಿಸುವಿಕೆಯೆಲ್ಲ ದಿಕ್ಪ್ರದರ್ಶನಾರ್ಥವೆಂದು ತಿಳಿದು ಕೀರ್ತನಕಾರರು ತಾವು ಬೇರೆಬೇರೆ ಆರಿಸಿಕೊಳ್ಳುವ ಯತ್ನವನ್ನೂ ಮಾಡಬೇಕು. ಅನೇಕ ಕೀರ್ತನಗಳಿಗಾಗಿ ವಿಷಯವನ್ನು ಆರಿಸುವಾಗ ಆಯಾ ಕೀರ್ತನದ ಪಾಲಿಗೆ ಒಪ್ಪತಕ್ಕವುಗಳನ್ನೆಲ್ಲ ಅಲ್ಲಲ್ಲಿಗೆ ಹೊಂದಿಸಿ ಸೇರಿಸುತ್ತ ಬಂದಿರುತ್ತೇನೆ. ಇದರಿಂದ ಕೀರ್ತನಗಳಲ್ಲಿ ಕೆಲವು ಚಿಕ್ಕವಾಗಿಯೂ ಕೆಲವು ದೊಡ್ಡವಾಗಿಯೂ ಕಾಣಬಹುದು. ಕೀರ್ತನದಲ್ಲಿ ಬರೆದಿರುವವುಗಳೆಲ್ಲ ಒಂದೇ ದಿವಸ ಪೂರ್ಣವಾಗಿ ಉಪಯೋಗಿಸತಕ್ಕವುಗಳೆಂದು ತಿಳಿಯಬಾರದು. ಕೀರ್ತನಕಾರರು ಒಂದೊಂದು ಸಲ ಒಂದೊಂದು ವಿಷಯವನ್ನು ಬೆಳೆಸಿಕೊಳ್ಳುವದಕ್ಕೆ ಇದು ನೆರವಾಗತಕ್ಕದ್ದೆಂದು ತಿಳಿದು ಒಂದು ದಿನಕ್ಕೆ ತಕ್ಕಷ್ಟನ್ನೆ ಆಯಾ ದಿವಸ ಉಪಯೋಗಿಸಿಕೊಳ್ಳಬೇಕು. **ನಾನೇ ಅಲ್ಲಲ್ಲಿ ರಚಿಸಿರುವ ಕವಿತೆಗಳಲ್ಲಿ ಮರಾಠಿಭಾಷೆಯಿಂದ ಸಾಕಿ, ದಿಂಡಿ—ಎಂಬೆರಡು ಛಂದಸ್ಸನ್ನು ತೆಗೆದುಕೊಂಡು ಕನ್ನಡಕ್ಕೆ ಸೇರಿಸಿರುತ್ತೇನೆ.** ಉತ್ತರಕರ್ಣಾಟಕದ ಕೀರ್ತನಕಾರರಂತು ಈ ಛಂದಸ್ಸುಗಳ ಮರಾಠಿಕವಿತೆಗಳನ್ನು ಸಮೃದ್ಧಿಯಾಗಿ ಉಪಯೋಗಿಸುತ್ತಾರೆ. ಮಹಾರಾಷ್ಟ್ರೀಯಜನರ ಸಂಪರ್ಕವು ಬೆಳೆದಿರುವ ದಕ್ಷಿಣದೇಶೀಯರಾದ ತಮಿಳರಲ್ಲಿ ಕೂಡ ಈ ಛಂದಸ್ಸುಗಳ ಉಪಯೋಗವು ತಲೇ ಎತ್ತಿರುವದರಿಂದ ನಮ್ಮ ಕನ್ನಡಕ್ಕೂ ಇವುಗಳನ್ನು ಸೇರಿಸಿಕೊಳ್ಳಬೇಕೆಂದು ನನಗೆ ತೋರಿತು. ಆದ್ದರಿಂದ ಆ ಛಂದಸ್ಸಿನಲ್ಲಿಯೇ ಅಲ್ಲಲ್ಲಿ ಕನ್ನಡದಲ್ಲಿಯೇ ಪದ್ಯಗಳನ್ನು ಮಾಡಿ ಜೋಡಿಸಿರುವೆನು. ಮರಾಠಿಭಾಷೆಯಲ್ಲಿ ಅಂತ್ಯಪ್ರಾಸ ಮಾತ್ರ ಇದ್ದರೂ ನಾನು ಕನ್ನಡದಲ್ಲಿ ಆ ಸೊಬಗನ್ನೂ ಉಳಿಸಿಕೊಂಡು ಆ ಛಂದಸ್ಸಿಗೆ ಕನ್ನಡ ಭಾಷೆಯ ಮರ್ಯಾದೆಯು

ನೇಷವು ಶಿಷ್ಟಸಮ್ಮತವಾಗುವದಕ್ಕಾಗಿ ಆದಿಪ್ರಾಸವನ್ನೂ ಇಟ್ಟೇ ಇರು ತ್ತೇನೆ. ಇನ್ನು ಕೀರ್ತನಕಾರರ 'ಕಡಕುಗಳು' ಎಂಬ ಹೆಸರಿನಿಂದ ಉಪ ಯೋಗಿಸುವ ಪದಗಳು ಛಂದಶ್ಶಾಸ್ತ್ರದ ಮಂದಾನಿಲರಗಳೆಗೆ ಹೊಂದುವದ ರಿಂದ ನಾನು ಅವುಗಳನ್ನೆಲ್ಲ ಇಲ್ಲಿ ರಗಳೆಯೆಂತಲೇ ಕರೆದಿದ್ದೇನೆ. ಇಲ್ಲಿ ನಾನು ಕೀರ್ತನಕಾರರ ಆರ್ಯವೆಂದು ಹೆಸರುಕೊಟ್ಟಿರುವ ಬಗೆಯ ಪದ್ಯಗಳನ್ನು ಎಲ್ಲ ಕೀರ್ತನಕಾರರೂ ರೂಢಿಯಾಗಿ ಉಪಯೋಗಿಸುತ್ತಲೇ ಇರುವರು. ಇವು ಗಳ ಮೈಯ್ಕಟ್ಟನ್ನು ನೋಡಿದರೆ ೨ನೆ ಮತ್ತು ೫ನೆ ಚರಣಗಳಲ್ಲಿ ಪ್ರಾಸವಿಲ್ಲದ ಶರಷಟ್ಪದಿಯಾಗಿ ತೋರುತ್ತದೆ. ಈ ಪ್ರಾಸದ ಕೊರತೆಯ ದೆಸೆಯಿಂದ ಅವು ಗಳನ್ನು ನಾನು ಕೀರ್ತನಕಾರರ ಆರ್ಯವೆಂದು ಕರೆದಿದ್ದೇನೆ.

ಹೀಗೆ ಕೀರ್ತನಗಳನ್ನು ಗ್ರಂಥರೂಪದಲ್ಲಿ ಬರೆದಿಡುವದರಿಂದ ಕೀರ್ತನಕಾ ರನ ಪ್ರಾಶಸ್ತ್ಯದ ಬಣ್ಣವನ್ನು ಇಳಿಸಿದಂತಾಗುವದೆಂದು ಯಾರೂ ತಿಳಿಯಬಾ ರದು. ಈ ಪ್ರಯತ್ನವು ಅವರ ಬಣ್ಣವನ್ನು ಹೆಚ್ಚಿಸು ವದಕ್ಕಾಗಿಯೇ ಇರುವದು. ಗ್ರಂಥಗಳನ್ನು ಎಷ್ಟು ಬರೆ

**ಕೀರ್ತನಕಾರರ ಪ್ರತಿಭೆ**

ದರೂ ಕೀರ್ತನಗಳ ಮನೋರಂಜನೆಯು ಕೀರ್ತನಕಾ ರರ ವಾಗ್ಝರಿಯನ್ನವಲಂಬಿಸಿರುತ್ತದೆ. ಪದಪದ್ಯಗಳಲ್ಲಿ ಆಕಾಂಕ್ಷೆಗಳನ್ನು ಕಲ್ಪಿಸಿಕೊಂಡು ಮುಂದೇನು ಬರು ವದೋ ಎಂಬ ಕುತೂಹಲವನ್ನು ಹೆಚ್ಚಿಸುತ್ತ **ನವರಸ ಭರಿತವಾದ ವಾಗ್ಝರಿಯನ್ನು ಹೊರಸೂಸುವ ವಾಣಿಯು ಕೀರ್ತನಕಾ ರರ ನಾಲಿಗೆಯ ಮೇಲೆ ನರ್ತನವನ್ನು ಮಾಡುತ್ತಿರಬೇಕು.** ಕೀರ್ತನಕಾ ರನು ಕೀರ್ತನರಂಗದಲ್ಲಿ ಎಲ್ಲ ಪಾತ್ರಗಳನ್ನೂ ಏಕಕಾಲದಲ್ಲಿ ನಟಿಸುವ ಸಮರ್ಥ ನಾದ ನಟನಾಗಬೇಕು. ಇದಲ್ಲದೆ ಕೀರ್ತನಕ್ಕಾಗಿ ಆರಿಸಿಕೊಂಡ ಕಥೆಯ ಭಾಗಗಳನ್ನು ಒಂದು ಗೊತ್ತಾದ ಕಾಲಕ್ಕೆ ಸರಿಯಾಗಿ ಹಂಚಿಕೊಂಡು ಎಷ್ಟು ಹೊತ್ತಿನಲ್ಲಿ ಬೇಕಾದರೂ ಅದನ್ನು ಪೂರ್ಣಗೊಳಿಸುವ ಚಾತುರ್ಯವು ಕೀರ್ತನಕಾರ ನಿಗಿರಬೇಕು. ಕಥೆಗಳ ನಡೆವಳಿಕೆಗಳನ್ನು ಪ್ರತಿಪಾದಿಸುವಾಗ ಅವುಗಳೊಡನೆ ಈಗಿನ ಕಾಲದವುಗಳ ಹೋಲಿಕೆಯನ್ನು ಮಾಡದೆ ಬಿಡಬಾರದು. ಇದಕ್ಕಾಗಿ ಕೀರ್ತನಕಾರರಲ್ಲಿ ವ್ಯವಹಾರನೈಪುಣ್ಯವೂ ತುಂಬಿತುಳುಕುತ್ತಿರಬೇಕು. ಪರದ್ವೇ ಷಗಳನ್ನು ಹುಟ್ಟಿಸುವ ಮಾತುಗಳನ್ನು ಎಂದೂ ತರಬಾರದು. ಇಷ್ಟೇ ಅಲ್ಲ. ಅವರ ಹೃದಯದಲ್ಲಿಯೂ ಅದು ಇರಬಾರದು.

ಈ ಪ್ರತಿಭೆಯ ಜೊತೆಗೆ ಕೀರ್ತನಕಾರರಲ್ಲಿ ವೈರಾಗ್ಯದ ವಾಸನೆಯೂ ಶೀಲ ಸ್ವಭಾವಗಳ ರಮಣೀಯತೆಯೂ ತೋರುತ್ತಿರಬೇಕು. ಭೌತಿಕವಿಚಾರಗಳ ಉಪಾಧ್ಯಾಯರಿಗೆ ಈ ಗುಣಗಳ ಕೊರತೆ ಇದ್ದರೂ ಸಾಗುವದು. ಏಕೆಂದರೆ ಆ

ವಿಚಾರಗಳಿಗೆ ಈ ಗುಣಗಳ ಸಂಬಂಧವಿಲ್ಲ. ಧಾರ್ಮಿಕಶಿಕ್ಷಕನಿಗೆ ಇವಿಲ್ಲದಿದ್ದರೆ ಶೋಭಿಸುವದಿಲ್ಲ. ಇವಿಲ್ಲದವನ ಉಪದೇಶವು ಗಾಳಿಯಲ್ಲಿ ಹೊಟ್ಟು ತೂರಿದಂತೆಯೇ ಸರಿ. ಆದ್ದರಿಂದ ಕೀರ್ತನಕಾರರು ಇದರ ಕಡೆಗೆ ಹೆಚ್ಚು ಲಕ್ಷ್ಯವನ್ನು ಕೊಡಬೇಕು.

ಕೀರ್ತನಕಾರರ ಯೋಗ್ಯತೆ

**ಕೀರ್ತನಕಾರರು ಸಂಸ್ಕೃತವಾಙ್ಮಯಕ್ಕೂ ದೇಶಭಾಷೆಯ ವಾಙ್ಮಯಕ್ಕೂ ಸಜೀವಚರಭಂಡಾರದಂತೆ**ಉತ್ತಮ ರಕ್ಷಕರೂ ಪ್ರತಿಭಾಶಾಲಿಗಳಾದ ಪ್ರಚಾರಕರೂ ಆಗಬೇಕಾಗಿರುವದರಿಂದ ಸ್ವಲ್ಪ ಹೆಚ್ಚುಕಡಿಮೆ ಅವರು ಸರ್ವಜ್ಞಕಲ್ಪರಾಗಿರಬೇಕಾಗಿರುತ್ತದೆ. ಇಷ್ಟೆಲ್ಲ ಯೋಗ್ಯತೆಗಳೂ ಪೂರ್ಣವಾಗಿದ್ದು ಕೀರ್ತನಕ್ಕೆ ನಿಲ್ಲುವದಂತು ನಾರದರ ಪೀಠಕ್ಕೆ ಶೋಭಾಯಮಾನವೇ ಆಗಿದೆ. ಒಂದುಪಕ್ಷ ಈ ಯೋಗ್ಯತೆಗಳಲ್ಲಿ ಅಷ್ಟಿಷ್ಟು ಕೊರತೆ ಇದ್ದರೂ ಕ್ರಮಕ್ರಮವಾಗಿ ತಿದ್ದಿಕೊಳ್ಳಬೇಕೆಂಬ ಮನಸ್ಸುಳ್ಳವರೆಲ್ಲರೂ ಈ ಉದ್ಯೋಗಕ್ಕೆ ಕೈಹಾಕಬಹುದು. ತಿದ್ದಿಕೊಳ್ಳುವದಕ್ಕೆ ಸಿದ್ಧವಾಗಿರುವ ಮನೋವೃತ್ತಿಯ ಮುಂದೆ ಯಾವ ಕೊರತೆಯೂ ನಿಲ್ಲುವದಿಲ್ಲ. ಆದರೆ ಧರ್ಮನೀತಿಗಳನ್ನು ಅಷ್ಟಿಷ್ಟಾದರೂ ಅಧ್ಯಯನ ಮಾಡಿಯೇ ಇರಬೇಕು. ಅದರ ವಾಸನೆಯೇ ಇಲ್ಲದೆ ಬರೀ ಸ್ವರಮಾಧುರ್ಯದ ಅಥವಾ ನಾಟಕದ ಸೂತ್ರಗಾರಿಕೆಯ ಶಿಕ್ಷಣ ಮೊದಲಾದ್ದರ ಬಲದ ಮೇಲೆ ಕೀರ್ತನದ ಚಟಕ್ಕೆ ಬೀಳುವದು ನಾರದರ ಗೌರವವನ್ನು ಇಳಿಸಿದಂತಾಗುವದು. ಯೋಗ್ಯತೆಯ ತಿಳುಳ್ಳವರು ಮಾತ್ರವೇ ಈ ಕೆಲಸಕ್ಕೆ ಹೊರಡುವದುತ್ತಮ. ಒಂದು ಪಕ್ಷ ಕೀರ್ತನಕಾರರು ಸಕಲಕಲ್ಯಾಣಗುಣ ಸಂಪನ್ನರಾಗಿದ್ದರೂ ಹೊಟ್ಟೆಗಾಗಿ ಕೀರ್ತನಕ್ಕೆ ಬೆಲೆಯನ್ನು ಗೊತ್ತುಮಾಡಿಕೊಂಡು ಮಾಡುವದಂತು— ಕೀರ್ತನಕಾರರ ದ್ರವ್ಯಲಾಭದ ದೃಷ್ಟಿಯಿಂದ ನೆಟ್ಟಗೆ ಕಂಡರೂ— ನಾರದರ ಪಂಥಕ್ಕೊಂದು ಲಾಂಛನವೇ ಸರಿ. ಧರ್ಮವಿಷಯವು ಮಾರತಕ್ಕದ್ದಲ್ಲ. ಈ ಉದ್ಯೋಗವನ್ನು ಹಿಡಿದವರಿಗೆ ಹೊಟ್ಟೆ ತುಂಬಬೇಕಾದದ್ದೇನೊ ಅಗತ್ಯವೆ. ಅವರಿಗೆ ತಕ್ಕ ಸಂಭಾವನೆಯನ್ನು ಕೊಡುವದು ಶ್ರೋತೃಗಳ ಕರ್ತವ್ಯ. ಅದರಲ್ಲಿ ಕೊರತೆಯಾದರೆ ಅದು ಅವರ ತಪ್ಪು. ಕೀರ್ತನಕಾರನು ತಾನು ಪ್ರತಿಪಾದಿಸುವ ಅನನ್ಯಭಕ್ತಿಯನ್ನು ಸ್ವಲ್ಪ ಮಟ್ಟಿಗೆ ತನ್ನ ಅನುಷ್ಠಾನಕ್ಕೆ ಇಟ್ಟುಕೊಂಡರೆ ಹೊಟ್ಟೆಬಟ್ಟೆಗೆ ಎಷ್ಟುಮಾತ್ರವೂ ಕೊರತೆಯುಂಟಾಗಲಾರದು. ಅದು ಹಾಗೆ ತನಗೆ ಅನುಭವಕ್ಕೆ ಬಾರದೆ ಹೋದರೆ ಅಂಥ ನಿರುಪಯೋಗಿಯಾದ ಮಾತನ್ನು ಜನರಿಗೆ ಹೇಳುವ ಗೋಜಿಗೆ ಹೋಗಬಾರದು. ಬದರೆ ಮೊದಮೊದಲು ಈ ಅನನ್ಯಭಕ್ತಿಯು ಕಾರ್ಯಕಾರಿಯಾಗಿ ಕಾಣದಿದ್ದರೂ ಕೆಲವು ದಿವಸ ಯಥಾಲಾಭಸಂತುಷ್ಟನಾಗಿ ಮುಂದುವರಿದರೆ ಆಗ ಅದು ತನ್ನ ಮಹಿಮೆಯನ್ನು ತೋರಿಸದೆ ಬಿಡಲಾರದು. ಈಗಿನ ವಿದ್ಯಮಾನವನ್ನು ಚೆನ್ನಾಗಿ ನೋಡಿದರೆ

ಕೀರ್ತನಕಾರರಲ್ಲಿಯೇ ಕೊರತೆಗಳು ಕಾಣುತ್ತಿರುವವೇ ಹೊರತು ಆಸ್ತಿಕಜನರು ಅವರಿಗೆ ಉತ್ತೇಜನವನ್ನು ಕೊಡುವದರಲ್ಲಿ ಹಿಂದಾಳುಗಳಾಗಿರುವಂತೆ ಕಾಣುವದಿಲ್ಲ. **ಕೀರ್ತನಕಾರರು ತಮ್ಮ ಯೋಗ್ಯತೆಗೆ ಒಳ್ಳೇ ಮೆರುಗನ್ನು ಕೊಟ್ಟರೆ ಮಾತ್ರ** ಜನತೆಗಾಗುವ ವೆಚ್ಚವನ್ನು ಸದುಪಯೋಗ ಮಾಡಿಸಿದಂತೆ ಆಗುವದು ಮತ್ತು ಆ ಆದಾಯವು ತಮಗೆ ಜೀರ್ಣಿಸಿ ಏಳಿಗೆಯನ್ನು ಕೊಡುವದು. ಹೀಗೆ **ಕೀರ್ತನಕಾರರು ಜನತೆಯ ಪೋಷಣೆಗೊಳಪಟ್ಟ ಧರ್ಮಪ್ರಚಾರಕರ ಗುಂಪಾಗಬೇಕು.**

**ವಿನೋದಸಾಧನಗಳು**

ಕೀರ್ತನದಲ್ಲಿ ಗಾಯನದ ಆವಶ್ಯಕತೆ ಇರುವದು ನಿಜ. ಆದರೆ ಕೀರ್ತನ ರಂಗಸ್ಥಳವು ಗಾಯನದ ಪ್ರೌಢಿಮಾಪ್ರದರ್ಶನಕ್ಕೆ ಸ್ಥಳವಲ್ಲ. ಧರ್ಮನೀತಿಗಳು ಜನರ ಮನಸ್ಸಿನಲ್ಲಿ ಬಿಂಬಿಸುವಂತೆ ಮಾಡುವದಕ್ಕೆ ಅದು ಸಾಧನಮಾತ್ರವಾಗಿರುವದು. ಕೀರ್ತನಕಾರನು ಉತ್ತಮಗಾಯಕನಾಗಿರುವದೇನೋ ಅವನಿಗೊಂದು ಭೂಷಣವೆಂಬ ಮಾತಿಗೆ ಸಂಶಯವಿಲ್ಲ. ಒಂದುಪಕ್ಷ ಪ್ರೌಢಿಮೆ ಇಲ್ಲದಿದ್ದರೂ ಕೀರ್ತನಕಾರನು ಪದಪದ್ಯಗಳನ್ನೆಲ್ಲ ಶ್ರುತಿಯನ್ನು ಹಿಡಿದು ರಾಗಜ್ಞಾನಪೂರ್ವಕವಾಗಿ ತಾಲವನ್ನು ತಪ್ಪದೆ ಸುಸ್ವರದಿಂದ ಹಾಡಬಲ್ಲವನಾದರೂ ಆಗಿರಲೇ ಬೇಕು. ಈ ವಿಷಯದಲ್ಲಿ ಶ್ರೀ ಪುರಂದರದಾಸರ ಉಪದೇಶವೊಂದು ಉಪಯೋಗಕರವಾಗಿದೆ. ನೋಡಿ—

**ಕಾಂಬೋದಿ—ಅಟತಾಳ**

**ತಾಳಬೇಕು | ತಕ್ಕ | ಮೇಳಬೇಕು || ಪ || ತಾಳಮೇಳ ಇಲ್ಲದಿದ್ದರೆ ಕೀರ್ತನಕಾರ ತಾ ಅಳಬೇಕು || ಅ.ಪ || ಗಳಶುದ್ಧಿ ಇರಬೇಕು | ತಿಳಿದು ಹೇಳಲುಬೇಕು || ಕಳವಳ ಬಿಡಬೇಕು | ಕಲಿಮೊಗ ಇರಬೇಕು || ೧ || ಯತಿಪ್ರಾಸ ಇರಬೇಕು | ಗತಿಗೆ ನಿಲ್ಲಿಸಬೇಕು || ರತಿಪತಿಹಿತನೊಳು | ಅತಿಮೋಹವಿರಬೇಕು || ೨ || ಹರಿದಾಸನಾಗಲುಬೇಕು | ಹರುಷವೆಚ್ಚಲುಬೇಕು || ಪುರಂದರ ವಿಠಲನಲ್ಲಿ | ಸ್ಥಿರಚಿತ್ತವಿರಬೇಕು || ೩ ||**

ಪದಗಳನ್ನು ಹಾಡುವದಂತು ಸರಿಯಷ್ಟೆ! ಈ ಗ್ರಂಥದಲ್ಲಿ ಅಲ್ಲಲ್ಲಿ ಬರುವ ಬೇರೆಬೇರೆ ಛಂದಸ್ಸಿನ ಪದ್ಯಗಳಿಗೂ ಹಾಡುಗಾರಿಕೆಯನ್ನುಪಯೋಗಿಸಬಹುದು. ಯಾವ ಪದ್ಯಗಳನ್ನಾದರೂ ಬೇಕಾದ ರಾಗದಲ್ಲಿ ಹಾಡಲಾಗುವದಿಷ್ಟೇ ಅಲ್ಲ. ಸಾಮಾನ್ಯವಾಗಿ ಕಂದ ಮತ್ತು ಆರ್ಯಾ—ಇವುಗಳನ್ನು ರೂಪಕತಾಲದಲ್ಲಿಯೂ ಶರಷಟ್ಪದಿಯನ್ನು ಆದಿತಾಲದಲ್ಲಿಯೂ ಕುಸುಮಷಟ್ಪದಿ, ಭೋಗಷಟ್ಪದಿ, ತ್ರಿಪದಿ— ಇವುಗಳನ್ನು ಅಟತಾಲದಲ್ಲಿಯೂ ಭಾಮಿನೀಷಟ್ಪದಿಯನ್ನು ತ್ರಿಪುಟತಾಲದಲ್ಲಿಯೂ ಹೀಗೆ ಎಲ್ಲವನ್ನೂ ತಾಲಬದ್ಧವಾಗಿಯೂ ರಮ್ಯವಾಗಿ ಹಾಡಬಹುದು.

ಇನ್ನು ಹಾಸ್ಯದ ವಿಚಾರವನ್ನು ತೆಗೆದುಕೊಂಡರೆ ಮಾತುಗಳೆಲ್ಲ ರಸಭರಿತವಾಗಿಯೂ ಚಮತ್ಕಾರವಾಗಿಯೂ ಇರಬೇಕು. ಕೀರ್ತನದಲ್ಲಿ ಹಾಸ್ಯರಸವನ್ನು ಪಯೋಗಿಸುವಾಗ ಘನತೆಯು ಕಡೆಗೆ ಲಕ್ಷ್ಯವನ್ನು ಕೊಡಬೇಕು. ಕೀಳು ಬಗೆಯ ಹಾಸ್ಯಕ್ಕೆ ಅಲ್ಲಿ ಅವಕಾಶವಿರಬಾರದು. ಉಪಕಥೆಗಳು ಸಂಕ್ಷೇಪವಾಗಿಯೂ ಮನೋರಂಜಕವಾಗಿಯೂ ಇರಬೇಕು. ಮತ್ತು ಅವು ಬರೀ ಕಟ್ಟು ಕಥೆಗಳಲ್ಲಿಯೇ ಮುಗಿಯದೆ ಇತಿಹಾಸಗಳಿಂದಲೂ ಬೇಕಾದಷ್ಟು ಬರಬೇಕು. ತೆನ್ನಾಲರಾಮಕೃಷ್ಣನ ಕಥೆಗಳೂ ಅಕಬರ ಬೀರಬಲರ ಕಥೆಗಳೂ ವೇದಾಂತ ಕಥಾವಳಿ ಮೊದಲಾದವುಗಳ ಕಥೆಗಳೂ ಸಾಧುಗಳ ಕಥೆಗಳೂ ಈ ಸಂದರ್ಭಕ್ಕೆ ಉಪಯೋಗವಾಗುವವು. ಹೀಗಾಗುವದಕ್ಕೆ ಕೀರ್ತನಕಾರರು ತಾವು ಅಂಥ ಅನೇಕ ಗ್ರಂಥಗಳನ್ನು ಓದಿರಬೇಕಾಗುತ್ತದೆ. ಜನರ ರುಚಿಯು ಗಾಯನ, ಹಾಸ್ಯ, ಉಪಕಥೆ—ಮೊದಲಾದ ವಿನೋದಗಳ ಕಡೆಗೇ ಇರಬಹುದು. ಆದರೂ ಕೀರ್ತನಕಾರನು ದುಡ್ಡಿಗಾಗಿ ಅವರ ಇಚ್ಛೆಯ ತಾಲಕ್ಕೆ ಸರಿಯಾಗಿ ಕುಣಿಯುವದಕ್ಕೆ ಹೋಗಬಾರದು. ಕೀರ್ತನಕಾರನು ಗಾಯನ ಮೊದಲಾದವುಗಳ ಸುಳಿವನ್ನು ಮಾತ್ರ ತೋರಿಸಿ ಅವರನ್ನೆ ತನ್ನ ಪ್ರತಿಭೆಯ ತಾಲಕ್ಕೆ ಕುಣಿಸುವವನಾಗಬೇಕು. **ಕೀರ್ತನವು ಹರಿಕಥಾಕಾಲಕ್ಷೇಪವಾಗಬೇಕೇ ಹೊರತು ವಿನೋದಕಾಲಕ್ಷೇಪವಾಗಬಾರದು.** ರೋಗಿಗಳಿಗೆ ಕಹಿಯಾದ ಔಷಧಿಯನ್ನು ಕೊಡುವಾಗ ವೈದ್ಯರು ಸಿಹಿಯಾದ ಸಕ್ಕರೆಯನ್ನು ಸೇರಿಸಿಕೊಡುತ್ತಾರಷ್ಟೆ. ಅವರ ಉದ್ದೇಶದಂತೆ ಹೊಟ್ಟೆಗೆ ಸೇರಬೇಕಾದದ್ದು ಕಹಿಯಾದ ಔಷಧವೆಂದಿರುವದೇ ಹೊರತು ಸಿಹಿಯಾದ ಸಕ್ಕರೆಯೆಂದಿರುವದಿಲ್ಲ. ಹಾಗೆ ಕ್ಷುದ್ರವಾದ ವಿಷಯಾಸಕ್ತಿಯೆಂಬ ರೋಗದಿಂದ ಪೀಡಿತರಾದವರಿಗೆ ಭಕ್ತಿರಸವೆಂಬ ಔಷಧಿಯನ್ನು ಕೊಡುವದಕ್ಕೆ ನಿಂತಿರುವ ಕೀರ್ತನಕಾರನ ಕೃತಿಯಲ್ಲಿ ಜನರ ಮನಸ್ಸಿಗೆ ಬಿಂಬಿಸತಕ್ಕದ್ದು ಧರ್ಮನೀತಿಗಳಾಗಿರಬೇಕೇ ಹೊರತು ವಿನೋದಗಳಾಗಿರಬಾರದು. ಗಾಯನ ಮೊದಲಾದ್ದರಲ್ಲಿ ಪ್ರೌಢಿಮೆ ಇದ್ದವರು ಅದರ ಪ್ರದರ್ಶನಕ್ಕೆ ಬೇರೆ ಸಮಯವನ್ನು ಕಲ್ಪಿಸಿಕೊಂಡು ಕೀರ್ತನಕಾಲಕ್ಷೇಪವನ್ನು ಧರ್ಮನೀತಿಗಳ ಪ್ರಚಾರಕ್ಕೆ ಮೀಸಲಾಗಿಟ್ಟುಕೊಳ್ಳಬೇಕು. ಕೀರ್ತನದ ವಿಷಯಕ್ಕೆ ಗ್ರಹಣ ಹಿಡಿದಂತೆ ಮಾಡಿ ಸಭಿಕರನ್ನು ವಿನೋದದ ಸೆಳೆತಕ್ಕೆ ಸಿಕ್ಕಿಸಿಕೊಂಡು ಹೋಗಬಾರದು. ಗಾಯನ ಮೊದಲಾದವುಗಳಂತೆ ಕೀರ್ತನದಲ್ಲಿ ಅದ್ಭುತರಸವನ್ನು ಸೂರೆಮಾಡುವ ಚಟವೂ ಕೀರ್ತನಕಾರರಲ್ಲಿ ವಿಶೇಷವಾಗಿ ಕಂಡುಬರುವದು. ಕೀರ್ತನಕಾಲಕ್ಷೇಪಕ್ಕೆ ಬಂದದ್ದಕ್ಕೆ ಅದ್ಭುತರಸದಿಂದ ಬೆರಗಾಗಿ ಮನೆಗೆ ಹೋಗುವದೇ ಮುಖ್ಯಪ್ರಯೋಜನವಲ್ಲ. ಮನೆಗೆ ಹೋದ ಮೇಲೆ ಕೀರ್ತನಕಾಲದಲ್ಲಿ ಬಂದ ಒಳ್ಳೊಳ್ಳೆಯ ವಿಚಾರಗಳನ್ನು ಮತ್ತೆ ಮನ

***

ನಕ್ಕೆ ತಂದುಕೊಂಡು ಅವುಗಳನ್ನು ಆಚರಣೆಗೆ ತರುವದಕ್ಕೆ ಉಪಯುಕ್ತವಾದಂಥ ವೀರ, ಕರುಣಾ—ಮೊದಲಾದ ರಸಗಳ ಆವಿರ್ಭಾವವೂ ಚೆನ್ನಾಗಿ ಆಗಿ ಶಾಂತಿರಸದಲ್ಲಿ ಪರಿಣಮಿಸುವಂತಿರಬೇಕು.

**ಪದ್ಯಗ್ರಂಥಗಳ ಪ್ರಾಶಸ್ತ್ಯ**

ಪದಪದ್ಯಗಳ ಮಯವಾದ ಈ ಗ್ರಂಥವು ವಾಚಕರಿಗೆ ಕಠಿನವೆನಿಸೀತೆಂದು ಶಂಕೆಯುಂಟಾದರೆ ಈ ವಿಷಯವನ್ನು ದಯವಿಟ್ಟು ವಿಚಾರಕ್ಕೆ ತೆಗೆದುಕೊಳ್ಳಬೇಕು. ನಮ್ಮ ಪೂರ್ವದೇಶವೆಲ್ಲ ಪದ್ಯಗಳ ತೌರುಮನೆ. ನಮ್ಮ ಪ್ರಾಚೀನಕವಿಗಳ ಆಸ್ತಿಗೆಲ್ಲ ಅದೇ ಕಬ್ಬಿಣದ ಪೆಟ್ಟಿಗೆ. ಅದರ ಬಾಗಿಲು ಬಿಗಿಯಾಗಿರುವದೆಂದು ದೂರದಲ್ಲಿಯೇ ಹೆದರಿ ಅದನ್ನು ಇದ್ದಲ್ಲಿಯೇ ಬಿಟ್ಟು ಗದ್ಯದ ಭಿಕ್ಷೆಗೆ ಹೊರಡುವದು ನಮ್ಮ ಅವಿವೇಕವನ್ನು ತೋರಿಸುವದೇ ಹೊರತು ಬೇರೆ ಇಲ್ಲ. ಹಿಂದೆ ಕೋಳಿ ಕೂಗಿದ ಹಳ್ಳಿಯಲ್ಲಿ ಕೂಡ ಭಾರತ, ಭಾಗವತ– ಮೊದಲಾದ ಪದ್ಯಗ್ರಂಥಗಳ ಓದುಗಾರಿಕೆ ನಡೆಯುತ್ತಿತ್ತು. ಎಷ್ಟೋ ಜನ ಹೆಂಗಸರು ಕೂಡ ಆ ಪದ್ಯಗ್ರಂಥಗಳ ಅರ್ಥಪ್ರತಿಪಾದನೆಯಲ್ಲಿ ನಿಪುಣರಾಗಿದ್ದರು. ಉದಾಹರಣಾರ್ಥವಾಗಿ ನಾನು ನನ್ನ ಬಾಲ್ಯದಲ್ಲಿ ಎಷ್ಟೋ ಪದ್ಯಗಳ ಅರ್ಥವನ್ನು ನಮ್ಮ ಅಜ್ಜಿಯಿಂದ ತಿಳಿದವನಾಗಿರುವೆನು. ಮನಸ್ಸು ಹಾಕಿದರೆ ಆ ಕಬ್ಬಿಣದ ಪೆಟ್ಟಿಗೆಗಳಂಥ ಪದ್ಯಗ್ರಂಥಗಳು ಹೆಂಗಸರಿಗೆ ಕೂಡ ತಮ್ಮ ಬಾಗಿಲನ್ನು ಹಾರಹೊಡೆಯುವಾಗ ಹಿಂದಿನ ಕಾಲಕ್ಕಿಂತ ಎಷ್ಟೋ ಪ್ರೌಢಿಮೆಯನ್ನು ಪಡೆದಿರುವೆವೆಂದು ಬ್ಯಾಂಡುಬಾರಿಸುವ ಈಗಿನವರು ಪದ್ಯಗ್ರಂಥಗಳೆಂದರೆ ಏಕೆ ಮುಖವನ್ನು ಸೊಟ್ಟಮಾಡಬೇಕೊ ತಿಳಿಯದು. ಪದ್ಯದಲ್ಲಿರುವ ಮಾತುಗಳನ್ನೆಲ್ಲ ಮಾತಿನಲ್ಲಿ ಬರೆದುಬಿಟ್ಟರೆ ಬೇಗ ಅರ್ಥವಾಗುವದೆಂಬ ಮಾತೇನೋ ನಿಜ. ತಾಂಬೂಲವನ್ನು ಅಗಿದು ತಿನ್ನುವದಕ್ಕಿಂತ ಕುಟ್ಟಿ ನೆಮಲಿ ನುಂಗಿದರೆ ಸುಲಭವಾಗಿ ಹೊಟ್ಟೆಗೆ ಹೋಗುವದು. ಆದರೆ ಅದನ್ನು ಅಗಿದದ್ದರಿಂದ ಆಗುವ ರಸಾಸ್ವಾದವೇನಾದರೂ ದೊರೆಯುವದೊ? ಹಲ್ಲಿಲ್ಲದವರು ಕುಟ್ಟಿದ್ದನ್ನು ನೆಮಲಿ ನುಂಗಲಿ. ಹಲ್ಲಿರುವವರು ಹಾಗೆ ಮಾಡುವದು ನಗೆಗೇಡಲ್ಲವೆ? ಅವರಂತೆ ಕೇವಲ ಚಿಕ್ಕವರು ಗದ್ಯಗಳನ್ನೆ ಓದಲಿ. ಪ್ರೌಢರು ಪದ್ಯಗಳನ್ನು ಪೇಕ್ಷಿಸುವದು ಸರಿಯಲ್ಲ. ನಮಗೆ ಬಹುಕಾಲದಿಂದ ಪರಂಪರಾಗತವಾಗಿ ಬಂದಿರತಕ್ಕ ಈ ಯೋಗ್ಯತಾವಿಶೇಷವನ್ನು ಈಗ ನಾವು ಕಳೆದುಕೊಳ್ಳುತ್ತಿದ್ದೇವೆ. ಪದ್ಯಗ್ರಂಥಗಳ ರುಚಿಯನ್ನು ಕಳೆದುಕೊಂಡು ಗದ್ಯಗ್ರಂಥಗಳ ರುಚಿಯನ್ನು ಕೊಂಡುಕೊಳ್ಳುವದು ರತ್ನವನ್ನು ಕೊಟ್ಟು ಗಾಜನ್ನು ಕೊಂಡುಕೊಂಡಂತೆಯೇ ಸರಿ. ಮತ್ತೊಂದೇನೆಂದರೆ ಗದ್ಯವು ಬಿಡಿಹೂಗಳಂತೆ. ಪದ್ಯವು ಮಾಲೆ

ಯಂತೆ. ಬಿಡಿಹೂಗಳು ದೂರದಲ್ಲಿದ್ದು ವಾಸನೆಯನ್ನು ಕೊಟ್ಟು ಇದ್ದಲ್ಲಿಯೇ ಹೊರಗೆ ಇರುವವು. ಮಾಲೆಯು ಹೃದಯವನ್ನಲಂಕರಿಸಿ ಎಡೆಬಿಡದೆ ಆಹ್ಲಾದವನ್ನು ಕೊಡುತ್ತಿರುವದು. ಅದರಂತೆ ಗದ್ಯವು ವಿಚಾರವನ್ನು ತಿಳಿಸಿ ಸುಮ್ಮನಾಗುವದು. ಪದ್ಯವು ಒಳಹೊಕ್ಕು ಕಂಠದಲ್ಲಿ ತನ್ನ ಗಾನವನ್ನು ಮಾಡುತ್ತಲೇ ಇರುವದು. ಗದ್ಯಗಳಿಗೂ ಯೋಗ್ಯತೆ ಇರುವದೆಂಬ ಮಾತಿಗೇನೂ ಎರಡಿಲ್ಲ. ಆದರೆ ನಮ್ಮ ಪೂರ್ವಿಕರ ಆಸ್ತಿಯಾದ ಪದ್ಯಗ್ರಂಥಗಳ ಬೆಲೆಯನ್ನು ಇಳಿಸುವದು ಶ್ರೇಯಸ್ಕರವಲ್ಲ. **ಹೃದಯದ ಶಿಕ್ಷಣಕ್ಕೆ ಪದ್ಯಗಳೇ ಉತ್ತಮವಾದ ಉಪಕರಣಗಳು.** ಇಷ್ಟು ಹೇಳಿದ ಕಾರಣವೇನೆಂದರೆ ಈ ಗ್ರಂಥವು ಕೇವಲ ಕೀರ್ತನಕಾರರು ಮಾತ್ರ ಹಿಡಿಯತಕ್ಕದ್ದೆಂದು ತಿಳಿಯಬಾರದೆಂದೂ ಮನೋರಂಜಕವಾದ ಈ ರಚನಾವಿಶೇಷದ ರುಚಿಯನ್ನು ನೋಡಬೇಕಾದರೆ ಕನ್ನಡಿಗರೆಲ್ಲರೂ ಇದನ್ನು ಓದಬೇಕೆಂದೂ ಪ್ರಾರ್ಥಿಸುವದಕ್ಕಾಗಿ. **ಹೀಗೆ ಇದು ಅನೇಕಗ್ರಂಥಗಳನ್ನು ಒಂದೇ ಕಡೆ ಉಪಯೋಗಿಸುತ್ತ ಕರ್ಣಾಟಕ ಭಾಷಾಪ್ರಪಂಚಕ್ಕೇ ಒಂದು ಬಗೆಯ ಹೊಸಸಾಹಿತ್ಯವಾಗಿದ್ದು ಇದೊಂದನ್ನು ಓದಿದರೆ ಕನ್ನಡದ ವಾಙ್ಮಯವನ್ನೆಲ್ಲ ಓದಿದಂತಾಗಿ ಹೃದಯವು ಅರಳುವದರಿಂದ** ಇದೊಂದು ಜನಮಂಡಲಿಯ ಪಠ್ಯಪುಸ್ತಕವಾದರೆ ನನ್ನ ಶ್ರಮೆಯು ಸಾರ್ಥಕವಾಯಿತೆಂದು ತಿಳಿಯುವೆನು.

**ಉಪಕಾರಸ್ಮರಣೆ**

ಈ ಗ್ರಂಥರಚನೆಯ ಸಂದರ್ಭದಲ್ಲಿ ನಾನು ನನ್ನ ಪುತ್ರರಾದ **ಶ್ರೀಯುತ ವೈ. ಸುಬ್ಬರಾಯರ** ಸಹಾಯವನ್ನು ಪಡೆದಿರುವೆನು. ಮತ್ತು ಗಾನಶಾಸ್ತ್ರದ ಪರಿಚಯವಿಲ್ಲದ ನನಗೆ **ಶ್ರೀಯುತ ಅರಸಿಕೆರೆ ರಾಮಣ್ಣ ದಾಸರು,** ಕೀರ್ತನಕಾಲಕ್ಷೇಪವನ್ನೇ ತಮ್ಮ ವೃತ್ತಿಯನ್ನಾಗಿ ಮಾಡಿಕೊಂಡು ಅದನ್ನು ಸಮರ್ಪಕವಾಗಿ ನಡೆಸಿ ಅವರಲ್ಲಿಯೇ ಮುಂದುವರಿದಂಥ ತಮ್ಮ ತಂದೆಯವರಾದ ಕೈಲಾಸವಾಸಿ **ತಿಮ್ಮಪ್ಪದಾಸರ** ಸಂಗ್ರಹದಲ್ಲಿದ್ದ ಕಾಲೋಚಿತವಾದ ಮಟ್ಟುಗಳನ್ನು ಕೊಟ್ಟದ್ದಲ್ಲದೆ ನಾನು ಅನೇಕ ಕಡೆ ಆ ಮಟ್ಟುಗಳಲ್ಲಿ ಪದಗಳನ್ನು ಮಾಡಿದಮೇಲೆ ಅವುಗಳ ಹೊಂದಿಕೆಯನ್ನು ಮತ್ತೊಮ್ಮೆ ನೋಡಿ ರಾಗತಾಲಗಳನ್ನುಗೊತ್ತುಮಾಡಿಕೊಟ್ಟು ಉಪಕಾರಮಾಡಿರುತ್ತಾರೆ. ಕೆಲವು ಕಡೆ ಮಾತ್ರ ಅವರು ಉಪಯೋಗಿಸುತ್ತಿದ್ದ ಪದಗಳನ್ನೆ ಕೃತಜ್ಞತಾಪೂರ್ವಕವಾಗಿ ಉಪಯೋಗಿಸಿಯೂ ಇದ್ದೇನೆ. ಕೀರ್ತನಸಂಪ್ರದಾಯವು ಬಹು ಪುರಾತನವೆಂಬ ಬಗ್ಗೆ ''ಪ್ರಹ್ಲಾದಸ್ತಾಲಧಾರೀ'' ಎಂದು ಮೊದಲಾಗಿರುವ ಪದ್ಮಪುರಾಣ ಶ್ಲೋಕದ ತಾತ್ಪರ್ಯಕ್ಕೊಂದು ಮೂರ್ತಸ್ವರೂಪವನ್ನು ಕೊಟ್ಟು ಮುಖಪತ್ರದ ಮೇಲಿರುವ ಅಂದವಾದ **ಚಿತ್ರವನ್ನು** ಬರೆದುಕೊಟ್ಟ ನನ್ನ ಮಿತ್ರರಾದ

**ಶ್ರೀಯುತ ಕೆ. ಶಂಕರರಾಯರ** ಉಪಕಾರವನ್ನು ನಾನು ಎಂದೂ ಮರೆಯಲಾರೆನು.

ಅರ್ಥವನ್ನು ಮಸುಕುಮಾಡುವಂತೆ ಪ್ರಮಾದದಿಂದ ಬಿದ್ದಿರುವ ಕೆಲವು ಮುದ್ರಣದ ದೋಷಗಳನ್ನು ವಾಚಕರು ದಯವಿಟ್ಟು ಮುಂದಾಗಿಯೇ ತಿದ್ದಿಕೊಳ್ಳುವದಕ್ಕೆ ಅನುಕೂಲವಾಗಲೆಂದು ಈ ಕೆಳಗೆ ತಿದ್ದಿ ಬರೆದಿರುತ್ತೇನೆ. ಬರೀ ಅಕ್ಷರಸ್ಖಾಲಿತ್ಯಗಳು ಸ್ವಭಾವವಾಗಿಯೇ ಗೊತ್ತಾಗುವವೆಂದು ಅವುಗಳನ್ನು ಇಲ್ಲಿ ಬರೆದಿಲ್ಲ.

ವಿಭವ, ವೈಶಾಖ,
ಬೆಂಗಳೂರು.

ಹೊಸಕೆರೆ ಚಿದಂಬರಯ್ಯ

## ಶುದ್ಧಿಪತ್ರ

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೩೪ | ೨೨ | ನಮೇತಿ | ನವೇತಿ |
| ೫೯ | ೨೧ | ಸುಮಿತ್ರ | ಸುಮಂತ್ರ |
| ೬೨ | ೧೬ | ಬೊಕ್ಕಗೆವಂ | ಬೊಕ್ಕೊಗೆವಂ |
| ೬೩ | ೨೯ | ಹಿಂದಿದ್ದರೆ | ಹಿಂದಿದ್ದ |
| ೮೮ | ೧೨ | ಮನದಿ ಹರವು | ಹರವು ಮನದಿ |
| ೯೧ | ೧೩ | ಬಹುರೂಪಿನಲ್ಲಿ | ಬಹುರೂಪಿಯಲ್ಲಿ |
| ,, | ೧೮ | ಳೈಕ್ಸ್ವೀಳಮಂ | ಳೈಕ್ಷ್ವೀಳಮಂ |
| ೯೮ | ೬ | ತಿಳಿಯ | ತಿಳಿಯೆ |
| ೯೯ | ೨ | ದಂದು | ದಂದುಗ |
| ೧೦೦ | ೯ | ಬರುತಲೀ ದೇವ | ಬರುತ ಬರುತಲೀ ದೇವ |
| ೧೦೧ | ೧೬ | ಮೋಲುಡಿಯ | ಮೇಲುಡಿಯ |
| ೧೦೨ | ೧೩ | ಶಬರಿ ತಾನು | ಶಬರಿ ನಿನಗೆ ತಾನು |
| ೧೦೩ | ೧೦ | ಕಾಣಿಸುತ್ತಿರಲೇ | ಕಾಣಿಸುತ್ತಿರಲೆನಗೆ |
| ,, | ,, | ಮಾಣದೆನಗೆ | ಮಾಣದೆ |
| ೧೨೪ | ೩೧ | ತ್ಯಪರಾಕಮ | ಸತ್ಯಪರಾಕ್ರಮ |
| ,, | ,, | ದೇವೋಸ | ದೇವೋ |
| ೧೨೫ | ೨೧ | ಮೇಲೆಲ್ಲಾ ಸಿಕ್ಕಲಿ ಹಾರ | ಮೇಲೆ ಸಿಕ್ಕಲಿಲ್ಲಾ ಹಾರ |
| ೧೪೧ | ೮ | ಹನುಮಂ | ಹನುಮ |
| ೧೫೩ | ೫ | ಬಕಮಂ | ಬಕಮುಂ |
| ೧೬೭ | ೨೭ | ನೀವುದ | ನೀವುದಕೆ |
| ೧೭೩ | ೧೨ | ಮಂದಿರ | ಮಂದರ |
| ೧೮೧ | ೪ | ತ್ರಿದಶತಿತ | ತ್ರಿದಶತತಿ |

# ಸಂಜ್ಞೆಗಳ ವಿವರಣೆ

## ಸಾಲುಗಳ ಮೊದಲಲ್ಲಿ ಉಪಯೋಗಿಸಿರುವವು

| | | | |
|---|---|---|---|
| ಶ್ಲೋ | ಶ್ಲೋಕ | ಸಾ | ಸಾಕಿ |
| ಅ | ಅರ್ಥ | ದಿಂ | ದಿಂಡಿ |
| ಸಾಂ | ಸಾಂಗತ್ಯ | ರ | ರಗಳೆ |
| ಆ | ಆರ್ಯಾ | ಚೂ | ಚೂರ್ಣಿಕೆ |
| ಟಿ | ಟಿಪ್ಪಣಿ | ಕಂ | ಕಂದ |
| ತ್ರಿ | ತ್ರಿಪದಿ | ಚೌ | ಚೌಪದಿ |
| ಷ | ಷಟ್ಪದಿ | ವ | ವಚನ |
| ವೃ | ವೃತ್ತ | ಸೀ | ಸೀಸಪದ್ಯ |
| ಕೀ | ಕೀರ್ತನಕಾರರ ಆರ್ಯಾ | | |

## ಸಾಲುಗಳ ಕೊನೆಯಲ್ಲಿ ಉಪಯೋಗಿಸಿರುವವು

| | | | |
|---|---|---|---|
| ಶ್ರೀ.ರಾ | ಶ್ರೀಮದ್ರಾಮಾಯಣ | ನ.ಶ | ನಯಶತಕ |
| ಸಂ.ಭಾರ | ಸಂಸ್ಕೃತಮಹಾಭಾರತ | ರಾ.ಚಂ | ರಾಮಾಯಣಚಂಪೂ |
| ಮ.ಉ | ಮನಸ್ಸಿಗುಪದೇಶ | ಜೀ.ಸಾಂ | ಜೀವಂಧರಸಾಂಗತ್ಯ |
| ಹ.ಮಂ.ಪ್ರ | ಹನೇರಾಮಮಂತ್ರಪ್ರಶಂಸೆ | ಜ.ವ | ಜನವಶ್ಯ |
| ಅ.ಗೀ | ಅಧ್ಯಾತ್ಮಗೀತಾವಳಿ | ರ.ಶ | ರತ್ನಾಕರಾಧೀಶ್ವರಶತಕ |
| ಭ.ಗೀ | ಭಗವದ್ಗೀತೆ | ಸೂ.ತಾ | ಸೂಕ್ತಿತಾರಾವಳಿ |
| ಸ.ಪ | ಸರ್ವಜ್ಞಪದಗಳು | ಮ.ಸ್ಮೃ | ಮನುಸ್ಮೃತಿ |
| ಕ.ಭಾರ | ಕನ್ನಡ ಮಹಾಭಾರತ | ಶ್ರೀ.ಚೆ.ಶ | ಶ್ರೀಚೆಲ್ವನಾರಾಣಾಯಣಶತಕ |
| ಹ.ಭ | ಹರಿಭಕ್ತಿಸಾರ | ಭ.ನೀ | ಭರ್ತೃಹರಿ ನೀತಿಶತಕ |
| ಅ.ರಾ | ಅಧ್ಯಾತ್ಮರಾಮಾಯಣ | ಮ.ಬ.ಚ | ಮಲಬಸವರಾಜಚರಿತ್ರೆ |
| ಅ.ಶ | ಅಪರಾಜಿತೇಶ್ವರಶತಕ | ರಾ.ಚ.ಚಂ | ಶ್ರೀರಾಮಚರ್ಯಾಮೃತಚಂಪೂ |
| ಭಕ್ತಿ.ಗೀ | ಭಕ್ತಿಗೀತಾವಳಿ | ರಾ.ಚ.ಪು | ರಾಮಚಂದ್ರಚರಿತಪುರಾಣ |
| ರಾ.ಕ.ಅ | ರಾಮಕರ್ಣಾಮೃತ | ರ.ವಂ | ರಘುವಂಶ |
| ಸು.ಲಾ | ಸುಶ್ಲೋಕಲಾಘವ | ಭ.ವೈ | ಭರ್ತೃಹರಿ ವೈರಾಗ್ಯಶತಕ |
| ದಾ | ದಾಸರಪದಗಳು | ಶು.ನೀ | ಶುಕ್ರನೀತಿ |
| ರಾ.ಕ.ಕು | ರಾಮಾಭ್ಯುದಯಕಥಾ ಕುಸುಮಮಂಜರಿ | ರಾ.ನಾ | ರಾಮಾಯಣನಾಟಕ |
| | | ಕಾ.ಕ | ಕಾಮನ ಕಥೆ |

| | | | |
|---|---|---|---|
| ತೊ.ರಾ | ತೊರವೆಯ ರಾಮಾಯಣ | ಸೀ.ಸು.ನಾ | ಸೀತಾಸುವರ್ಣಮೃಗನಾಟಕ |
| ಸು | ಸುಭಾಷಿತ | ಜ.ಕಾ | ಜಯನೃಪಕಾವ್ಯ |
| ನಾ.ಭ.ಸೂ | ನಾರದಭಕ್ತಿಸೂತ್ರ | ಹ.ನಾ | ಹನುಮನ್ನಾಟಕ |
| ಆ.ರಾ | ಆನಂದರಾಮಾಯಣ | ರಾ.ವಿ | ರಾಜಶೇಖರವಿಲಾಸ |
| ಕು.ರಾ | ಕುಮುದೇಂದುರಾಮಾಯಣ | ಅ.ಪ್ರ.ನಾ | ಅಭಿಜ್ಞಾನಪ್ರದಾನನಾಟಕ |
| ಕೃ.ಮ | ಕೃಷ್ಣಮಹೀಶ್ವರೀ | ನೀ.ಸಾ | ನೀತಿಸಾರ |
| ಹ.ರಾ | ಹನುಮದ್ರಾಮಾಯಣ | ಸಂ.ಭಾಗ | ಸಂಸ್ಕೃತಭಾಗವತ |
| ಆ.ಪು | ಆದಿಪುರಾಣ | ವಿ.ಬು | ವಿಭೀಷಣಬುದ್ಧಿ |
| ವೀ.ವ.ಶಾ | ವೀರಶೈವರ ವಚನಶಾಸ್ತ್ರ | ರಾ.ಅ.ನಾ | ರಾಘವಾಭ್ಯುದಯನಾಟಕ |
| ಉ.ರಾ | ಉತ್ತರರಾಮಚರಿತ್ರೆ | ಕ.ಸ.ಸಾ | ಕಥಾಸರಿತ್ಸಾಗರ |
| ಪ್ರ.ರಾ | ಪ್ರಸನ್ನರಾಘವನಾಟಕ | ಚ.ಪಂ | ಚರ್ಪಟಪಂಜರಿಕಾಸ್ತೋತ್ರ |
| ಮಾ.ರಾ | ಮಾರ್ಕಂಡೇಯರಾಮಾಯಣ | ಪಾಂ.ಗೀ | ಪಾಂಡವಗೀತೆ |
| ಸೋ.ಶ | ಸೋಮೇಶ್ವರಶತಕ | ಶ್ರೀ.ರಾ.ಪ | ಶ್ರೀರಾಮಪಟ್ಟಾಭಿಷೇಕ |
| ಮ.ನಂ.ಶ | ಮರುನ್ನಂದನಶತಕ | ಮ.ವೀ.ಚ | ಮಹಾವೀರಚರಿತೆ |
| ಕೈ.ಕ | ಕೈವಲ್ಯಕಲ್ಪವಲ್ಲರಿ | ಪ್ರ.ಸ್ತೋ | ಪ್ರದೋಷಸ್ತೋತ್ರಾಷ್ಟಕ |



# ವಿಷಯಸೂಚಿಕೆ







## ಶ್ರೀಗುರುಭ್ಯೋ ನಮಃ

ಶುಕ್ಲಾಮ್ಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಮ್।ಪ್ರಸನ್ನವದನಂ ಧ್ಯಾಯೇತ್ಸರ್ವವಿಘ್ನೋಪಶಾನ್ತಯೇ ॥

ಅಗಜಾನನಪದ್ಮಾರ್ಕಂ ಗಜಾನನಮಹರ್ನಿಶಮ್। ಅನೇಕದಂ ತಂ ಭಕ್ತಾನಾಮೇಕದಂತಮುಪಾಸ್ಮಹೇ ॥

ಯಾ ಕುನ್ದೇನ್ದುತುಷಾರಹಾರಧವಲಾ, ಯಾ ಶುಭ್ರವಸ್ತ್ರಾವೃತಾ, । ಯಾ ವೀಣಾವರದಣ್ಡಮಣ್ಡಿತಕರಾ, ಯಾ ಶ್ವೇತಪದ್ಮಾಸನಾ, ॥ ಯಾ ಬ್ರಹ್ಮಾಚ್ಯುತಶಙ್ಕರಪ್ರಭೃತಿಭಿರ್ದೇವೈಸ್ಸದಾ ಪೂಜಿತಾ । ಸಾ ಮಾಂ ಪಾತು ಸರಸ್ವತೀ ಭಗವತೀ ನಿಶ್ಶೇಷಜಾಡ್ಯಾಪಹಾ ॥

ಬ್ರಹ್ಮಾನನ್ದಂ ಪರಮಸುಖದಂ ಕೇವಲಂ ಜ್ಞಾನಮೂರ್ತಿಮ್। ದ್ವನ್ದ್ವಾತೀತಂ ಗಗನಸದೃಶಂ ತತ್ತ್ವಮಸ್ಯಾದಿಲಕ್ಷ್ಯಮ್॥ಏಕಂ ನಿತ್ಯಂ ವಿಮಲಮಚಲಂ ಸರ್ವಧೀಸಾಕ್ಷಿಭೂತಮ್ । ಭಾವಾತೀತಂ ತ್ರಿಗುಣರಹಿತಂ ಸದ್ಗುರುಂ ತಂ ನಮಾಮಿ ॥

ಯಂ ಶೈವಾಸ್ಸಮುಪಾಸತೇ ಶಿವ ಇತಿ, ಬ್ರಹ್ಮೇತಿ ವೇದಾನ್ತಿನೋ,।ಬೌದ್ಧಾ ಬುದ್ಧ ಇತಿ, ಪ್ರಮಾಣಪಟವಃ ಕರ್ತೇತಿ ನೈಯಾಯಿಕಾಃ,॥ಅರ್ಹನ್ನಿತ್ಯಥ ಜೈನಶಾಸನರತಾಃ, ಕರ್ಮೇತಿ ಮೀಮಾಂಸಕಾಃ।ಸೋಽಯಂ ವೋ ವಿದಧಾತು ವಾಞ್ಛಿತಫಲಂ ತ್ರೈಲೋಕ್ಯನಾಥೋ ಹರಿಃ ॥

ಶ್ರೀರಾಮಚನ್ದ್ರಚರಣೌ ಮನಸಾ ಸ್ಮರಾಮಿ । ಶ್ರೀರಾಮಚನ್ದ್ರಚರಣೌ ವಚಸಾ ಗೃಣಾಮಿ ॥ ಶ್ರೀರಾಮಚನ್ದ್ರಚರಣೌ ಶಿರಸಾ ನಮಾಮಿ । ಶ್ರೀರಾಮಚನ್ದ್ರಚರಣೌ ಶರಣಂ ಪ್ರಪದ್ಯೇ ॥

ಯತ್ರ ಯತ್ರ ರಘುನಾಥಕೀರ್ತನಮ್ । ತತ್ರ ತತ್ರ ಕೃತಮಸ್ತಕಾಞ್ಜಲಿಮ್ ॥ ಬಾಷ್ಪವಾರಿಪರಿಪೂರ್ಣಲೋಚನಮ್ । ಮಾರುತಿಂ ನಮತ ರಾಕ್ಷಸಾನ್ತಕಮ್ ॥

ಅಚತುರ್ವದನೋ ಬ್ರಹ್ಮಾ ದ್ವಿಬಾಹುರಪರೋ ಹರಿಃ।ಅಭಾಲಲೋಚನಃ ಶಂಭುರ್ಭಗವಾನ್ಬಾದರಾಯಣಃ ॥

ಕೂಜನ್ತಂ ರಾಮರಾಮೇತಿ ಮಧುರಂ ಮಧುರಾಕ್ಷರಮ್ । ಆರುಹ್ಯ ಕವಿತಾಶಾಖಾಂ ವನ್ದೇ ವಾಲ್ಮೀಕಿಕೋಕಿಲಮ್ ॥

ಪ್ರಹ್ಲಾದನಾರದಪರಾಶರಪುಣ್ಡರೀಕ।ವ್ಯಾಸಾಮ್ಬರೀಷಶುಕಶೌನಕಭೀಷ್ಮದಾಲ್ಭ್ಯಾನ್ ॥ ರುಕ್ಮಾಙ್ಗದಾರ್ಜುನವಸಿಷ್ಠವಿಭೀಷಣಾದೀ । ನ್ಪುಣ್ಯಾನಿಮಾನ್ಪರಮಭಾಗವತಾನ್ಸ್ಮರಾಮಿ ॥

ಜಾನಕೀಜೀವನಸ್ಮರಣೇ-ಜಯಜಯರಾಮ; ಪಾರ್ವತೀಪತೇ-ಹರಹರಮಹಾದೇವ

ಪುಂಡರೀಕವರದ—ಹರಿವಿಠಲ, ಗುರುದೇವ—ದತ್ತ

**ಜಯಜಯ ರಘುವೀರಸಮರ್ಥ**



❋ श्रीगुरुभ्यो नमः ❋

# ಕೀರ್ತನಕಂಠಾಭರಣ

## ರಾಮಾಯಣ



## ಶ್ರೀರಾಮಜನ್ಮ



### ಪೀಠಿಕೆ—ಅವತಾರ

ಚಕ್ರವಾಕ—ಆದಿತಾಳ

ಅವತರಿಸುವನು । ಹರಿಯುತಿದಯದೊಳು ॥ ಪ ॥ ಸುವಿಮಲಭಕ್ತರ । ಭವಣಿಯ ಬಿಡಿಸಲು ॥ಅ.ಪ॥ ಧರ್ಮವು ಕುಗ್ಗಿದು । ಷ್ಕರ್ಮವು ಹಿಗ್ಗುತಿರೆ ॥ ಧರ್ಮವ ಸ್ಥಾಪಿಸೆ । ಪೇರ್ಮೆಯಿಂದಲಿ ತಾ ॥೧॥ ಮುಕ್ತಿಗಾಗಿ ಸುವಿ । ರಕ್ತಿಯ ಹೊಂದಿದ॥ ಭಕ್ತಿವಂತರಾ । ಸಕ್ತಿಗೆ ಮೆಚ್ಚುತ ॥ ೨ ॥ ದಾಸಜನಕೆ ಬಹು । ಲೇಸುಲೇಸೆಂಬಂತೆ ॥ ಭಾಸುರಮಹ ಚಿ । ದ್ವೇಷವ ತೋರುತ ॥ ೩ ॥

ಈ ಪ್ರಪಂಚದಲ್ಲಿ ಒಂದರ ಹಿಂದೊಂದು ಸುಖದುಃಖಗಳನ್ನನುಭವಿಸುತ್ತಿರುವ ಮನುಷ್ಯನು ಲೌಕಿಕಸುಖದ ಸೆಳೆತಕ್ಕೆ ಸಿಕ್ಕಿ ತನ್ನ ಆತ್ಮೋನ್ನತಿಯ ವಿಷಯದಲ್ಲಿ ಮೈಮರೆತಿರುವಾಗ ಅವನಿಗೆ ಅರಿವಿಲ್ಲದಂತೆ ಅವನ ಆಯುಸ್ಸು ಕಳೆದುಹೋಗುವದು. ಹೇಗೆಂದರೆ—

ಶ್ಲೋ॥ ಅಹೋರಾತ್ರಾಣಿ ಗಚ್ಛನ್ತಿ ಸರ್ವೇಷಾಂ ಪ್ರಾಣಿನಾಮಿಹ ।
ಆಯೂಂಷಿ ಕ್ಷಪಯನ್ತ್ಯಾಶು ಗ್ರೀಷ್ಮೇ ಜಲಮಿವಾಂಶವಃ ॥ —(ಶ್ರೀ.ರಾ)

ಅ॥ ಗ್ರೀಷ್ಮಋತುವಿನಲ್ಲಿ ಸೂರ್ಯಕಿರಣಗಳು ನೀರನ್ನು ಬೇಗ ಹೋಗಲಾಡಿಸುವಂತೆ ಈ ಲೋಕದಲ್ಲಿ ಎಲ್ಲ ಪ್ರಾಣಿಗಳಿಗೂ ಹಗಲುರಾತ್ರಿಗಳು ಆಯುಸ್ಸನ್ನು ಹೋಗಲಾಡಿಸುತ್ತವೆ.

ಮನುಷ್ಯನು ಇದರ ಕಡೆಗೆ ಕಣ್ಣುಹಾಕಿಲ್ಲವೆಂಬರ್ಥವನ್ನು ಯಕ್ಷಪ್ರಶ್ನೆಗೆ ಧರ್ಮರಾಯನು ಕೊಟ್ಟಿರುವ ಉತ್ತರವು ಸೂಚಿಸುತ್ತದೆ. ಅದೇನೆಂದರೆ—

ಶ್ಲೋ॥ ಅಹನ್ಯಹನಿ ಭೂತಾನಿ ಗಚ್ಛನ್ತೀಹ ಯಮಾಲಯಮ್ । ಶೇಷಾಃ
ಸ್ಥಾವರಮಿಚ್ಛನ್ತಿ ಕಿಮಾಶ್ಚರ್ಯಮತಃ ಪರಮ್ ॥ —(ಸಂ.ಭಾರ)

**ಅ|| ಈ ಲೋಕದಲ್ಲಿ ಪ್ರತಿದಿನವೂ ಪ್ರಾಣಿಗಳು ಯಮಲೋಕಕ್ಕೆ ಹೋಗುತ್ತಿದ್ದರೂ ಉಳಿದವರು ಸ್ಥಿರವಾಗಿರುತ್ತೇವೆಂದು ತಿಳಿಯುತ್ತಾರಲ್ಲ! ಇದಕ್ಕಿಂತ ಆಶ್ಚರ್ಯವೇನು?**

**ಹೀಗೆ ತಿಳಿಯುವದರಿಂದ ಆಗುವದೇನೆಂದರೆ—**

ಸಾಂ|| ಸಾವಿನ ಭೂಮಿಯೊಳಿರುವ ತಮ್ಮನು ಚಿರಂ । ಜೀವಿಗಳೆಂದಂದು ಕೊಂಡು || ಜೀವರೆಲ್ಲರು ನಾನು ನಾನೆಂದು ಹೇಳುತ । ಸಾವಿಗೆ ವಶರಾಗುವರು ||
—(ಮ.ಉ)

ಆ ಸಾವನ್ನು ತಪ್ಪಿಸುವದಕ್ಕಾಗಿ ದೊಡ್ಡವರು ಹೇಳಿರುವ ಉಪಾಯವೇನೆಂದರೆ—

ಆ|| ನಡೆಯುತಿರೆ ರವಿಯು ಮುಂದಕೆ । ನಡೆಯಿತು ನಿನ್ನಾಯುವೆಂದು ಗಡಿಯಾರ || ನಡೆಯುತ ನುಡಿಯುತ್ತಿರುವದು । ಬಿಡದೆ ಹರೇರಾಮಮಂತ್ರವನು ಜಪಿಸು ||
—(ಹ.ಮಂ.ಪ್ರ)

ಟಿ|| ಹರೇರಾಮಮಂತ್ರ— “ಹರೇ ರಾಮ ಹರೇ ರಾಮ ರಾಮ ರಾಮ ಹರೇ ಹರೇ । ಹರೇ ಕೃಷ್ಣ ಹರೇ ಕೃಷ್ಣ ಕೃಷ್ಣ ಕೃಷ್ಣ ಹರೇ ಹರೇ ||”

ಆ ಪರಮಾತ್ಮನೊಬ್ಬನೇ ನಿತ್ಯನೆಂಬ ಜ್ಞಾನವಿಲ್ಲದೆ ತೊಳಲುವವರನ್ನು ನೋಡಿ ಜ್ಞಾನಿಗಳು ಕನಿಕರಪಡುತ್ತಿರುವದೆಂತೆಂದರೆ—

ಧನ್ಯಾಸಿ—ಆದಿತಾಳ

ನಿತ್ಯಾನಿತ್ಯವಿವೇಕವನರಿಯದೆ । ಸತ್ತು ಹುಟ್ಟುವರೆಲ್ಲ || ಪ || ನಿತ್ಯವಿದನು ಸುವಿಚಾರದಿ ತಿಳಿದರೆ । ಸತ್ತು ಚಿತ್ತುಸುಖರಹರಲ್ಲ || ಅ.ಪ || ಹೆಂಡಿರು ಮಕ್ಕಳು ಹೊಲ ಮನೆ ಹಣವೆಂ । ದಂಡಲೆಯುವರಲ್ಲ || ಕಂಡು ಕಾಲವಶವೆಲ್ಲವಿದೆಂಬುದ । ಭಂಡತನದಿ ನೆಚ್ಚುವರಲ್ಲ! ||೧|| ಹರೆಯ ನಿಲ್ಲದೈಸಿರಿ ನಿಲ್ಲದು; ಸೌಂ । ದರಿಯ ನಿಲ್ವುದಲ್ಲ||ಹರಣವು ಮಿಂಚಿನ ಪರಿಯೆಂಬುದೆ ದಿಟ । ಕರಗ ವ್ರಣಕೆ ಕೈಪಿಡಿ ಬೇಕಿಲ್ಲ||೨|| ಹುಟ್ಟಿ ಬೆಳೆದು ಮಾರ್ಪಟ್ಟು ಕುಂದಿ ಕೈ । ಬಿಟ್ಟುಪೋಪುದೆಲ್ಲ ||ಗುಟ್ಟನಿದನು ಗುರು ತಿಟ್ಟು ತಿಳಿಯದೇ । ಕಟ್ಟಕಡೆಗೆ ಕೊರಗುವರಲ್ಲ! ||೩|| ದೇಹೇಂದ್ರಿಯಗಳೊಳಾತ್ಮ ಬೇರ್ಪಡದೆ । ತಾ ಹುದುಗಿಹನಲ್ಲ || ಈ ಹದನನು ತಿಳಿದಾತ್ಮ ನಿತ್ಯನೆಂ । ದೂಹಿಸಲಾರದೆ ಇಹರಲ್ಲ! || ೪ || ಮಡಕೆಯ ಮಾರ್ಪಾಡುಗಳದ ನೋಡುವ । ನಡೆಗೆ ನೇರ್ಪುವಿಲ್ಲ || ಜಡದೇಹಾದಿಯ ನೋಳ್ಪಾತುಮನದ । ಕೊಡೆಯನಿದನು ಶಂಕರ ಬಲ್ಲ || ೫ ||
—(ಅ.ಗೀ)

**ಟಿ|| ಅಂಡಲೆ—ಮೇಲೆ ಬೀಳು, ಆಸಕ್ತಿಯಿಡು. ಹರೆಯ—ಪ್ರಾಯ. ಹರಣ—ಪ್ರಾಣ. ಕೈಪಿಡಿ—ಕನ್ನಡಿ. ಬೇರ್ಪಡದೆ—ಒಂದೇ ರೂಪದಿಂದ. ಹುದುಗಿಹನು—ಸೇರಿರುವನು.**

**ಈ ದೇಹಾತ್ಮಬುದ್ಧಿಯಿಂದ ಅಧರ್ಮವು ಹೆಚ್ಚಿದೊಡನೆ ಪರಮಾತ್ಮನ ಅವತಾರವಾಗುವದು.**

ಶ್ಲೋ॥ ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ। ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್॥ —(ಭ.ಗೀ)

ಅ॥ ಅರ್ಜುನ, ಯಾವಾಗ ಧರ್ಮವು ಕುಗ್ಗಿ ಅಧರ್ಮವು ಹಿಗ್ಗುವದೊ ಆಗ ನಾನೇ ನನ್ನನ್ನು ಸೃಷ್ಟಿಮಾಡುತ್ತೇನೆ–ಎಂದರೆ ಅವತರಿಸುತ್ತೇನೆಂದು ಕೃಷ್ಣನ ಅಭಿಪ್ರಾಯ.

ಈಶ್ವರನ ಅವತಾರದ ಪ್ರಯೋಜನವನ್ನು ಪಡೆಯಬೇಕಾದರೂ ಮನುಷ್ಯನು ಆತ್ಮಸಾಕ್ಷಾತ್ಕಾರದ ಕಡೆಯು ತನ್ನ ಪ್ರಯತ್ನವನ್ನು ಮುಂದುವರಿಸುತ್ತಿರಲೇ ಬೇಕು. ಅದಕ್ಕೆ ಮೊದಲನೆ ಸಾಧನವೇನೆಂದರೆ—

ತ್ರಿ॥ ವಿಷಯಕ್ಕೆ ಕುದಿಯದಿರು; ಅಶನಕ್ಕೆ ಹರಿಯದಿರು; । ಆಸನಾಕ್ಷ್ಯಸಡಿಯ ಬಿಡದಿರು; ಗುರುಕರುಣಾ। ವಶವರ್ತಿಯಹುದು ಸರ್ವಜ್ಞ ॥ (ಸ.ವ)

ಹೀಗಾಗುವದಕ್ಕೆ—

ಷ॥ ಗೆಲಲು ಬೇಹುದು ಮೊದಲು ತನ್ನನು; ಬಳಿಕ ಹಗೆಗಳ ಗೆಲಲುಬೇಕ। ಗ್ಗಳಿಸಿದಿಂದ್ರಿಯಜಯವ ಗೆಲುವದೆ ತನ್ನ ಗೆದ್ದುದದು ॥ —(ಕ.ಭಾರ)

ಹೀಗೆ ಮನಸ್ಸನ್ನು ಗೆಲ್ಲುವದು ಕಷ್ಟವೆಂದು ಅರ್ಜುನನು ಹೇಳಿರುವದೇನೆಂದರೆ—

ಶ್ಲೋ॥ ಚಞ್ಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಢಮ್। ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಮ್॥ —(ಭ.ಗೀ)

ಅ॥ ಕೃಷ್ಣ, ಮನಸ್ಸು ಚಂಚಲವಾದದ್ದು, ಪರವಶಮಾಡುವಂಥದ್ದು, ಯಾರಿಗೂ ದಕ್ಕದಂಥದ್ದು, ದೃಢವಾದದ್ದು; ಅದನ್ನು ಗೆಲ್ಲುವದೆಂಬುದು ವಾಯುವನ್ನು ಗೆಲ್ಲುವಂತೆ ಕಷ್ಟವೇ ಸರಿ.

ಅದಕ್ಕೆ ಕೃಷ್ಣನ ಉತ್ತರ—

ಶ್ಲೋ॥ ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಹಂ ಚಲಮ್। ಅಭ್ಯಾಸೇನ ತು ಕೌನ್ತೇಯ ವೈರಾಗ್ಯೇಣ ಚ ಗೃಹ್ಯತೇ ॥ —(ಭ.ಗೀ)

ಅ॥ ಅರ್ಜುನ, ಮನಸ್ಸು ಚಂಚಲವಾದ್ದರಿಂದ ಅದನ್ನು ಬಿಗಿಹಿಡಿಯುವದು ಕಷ್ಟವೆಂಬ ಮಾತಿಗೆ ಸಂಶಯವಿಲ್ಲ. ಅಭ್ಯಾಸದಿಂದಲೂ ವೈರಾಗ್ಯದಿಂದಲೂ ಅದು ಹಿಡಿತಕ್ಕೆ ಸಿಕ್ಕುತ್ತದೆ.

ಅದುಕೂಡ ಕಷ್ಟವಾಗಿ ಕಂಡರೆ ದೇವರಿಗೆ ಶರಣುಹೋಗಬೇಕು. ಹೇಗೆಂದರೆ—

ಷ॥ ಗಿಳಿಯ ಮರಿಯನು ತಂದು, ಪಂಜರ। ದೊಳಗೆ ಪೋಷಿಸಿ, ಕಲಿಸಿ ಮೃದುನುಡಿ। ಗಳನು, ಲಾಲಿಸಿ ಕೇಳ್ವ ಪರಿಣತರಂತೆ ನೀನೆನ್ನ ॥ ತಿಳುಹಿ ಮತಿಯನು, ಎನ್ನ ಜಿಹ್ವೆಗೆ। ಮೊಳಗುವಂದದಿ ನಿನ್ನ ನಾಮಾ। ವಳಿಯ ಪೊಗಳಿಕೆಯಿತ್ತು ರಕ್ಷಿಸು ನಮ್ಮನನವರತ ॥ —(ಹ. ಭ)

ಟಿ॥ ಪರಿಣತರಂತೆ–ಜಾಣರ ಹಾಗೆ. ಮೊಳಗುವಂದದಿ–ಗಟ್ಟಿಯಾಗಿ ಹೇಳುವ ಹಾಗೆ.

ಇದರಿಂದ ಮನಸ್ಸಿನಲ್ಲಿ ಭಕ್ತಿಯಂಕುರಿಸುವದು. ಆ ಭಕ್ತಿಯಿಂದ ಮುಕ್ತಿಯಾಗುವದು.

ಶ್ಲೋ॥ ಭಕ್ತಿಃ ಪ್ರಸಿದ್ಧಾ ಭವಮೋಕ್ಷಣಾಯ। ನಾಸ್ತ್ಯತ್ತತಃ ಸಾಧನಮಸ್ತಿ ಕಿಂಚಿತ್ ॥ —(ಅ.ರಾ)

ಅ|| ಸಂಸಾರದ ಬಂಧನನ್ನು ಕಳೆಯುವದಕ್ಕೆ ಭಕ್ತಿಯೇ ಹೆಸರಾದದ್ದು. ಅದರ ಹೊರತು ಬೇರೆ ಯಾವ ಸಾಧನವೂ ಇಲ್ಲ.

ಆ ಭಕ್ತಿಯು "ಸಾ ಪರಮಪ್ರೇಮರೂಪಾ" (ನಾ.ಭ.ಸೂ) ಎಂಬಂತೆ ಹೆಚ್ಚಿನ ಪ್ರೇಮದ ರೂಪವಾಗಿರುವದು. ಆ ಪ್ರೇಮವು ಎಷ್ಟು ಬೆಳೆಯಬೇಕೆಂದರೆ—

ವೃ|| ಬಂದೊಲವಿಂದೆ ನಿನ್ನಿದಿರೊಳೊಪ್ಪದೆ ಸಿಂದು ಕರಂಗಳಂ ನೊಸ | ಲ್ಗೊಂದಿಸಿ ದೇವ ದೇವ ಕರುಣಾಕರ ಬಿನ್ನಪವಾತ್ಮಸಿದ್ಧಿಯಿ || ನ್ನೆಂದೆಸಗಪ್ಪುದೆಂದೊಡೆಲೆ ಕಂದ ಕಡಂಗದಿರಿಂದು ನಾಳೆ ನ | ಪ್ಪೆಂದವೆಯುಪ್ಪೆಯೆಂಬ ನುಡಿಗೇಳ್ವ ನದೆಂದಪರಾಜಿತೇಶ್ವರಾ || —(ಅ.ಶ)

ಟಿ|| ಒಪ್ಪದೆ–ಗಂಭೀರವಾಗಿ. ನೊಸಲ್ಗೆ–ಹಣೆಗೆ. ಕಡಂಗದಿರು–ತಳಮಳಿಸಬೇಡ.

ಹೀಗೆ ದೇವರ ಕಡೆಗೆ ಹರಿಯುತ್ತ ರಾಮಮಂತ್ರದ ಸಿದ್ಧಿಯ ವಿಷಯಕ್ಕೆ ಹಂಬಲಿಸುವದು—

ಖರಹರಪ್ರಿಯ—ರೂಪಕ

ಮಂತ್ರವೆಂದು ಸಿದ್ಧಿಸುವದೊ? | ಶ್ರೀರಾಮತಾರಕ||ಪ||ಮಂತ್ರಗಳೊಳಗೆಲ್ಲ ಮಹಾ | ಮಂತ್ರವೆಂದು ಹೆಸರು ಪಡೆದ ||ಅ.ಪ|| ಗಿರಿಶನು ಬಹುಪ್ರೀತಿಯಿಂದ | ಗಿರಿಜೆಗೊರೆದುದಾಗ ಮತ್ತೆ || ನರರಿಗೆಲ್ಲ ಕಾಶಿಯಲ್ಲಿ | ಮರಣಕಾಲದಲ್ಲಿ ಪೇಳ್ವ || || ೧ || ಸುರನರಕಿಂಪುರುಷರೆಲ್ಲ | ಪರಮಪ್ರೀತಿಯಿಂದಲಿ || ಭರದಿ ಜಪಿಸಿ ಸೌಖ್ಯದಿಂದ | ಮೆರೆಯುವಂತೆ ಮಾಡಿರುವಾ || ೨ || ಮರವೆಯೆಂಬ ಕತ್ತಲೆಯ | ತರಣಿಯಂತೆ ಓಡಿಸುವ || ಪರಮತತ್ತ್ವವನ್ನು ತಿಳಿಸಿ ವರಚಿತ್ಸುಖವೀಯುವಂಥ || ೩ || (ಭಕ್ತಿ.ಗೀ)

ಇಲ್ಲಿ ರಾಮನಾಮದ ವಿಷಯಕ್ಕೆ ಅಷ್ಟು ಪ್ರಾಶಸ್ತ್ಯವೇಕೆಂದರೆ—

ಶ್ಲೋ|| ರಕಾರೋಚ್ಚಾರಮಾತ್ರೇಣ ಮುಖಾನ್ನಿರ್ಯಾಂತಿ ಪಾತಕಾಃ | ಪುನಃ ಪ್ರವೇಶಭೀತ್ಯಾ ಚ ಮಕಾರಸ್ತು ಕವಾಟವತ್ || —(ರಾ.ಕ.ಅ)

ಅ|| ರಕಾರವನ್ನುಚ್ಚರಿಸುತ್ತಲೆ ಮುಖದಿಂದ ಪಾಪಗಳೆಲ್ಲ ಹೋಗುತ್ತವೆ. ಅವು ಮತ್ತೆ ಹಿಂದಿರುಗಿ ಬಂದಾವೆಂದು ಮಕಾರವು ಬಾಗಿಲಂತೆ ಆಗುತ್ತದೆ.

ಇದೇ ವಿಷಯದಲ್ಲಿ ಮತ್ತೊಬ್ಬ ಕವಿ ಹೇಳುವದೇನೆಂದರೆ—

ಶ್ಲೋ|| ಶ್ರೀರಾಮಪಾದಾಮ್ಬುಜಸೇವಕೇಭ್ಯಃ | ಕಥಾರ್ಚನಧ್ಯಾನಪರಾಯಣೇಭ್ಯಃ||ಸಾನ್ನಾಯಿಕಾಮೋದಕಶಾಯಿತೇಭ್ಯೋ | ರೋಚೇತ ಕಿಂ ರೇಽಮೃತಸಮ್ಪದೇಭ್ಯಃ || —(ಸು. ಲಾ.)

ಅ|| (೧) (ಸಾನ್ನಾಯಿಕಾಮೋದಕಶಾಯಿತೇಭ್ಯಃ) ಹಾಲಿನ ಮೇಲಿನ ಕೆನೆಯನ್ನೇ ಚೆನ್ನಾಗಿ ತಿಂದು ತೇಗಿರುವವರಿಗೆ (ಅಮೃತಸಂಪತ್) ಹಾಲೇನಾದರೂ ಬೇಕೆನಿಸಿತೇ? ಅದರಂತೆ (೨)ಶ್ರೀರಾಮಚಂದ್ರನ ಚರಣಕಮಲಸೇವೆಯಲ್ಲಿ ಯಾವಾಗಲೂ ಮಗ್ನರಾದವರಿಗೂ, ಅವನ ಗುಣಾನುವಾದ, ಪೂಜೆ, ಧ್ಯಾನ– ಇವುಗಳಲ್ಲಿ ಆಸಕ್ತರಾದವರಿಗೂ, (ಸಾನ್ನಾಯಿಕಾಮೋದಕಶಾಯಿ

ತೇಭ್ಯಃ) ರಾಮಸೇವೆಯ ಪ್ರಭಾವದಿಂದ ಪ್ರಾಪ್ತವಾಗಿರುವಂಥ, ಬ್ರಹ್ಮಲೋಕಕ್ಕಿಂತಲೂ ಮೇಲೆ ಇರುವಂಥ ಸಾಂತಾನಿಕವೆಂಬ ಹೆಸರಿನ ಲೋಕಕ್ಕೆ ಸೇರಿ ಅಲ್ಲಿ ಆ ಆನಂದದಲ್ಲಿ ತಲ್ಲೀನರಾಗಿರುವವರಿಗೂ ಆ ಆನಂದದ ಮುಂದೆ (ಅನ್ಯೈಶಸಂಪತಾ) ಮೋಕ್ಷವೇನಾದರೂ ಬೇಕೆನಿಸೀತೇ?

ಮತ್ತೊಂದ್ಯೇನೆಂದರೆ—

ಶ್ಲೋ॥ ಶ್ರಾನ್ತೋಽಸಿ ಚೇತ್ಸಂಸ್ಮೃತಿತೀವ್ರತಾಪತಃ । ಸೀತಾನ್ವಿತಂ ಮಾರುತ-ಪೋತಸೇವಿತಮ್ ॥ ಪಲಾಶಸಙ್ಘಾತಸಮೃದ್ಧವಿಕ್ರಮಮ್ । ರಾಮಂ ಧೃತಾ-ಕಾರಮುಪೇಹಿ ಸತ್ವರಮ್ ॥ —(ಸು.ಲಾ)

ಅ॥ (೧)ಸುತ್ತಿ ಸುತ್ತಿ ಬಹಳವಾದ ತಾಪದಿಂದ ಬಳಲಿದ್ದರೆ (ಸೀತ+ಅನ್ವಿತಂ) ತಣ್ಣಗಿರುವಂಥ (ಮಾರುತಪೋತಸೇವಿತಂ) ಗಾಳಿಬೀಸುತ್ತಿರುವಂಥ (ಪಲಾಶಸಙ್ಘಾತಸಮೃದ್ಧ+ವಿ+ಕ್ರಮಂ) ಮುತ್ತುಗದೆಲೆಯ ಪೊದೆಯಲ್ಲಿ ಬಗೆಬಗೆಯ ಪಕ್ಷಿಗಳ ವಿಹಾರವುಳ್ಳಂಥ ಧೃತ+'ಆ'ಕಾರಂ ರಾಮಂ) ಆ ಎಂಬ ಅಕ್ಷರದಿಂದ ಕೂಡಿದಂಥ ರಾಮನನ್ನು ಎಂದರೆ ಆರಾಮವನ್ನು—ಉಪವನವನ್ನು—ಬೇಗ ಹೊಂದು. ಇದರಂತೆ (೨)ಸಂಸಾರವೆಂಬ ತೀವ್ರತಾಪದಿಂದ ಬಳಲಿದ್ದರೆ (ಸೀತಾ+ಅನ್ವಿತಂ) ಸೀತಾದೇವಿಯಿಂದ ಕೂಡಿರುವಂಥ (ಮಾರುತಪೋತಸೇವಿತಂ) ವಾಯುಪುತ್ರನಾದ ಮಾರುತಿಯಿಂದ ಸೇವೆಯನ್ನು ಪಡೆಯುತ್ತಿರುವಂಥ (ಪಲಾಶಸಙ್ಘಾತ-ಸಮೃದ್ಧ+ವಿಕ್ರಮಂ) ರಾಕ್ಷಸಸಮುದಾಯದ ಮೇಲೆ ಬೇಕಾದಷ್ಟು ಪರಾಕ್ರಮವನ್ನು ತೋರಿಸಿರುವಂಥ (ಧೃತ+ಆಕಾರಂ) ಸಗುಣರೂಪವನ್ನು ಧಾರಣೆಮಾಡಿರುವಂಥ ಶ್ರೀರಾಮಚಂದ್ರನನ್ನು ಸೇವಿಸು.

ಈ ಪ್ರಕಾರ ಮಾಡಿದೆಯೆಂದರೆ ನಿನಗೆ ಸಂಸಾರದಲ್ಲಿ ಭಯವಿಲ್ಲ.

ಕಾನಡ—ಆದಿತಾಳ

ರಾಮನಾಮ ಭಜಿಸಿದವರಿಗುಂಟೆ ಭವದ ಬಂಧನ? ॥ ಪ ॥ ಕಾಮಹರನ ಸತಿಯು ಸದಾ। ನೇಮದಿಂದ ಭಜಿಸುವ ॥ ಅ.ಪ ॥ ಶಿವನು ಧನ್ಯನಾದ; ಶಿವನ। ಯುವತಿ ಪಾವನೆಯಾದಳು; ॥ ರವಿಯ ಸುತನು ವರವ ಪಡೆದ; । ಧ್ರುವನು ದ್ವಿಜನೆನಿಸಿದ ॥ ೧ ॥ ಕರಿವರ ಪ್ರಹ್ಲಾದ ದ್ರೌಪದಿ। ವರವಿಭೀಷಣರೆಲ್ಲರು ॥ ಹರಿಯ ನಾಮವ ಸ್ಮರಿಸಿ ಸುಖ। ಭರಿತರಾಗಲಿಲ್ಲವೆ? ॥ ೨ ॥ ಗಿರಿಜೆ ರಾಮಮಂತ್ರದಿಂದ। ಪರಮಮಂಗಳೆಯಾದಳು ॥ ವರದ ಗೋಪಾಲವಿಠಲನಾಮ । ದುರಿತಕಾನನ ಪಾವಕ ॥ ೩ ॥ —(ದಾ)

ಈ ಫಲವನ್ನು ಕೊಡುವದಕ್ಕೇ ದೇವರು ತಾನೇ ಬರುವನೆಂದು ಭಾಗವತಶಿರೋಮಣಿಗಳು "ಅವತರಿಸುವನು। ಹರಿಯು ತಿದಯದೊಳು" ಎಂದು ಉಪದೇಶಮಾಡಿರುವದು.

ಈ ಪೀಠಿಕೆಯ ಉಪದೇಶಗಳಿಗೆಲ್ಲ ಉದಾಹರಣೆಯಾಗಿ ಶ್ರೀರಾಮಜನ್ಮದ ಆಖ್ಯಾನವು ನಿರೂಪಣಮಾಡಲಾಗುವದು.



## ಆಖ್ಯಾನ

ಕೀ॥ ಭೂಮಿದೇವಿ ರಾವಣ್ಣಮುಖದೈತ್ಯ । ಸ್ತೋಮದ ಬಾಧೆಗೆ ಮನ ಬೆದರೆ ॥ ನೇಮದಿಂದ ಸುರರೊಂದಿಗೆ ಬ್ರಹ್ಮನ । ಧಾಮಕ್ಕೈದಿದಳು ತಾ ಚದುರೆ ॥

ಅಲ್ಲಿ ಭೂದೇವಿಯು ಬ್ರಹ್ಮನನ್ನು ಪ್ರಾರ್ಥಿಸಿದ್ದೇನೆಂದರೆ—

ಕಾನಡ—ಅಟತಾಳ.

ಕಾಯ್ಯೊ । ಕಮಲಾಸನ । ಕಾಯ್ಯೊ ॥ ಪ ॥ ಅಸುರರ ಬಾಧೆಗೆ । ದೆಸೆಗೆಟ್ಟು ದೇಶದ ॥ ಋಷಿಗಳೆಂಬುವರೆಲ್ಲ । ನುಸಿಯಾಗಿ ಹೋದರು ॥ ೧ ॥ ಅಜ್ಞಾನಿದೈತ್ಯರ । ವಿಘ್ನಗಳಿಂದಲಿ ॥ ಯಜ್ಞಯಾಗಗಳೆಲ್ಲ । ಭಗ್ನವಾದವೊ ದೇವ ॥ ೨ ॥ ಚಲದಿಂದ ವಂಚಿಪ । ಖಳರ ಹಾವಳಿಯಿಂದ । ಕುಲವನಿತೆಯರೆಲ್ಲ । ತಳಮಳಿಸುವರೀಗ ॥ ೩ ॥ ಚಿತ್ತವು ಕದಡಿತು; । ಸತ್ವವು ಮುದುಡಿತು; । ಚಿತ್ರಭಾನಕೆ ಮುಸು । ಕತ್ತಲು ಕವಿದಿತು ॥ ೪ ॥

ಅದರ ಪ್ರತೀಕಾರವು ತನಗಸಾಧ್ಯವೆಂದು ಹೇಳಿ ಆಗ ಬ್ರಹ್ಮನು ಎಲ್ಲರೊಡನೆ ವಿಷ್ಣುವಿನ ದರ್ಶನಕ್ಕಾಗಿ ಕ್ಷೀರಸಾಗರಕ್ಕೆ ಹೋಗಿದ್ದಾನೆ. ವಿಷ್ಣು ಅಲ್ಲಿಯೇ ಇರುವದಕ್ಕೆ ಕಾರಣವೇನೆಂದರೆ—

ಶ್ಲೋ॥ ಅಸಾರೇ ಖಲು ಸಂಸಾರೇ ಸಾರಂ ಶ್ವಶುರಮಂದಿರಮ್ । ಹರೋ ಹಿಮಾಲಯೇ ಶೇತೇ ಹರಿಃ ಶೇತೇ ಪಯೋದಧೌ ॥ —(ಸು)

ಅ॥ ಅಸಾರವಾದ ಸಂಸಾರದಲ್ಲಿ ಮಾವನ ಮನೆಯೇ ಸಾರವತ್ತಾದದ್ದು. (ಆದ್ದರಿಂದಲೇ) ಈಶ್ವರನು ಹಿಮಾಲಯದಲ್ಲಿಯೂ ವಿಷ್ಣು ಕ್ಷೀರಸಮುದ್ರದಲ್ಲಿಯೂ ಮಲಗಿದ್ದಾರೆ.

ಅಲ್ಲಿ ಬ್ರಹ್ಮಮೊದಲಾದವರು ಪ್ರಾರ್ಥಿಸಿದ್ದೆಂತೆಂದರೆ—

ಕಲ್ಯಾಣಿ—ಏಕತಾಳ.

ನಿನ್ನೊರತು ಪೊರೆವರನು ನಾಸರಿಯೆ ಹರಿಯೆ ॥ ಪ ॥ ಆದಿಮೂಲ ನಿನ್ನ ಪಾದ ನಂಬಿದೆ । ಭೇದವೆಣಿಸದೆ ಮೋದದಾಯಕ ॥ ಆದರದಿಂದಲಿ ಕಾಯೊ । ಸೋದರ ಮಾವನ ವೈರಿ । ಮೇದಿನೀಪತಿಯೆ ನಿನ್ನಾ । ರಾಧನೆ ಮಾಡಿಸೊ ಹರಿಯೆ ॥ ೧ ॥ ದಾನವಾಂತಕ ನೀನೆ ಗತಿಯೆಂದು । ಸಾನುರಾಗದಿ ಧ್ಯಾನ ಮಾಡುವೆ ॥ ಮಾನಾಭಿಮಾನವು ನಿನ್ನ । ಧೀನವೊ ಗೋಪಾಲಕೃಷ್ಣ । ಭಾನುಕೋಟಿತೇಜ ಎನ್ನ । ದೀನತೆಯ ಕಳೆ ಹರಿಯೆ ॥ ೨ ॥ ಪಂಕಜಾಕ್ಷ, ಮುಕುಂದ, ಮಾಧವ, । ಕಿಂಕರಾಮರವಂದ್ಯ, ಶ್ರೀಹರಿ ॥ ಸಂಕಟಗಳನು ಹರಿಸಿ । ಬಿಂಕದಿಂ ಪರಿಪಾಲಿಸುವ । ಕಂಕಣ ಧರಿಸಿದ ಸಿರಿ । ವೆಂಕಟವಿಠಲ ಹರಿಯೆ ॥ ೩ ॥ —(ದಾ)

ಶ್ಲೋ॥ ತತಃ ಸ್ಫುರತ್ಸಹಸ್ರಾಂಶುಸಹಸ್ರಸದೃಶಪ್ರಭಃ । ಆವಿರಾಸೀದ್ಧರಿಃ ಪ್ರಾಚ್ಯಾಂ ದಿಶಾಂ ವ್ಯಪನಯಂಸ್ತಮಃ ॥ —(ಅ.ರಾ)

ಅ॥ ಆಮೇಲೆ ಸಹಸ್ರಸೂರ್ಯರ ಕಾಂತಿಗೆ ಸಮನಾಗಿ ಎಲ್ಲ ಕಡೆಯ ಕತ್ತಲೆಯನ್ನೂ ಹೋಗಲಾಡಿಸಿ ಹರಿಯು ಮುಂದುಗಡೆ ಕಾಣಿಸಿಕೊಂಡನು.

ಆಗ ಶರಣುಬಂದಿರುವದಕ್ಕೆ ಕಾರಣವೇನೆಂದು ಬ್ರಹ್ಮನು ಹೇಳಿದ್ದೇನೆಂದರೆ—

ಶ್ಲೋ॥ ಭಗವನ್, ರಾವಣೋ ನಾಮ ಪೌಲಸ್ತ್ಯತನಯೋ ಮಹಾನ್। ರಾಕ್ಷಸಾನಾಮಧಿಪತಿರ್ಮದ್ದತ್ತವರದರ್ಪಿತಃ । ತ್ರಿಲೋಕೀಂ ಲೋಕಪಾಲಾಂಶ್ಚ ಬಾಧತೇ ವಿಶ್ವಬಾಧಕಃ ॥ —(ಅ.ರಾ)

ಅ॥ ಹೆ, ದೇವ, ಪೌಲಸ್ತ್ಯನ ಮಗನಾದ ಮತ್ತು ರಾಕ್ಷಸರಧಿಪತಿಯಾದ ಪ್ರಸಿದ್ಧನಾದ ರಾವಣನು ನನ್ನಿಂದ ಪಡೆದ ವರದ ಸೊಕ್ಕಿನಿಂದ ಜಗತ್ತಿಗೇ ಬಾಧಕನಾಗಿ ಮೂರು ಲೋಕಗಳನ್ನೂ ಲೋಕಪಾಲಕರನ್ನೂ ಕೂಡ ಬಾಧಿಸುತ್ತಿದ್ದಾನೆ.

ಅದೆಂತೆಂದರೆ—

ಷ॥ ಹರನು ಪೂಜೆಯು ಬಂಗಸುನು, ಸುರ । ರೆರೆಯು ಕಂಚುಕಿಯುನಲ ಬಾಣಸಿ। ಯಿರವುನೆಯು ದೌವಾರಿಕರು ಯುಮುನಿಖುತಿಯೆನಿಸುವರು ॥ ವರುಣ ಜಲಧಾರಕನು, ಮರುತನು। ಸುರಗಿಯುವ, ಭಂಡಾರಕನು ಕಿನ್ನರರ ದೊರೆಯುಳಿದವರ ಸೇವೆಯುನೇನ ಬಣ್ಣಿಸುವೆ? —(ರಾ.ಕ.ಕು)

ಟಿ॥ ಎರೆಯ—ಒಡೆಯ. ಕಂಚುಕಿ—ಸೇವಕ. ದೌವಾರಿಕರು—ಬಾಗಿಲುಕಾಯುವವರು. ಸುರಗಿ—ಚಾಮರ. ಕಿನ್ನರರ ದೊರೆ-ಕುಬೇರ.

ಶ್ಲೋ॥ ಮಾನುಷೇಣ ಮೃತಿಸ್ತಸ್ಯ ಮಯಾ ಕಲ್ಯಾಣ ಕಲ್ಪಿತಾ। ಅತಸ್ತ್ವಂ ಮಾನುಷೋ ಭೂತ್ವಾ ಜಹಿ ದೇವರಿಪುಂ ಪ್ರಭೋ ॥ —(ಅ.ರಾ)

ಅ॥ ನಾನು ಅವನಿಗೆ ಮನುಷ್ಯನಿಂದ ಮರಣವನ್ನು ಕಲ್ಪಿಸಿರುವೆನು. ಆದ್ದರಿಂದ ನೀನು ಮನುಷ್ಯನಾಗಿ ಆ ರಾಕ್ಷಸನನ್ನು ಕೊಲ್ಲು.

ಆಗ ಧರ್ಮವು ಕುಗ್ಗಿದು। ಷ್ಕರ್ಮವು ಹಿಗ್ಗುತಿರೆ—ಎಂದು ಮೊದಲಾಗಿ ಭಾಗವತ ಶಿರೋಮಣಿಗಳೆಂದಂತೆ ತನ್ನವತಾರಕ್ಕಿದು ಸಮಯವೆಂದರಿತು—

ಷ॥ ಜಲಜಗರ್ಭನ ಬಿನ್ನಹಕೆ ಹರಿ। ನಸುನಗುತ ಕೃಪೆಯಲಿ ಕಟಾಕ್ಷದ। ರಸುಮೆಯನು ಸೂಸಿದನು ಸುರರ ವಿಷಾದರಜನಿಯಲಿ ॥ ನಸಿದಿರತಿ ಕುದಿದಿರುರೆ ನೊಂದಿರಿ। ಜನವಳಿದಿರನುಗೆಟ್ಟಿರಖಿಳಾ । ಯುಸಕೆ ಸಂದಿರಿ ಸ್ವೈರಿಸಿದಿರಿನ್ನಂಜಬೇಡೆಂದ ॥ —(ತೊ.ರಾ)

ಪಾ॥ ಎನ್ನನೆ ಸುತನಾಗೆನ್ನುತ ಕಾಶ್ಯಪ। ಮುನ್ನವೆ ದಶರಥನಾದ । ಇನ್ನವಗಾತ್ಮಜನೆನ್ನಿಸಿ ನಿಮ್ಮೊಳ। ಗಿನ್ನೇಂ ತೋರುವೆ ಮೋದ ॥

ಇದರಿಂದ ಸಂತುಷ್ಟನಾದ ಬ್ರಹ್ಮನು

ದಿಂ॥ ದೇವನೀಗಿನ್ನೇಂ ಮನುಜನಪ್ಪನೀಗ । ತೀವಿ ತೋರ್ಪಂ ತಾನಾಮಹಾಸುರಾಗ ॥ ನೀವು ವಾನರರೊಳ್ ಹುಟ್ಟಬೇಕು ಬೇಗ। ದೇವಕಾರ್ಯಂಗೆಯ್ಯಲಿದು ಸುಯೋಗ ॥

ಎಂದು ದೇವತೆಗಳೆಲ್ಲ ಹೇಳಲು ಇದರಿಂದ ಸಂತುಷ್ಟರಾದ ದೇವತೆಗಳು ತಮ್ಮ ಲೋಕಕ್ಕೆ ಹೋದ ಮೇಲೆ ಇತ್ತ ಏನಾಯಿತೆಂದರೆ—

ಕೇ॥ ಕೌಸಲ್ಯೆಯ ನೀಂ ಸ್ವೀಕರಿಸೆಂದು ಮ। ಹಾಸಂರಂಭದಿ ದಶರಥನ ॥ ಕೋಸಲೇಶನಿಚ್ಛಿಸಿದನಯೋಧ್ಯಾ। ದೇಶದಿ ಮೆರೆಯುವ ಮನುಮಥನ ॥

ಹೀಗೆ ಅವನು ದಶರಥನನು ಕರೆಯುಕಳುಹಿಸಿದಾಗ ದಶರಥನು ಸರಯೂನದಿಯಲ್ಲಿ ಜಲ ಕ್ರೀಡೆಯನ್ನು ಮಾಡುತ್ತಿದ್ದನು. ಈ ಸಮಯದಲ್ಲಿ ದೇವತೆಗಳೆಲ್ಲ ವಿಷ್ಣುವಿನ ಬಳಿಗೆ ಹೋಗಿ ಬಂದದ್ದನು ತಿಳಿದ ರಾವಣನು ತನಗೆ ಮರಣವಿಲ್ಲೆಂದು ತಿಳಿದು ಬ್ರಹ್ಮನನ್ನು ಹಂಗಿಸುವದಕ್ಕಾಗಿ—

ಶ್ಲೋ॥ ಕಸ್ಮಾನ್ಮೇ ಮರಣಂ ಬ್ರಹ್ಮನ್ತತ್ತ್ವಂ ಮಾಂ ವಕ್ತುಮರ್ಹಸಿ ।
—(ಅ.ರಾ)

ಅ॥ ಎಲೈ ಬ್ರಹ್ಮನೆ, ನನಗೆ ಯಾರಿಂದ ಮರಣವೆಂಬ ನಿಜವನ್ನು ನೀನು ಹೇಳಬೇಕು.

ಎಂದು ಕೇಳಿದನು. ಆಗ ಅವನು ನಿನಗೆ ದಶರಥನ ಮಗನು ಮೃತ್ಯುವಾಗುವನೆಂದನು.

ಶ್ಲೋ॥ ಸೂನೃತಂ ಸರ್ವಶಾಸ್ತ್ರಾರ್ಥನಿಶ್ಚಿತಜ್ಞಾನಶೋಭಿತಮ್ । ಭೂಷಣಂ ಸರ್ವವಚಸಾಂ ಲಜ್ಜೇವ ಕುಲಯೋಷಿತಾಮ್ ॥ —(ಸು)

ಅ॥ ಸಮಸ್ತಶಾಸ್ತ್ರಾರ್ಥಗಳ ನಿಶ್ಚಯಜ್ಞಾನದಿಂದ ಶೋಭಿತವಾದ ಸತ್ಯವು ಕುಲಸ್ತ್ರೀಯರಿಗೆ ನಾಚಿಕೆಯು ಹೇಗೋ ಹಾಗೆ ಸಮಸ್ತವಾಕ್ಕುಗಳಿಗೂ ಅಲಂಕಾರಪ್ರಾಯವಾದದ್ದು.

ಬ್ರಹ್ಮನು ಆಡಿದ ಇಂಥ ಸತ್ಯದ ಮಾತನ್ನು ಕೇಳಿ ರಾವಣನು ತಾನು ಪ್ರಯತ್ನದಿಂದ ಆ ಮೃತ್ಯುವನ್ನು ಗೆಲ್ಲುವೆನೆನಲು ಬ್ರಹ್ಮನು— •

ಶ್ಲೋ॥ ಕರೋತು ನಾಮ ನೀತಿಜ್ಞೋ ವ್ಯವಸಾಯಮಿತಸ್ತತಃ । ಫಲಂ ಪುನಸ್ತದೇವಾಸ್ಯ ಯದ್ವಿಧೇರ್ಮನಸಿ ಸ್ಥಿತಮ್ —(ಸು)

ಅ॥ ನೀತಿಜ್ಞನಾದವನು ಬೇರೆ ಬೇರೆ ಪ್ರಯತ್ನಗಳನ್ನು ಮಾಡಿದರೂ ಕೊನೆಗೆ ಅವನಿಗೆ ದೈವದ ಮನಸ್ಸಿನಲ್ಲಿದ್ದದ್ದೇ ಫಲಿಸುವದು.

ಎಂದು ಹೇಳುತ್ತಲೇ ಈ ಮಾತನ್ನು ಸುಳ್ಳುಮಾಡಿ ತೋರಿಸುತ್ತೇನೆಂದು ರಾವಣನು ಒಡನೆ ಪುಷ್ಪಕಾರೂಢನಾಗಿ ಹೋಗಿ

ಶ್ಲೋ॥ ನೌಕಾಸ್ಥಂ ತಂ ದಶರಥಂ ಜಿತ್ವಾ ಯುದ್ಧ್ಯೈಃ ಸುದಾರುಣೈಃ । ಬಭಞ್ಜ ನಿಜಪಾದೇನ ತಾಂ ನೌಕಾಂ ಸರಯೂಜಲೇ ॥ —(ಅ.ರಾ)

ಅ॥ ನೌಕದಲ್ಲಿ ಕುಳಿತಿದ್ದ ದಶರಥನನ್ನು ಭಯಂಕರವಾದ ಯುದ್ಧದಿಂದ ಗೆದ್ದು ಆ ನೌಕೆಯನ್ನು ತನ್ನ ಕಾಲಿನಿಂದ ಒಡೆದು ಸರಯೂನೀರಿನಲ್ಲಿ ಚೆಲ್ಲಾಡಿಬಿಟ್ಟನು.

ಆಗ ದೈವಯೋಗದಿಂದ ದಶರಥನೂ ಸುಮಂತ್ರನೂ ಒಂದು ನೌಕಾದಂಡವನ್ನು ಹಿಡಿದುಕೊಂಡು ಪ್ರವಾಹದಲ್ಲಿ ಸುರಕ್ಷಿತರಾಗಿ ಮುಂದೆ ಸಾಗಿದರು. ಆಗ ದಶರಥನು ವಿಷಾದದಿಂದ ದೇವರಿಗೆ ಶರಣುಹೋದದ್ದೆಂತೆಂದರೆ—

ಧನ್ಯಾಸಿ—ಆದಿತಾಳ

ಕರುಣಾಕರ ನೀನೆಂಬುವದೇಕೋ। ಭರವಸವಿಲ್ಲೆನಗೆ ॥ ಪ ॥ ಪರಿಪರಿಯಲಿ ಈ। ನರಜನ್ಮವನಿತ್ತು ॥ ತಿರುತಿರುಗಿಸಿ ಮನ। ಕರಗಿಸುವದ ಕಂಡು ॥ಅ.ಪ॥ ಕರಿಧ್ರುವ ಬಲಿಪಾಂಚಾಲೆಯ ಹಲ್ಯೆಯ। ಪೊರೆದವ ಭವದಲಿ ನೀನಂತೆ ॥ ಅರಿತು ವಿಚಾರಿಸಿ ನೋಡಲದೆಲ್ಲವು। ಮೆರವುದೀಗ ಕಂತೆಗಳಂತೆ ॥೧॥ ಕರುಣಾಕರ ನೀನಾದರೆ ಈಗಲೆ। ಕರಪಿಡಿದೆನ್ನನು ಹರಿ ಕಾಯೊ ॥ ಸರಸಿಜಾಕ್ಷನೆ ಅರಸು ನೀನಾದರೆ। ದುರಿತಗಳೆನ್ನನು ಪೀಡಿಪುದುಂಟೆ? ॥ ೨ ॥ ಮರಣಕಾಲದಲಿ ಅಜಾಮಿಳಗೊಲಿದೆ ನೀ। ಗರುಡಧ್ವಜನೆಂಬ ಬಿರುದಿನಿಂದ ॥ ವರಬಿರುದುಗಳಿನ್ನಿರಬೇಕಾದರೆ। ತ್ವರಿತದಿ ಸಲಹೋ ಪುರಂದರವಿಠಲ ॥ ೩ ॥ —(ದಾ)

ದೇವರ ದಯದಿಂದ ದಶರಥನು ಅತ್ತ ಕ್ಷೇಮದಿಂದ ಸಾಗುತ್ತಿರಲು ಇತ್ತ—

ಶ್ಲೋ॥ ರಾವಣಃ ಕೋಸಲಾಂ ಗತ್ವಾ ಕೃತ್ವಾ ಪರಮಸಙ್ಗರಮ್।
ಕೋಸಲಾಖ್ಯಂ ನೃಪಂ ಜಿತ್ವಾ ಕೌಸಲ್ಯಾಂ ತಾಂ ಜಹಾರ ಸಃ ॥ —(ಅ.ರಾ)

ಅ॥ ರಾವಣನು ಕೋಸಲದೇಶಕ್ಕೆ ಹೋಗಿ ದೊಡ್ಡಯುದ್ಧವನ್ನು ಮಾಡಿ ರಾಜನನ್ನು ಗೆದ್ದು ಕೌಸಲ್ಯೆಯನ್ನು ಅಪಹರಿಸಿಕೊಂಡು ಹೋದನು.

ಕೌಸಲ್ಯೆಯನ್ನು ಪ್ರಕಟವಾಗಿ ಲಂಕೆಯಲ್ಲಿಟ್ಟರೆ ದೇವತೆಗಳು ಅಪಹರಿಸುವರೆಂದು ರಾವಣನು ಅವಳನ್ನು ಒಂದು ಪೆಟ್ಟಿಗೆಯಲ್ಲಿ ಭದ್ರಪಡಿಸಿ ದಾರಿಯಲ್ಲಿ ಸಮುದ್ರದಲ್ಲಿದ್ದ ಒಂದು ತಿಮಿಂಗಿಲದ ವಶದಲ್ಲಿಟ್ಟನು. ಆ ತಿಮಿಂಗಿಲವು ಆ ಪೆಟ್ಟಿಗೆಯನ್ನು ಯಾವಾಗಲೂ ತನ್ನ ಬಾಯಲ್ಲಿಯೇ ಇಟ್ಟುಕೊಂಡು ತಿರುಗುತ್ತಿದ್ದು ಒಂದು ದಿನ ತನಗೊಂದು ಎದುರಾಳಿಯು ಕದನಕ್ಕೆ ಬಂದಾಗ ಅದನ್ನು ಅಲ್ಲೊಂದು ನಡುಗಡ್ಡೆಯ ಮೇಲಿಟ್ಟು ತಾನು ಆ ಕದನದಲ್ಲಿ ತೊಡಗಿತು. ಆ ಸಮಯದಲ್ಲಿ ದಶರಥಸುಮಿತ್ರರ ನೌಕಾಖಂಡವೂ ತೇಲಿಕೊಂಡು ಅಲ್ಲಿಗೇ ಬಂತು. ನಡುಗಡ್ಡೆಯನ್ನು ಕಾಣುತ್ತಲೆ ದಶರಥಸುಮಿತ್ರರು ದೇವರ ದಯವಾಯಿತೆಂದು ತಮ್ಮ ನೌಕಾಖಂಡವನ್ನು ಅಲ್ಲಿಗೆ ತಿರುಗಿಸಿಕೊಂಡು ಬಂದು ಅಲ್ಲಿದ್ದ ಪೆಟ್ಟಿಗೆಯನ್ನು ನೋಡಿ ಆಶ್ಚರ್ಯದಿಂದ ಅದರ ಬಾಯನ್ನು ತೆಗೆದರು. ಎಲ್ಲರಿಗೂ ಆನಂದವಾಯಿತು. ಆ ಸಮಯವೇ ಕೋಸಲರಾಜನು ಗೊತ್ತುಮಾಡಿದ್ದ ವಿವಾಹಮುಹೂರ್ತವಾಗಿತ್ತು. ಒಡನೆ ದಶರಥಕೌಸಲ್ಯೆಯರ ಪಾಣಿಗ್ರಹಣವಾಯಿತು. ಇದುವರೆಗೆ ಕಾಪಾಡಿದ ದೇವರೇ ಮುಂದೆಯೂ ಯೋಗಕ್ಷೇಮವನ್ನು ನೋಡುವನೆಂದು ಮೂವರೂ ಆ ಪೆಟ್ಟಿಗೆಯಲ್ಲಿ ಕುಳಿತು ಅದರ ಬಾಗಿಲನ್ನು ಮುಚ್ಚಿಕೊಂಡರು. ಅಷ್ಟು ಹೊತ್ತಿಗೆ ಆ ತಿಮಿಂಗಿಲವು ಬಂದು ಮತ್ತೆ ಆ ಪೆಟ್ಟಿಗೆಯನ್ನು ಬಾಯಲ್ಲಿಟ್ಟುಕೊಂಡಿತು.

ಸಾ॥ ಹೊಟ್ಟೆಯೊಳಗೆ ಕೂಸಿಟ್ಟವರು ನಿರಸು। ಪೆಟ್ಟಿಗೆ ಕಾಯುವ ದೇವ ॥
ಗುಟ್ಟಾಗಿವರನು ವೃಷ್ಟಿಗೊಳಿಸಿದನು। ಸೃಷ್ಟಿಯ ಭಕ್ತರ ಜೀವ ॥

ಇಷ್ಟರಲ್ಲಿ ರಾವಣನು ಲಂಕೆಯಲ್ಲಿ ಸಭಾಮಧ್ಯದಲ್ಲಿ—

ಶ್ಲೋ॥ ವಿಧೇ, ತವ ಮೃಷಾ ವಾಕ್ಯಂ ರಾವಣೇನ ಮಯಾ ಕೃತಮ್ ॥
—(ಅ.ರಾ)

ಅ|| ಬ್ರಹ್ಮನೆ, ರಾವಣನಾದ ನಾನು ನಿನ್ನ ಮಾತನ್ನು ಸುಳ್ಳುಮಾಡಿದೆನು.

ಎಂದನು. ಆಗ ಬ್ರಹ್ಮನು—

ಶ್ಲೋ|| ದೀರ್ಘಸ್ವರೇಣ ಹೋವಾಚ ಓಂ ಪುಣ್ಯಾಹಮಿತಿ ಸ್ಫುಟಮ್ ||
—(ಆ.ರಾ)

ಅ|| 'ಓಂ ಪುಣ್ಯಾಹಂ' ಎಂದು ಗಟ್ಟಿಯಾಗಿ ಹೇಳಿದನು.

ರಾವಣನು ಇದೇನೆನ್ನುತ್ತಲಿ ಬ್ರಹ್ಮನು ದಶರಥಕೌಸಲ್ಯೆಯರ ವಿವಾಹವಾಯಿತೆಂದನು. ಆಗ ಬ್ರಹ್ಮನನ್ನು ಪೆಚ್ಚುಮಾಡಬೇಕೆಂದು ರಾವಣನು ದೂತರನ್ನು ಕಳುಹಿಸಿ ಆ ತಿಮಿಂಗಿಲದ ವಶದಲ್ಲಿದ್ದ ಪೆಟ್ಟಿಗೆಯನ್ನು ತರಿಸಿ ಬಾಯಿತೆಗೆಸುತ್ತಲೇ ಒಳಗಣಿಂದ ಮೂವರೆದ್ದರು. ಇದನ್ನು ನೋಡಿ ರಾವಣನಿಗೆ ಆಶ್ಚರ್ಯವಾಯಿತು!

ಶ್ಲೋ|| ತದಾತಿಚಕಿತಃ ಕ್ರುದ್ಧಃ ತಾನ್ ಹನ್ತುಂ ಖಡ್ಗಮಾದದೇ ||
—(ಆ.ರಾ)

ಅ|| ಆಗ (ರಾವಣನು) ಬಹಳ ಭಯದಿಂದ ಬೆರಗಾಗಿ ಸಿಟ್ಟಿನಿಂದ ಅವರನ್ನು ಕೊಲ್ಲಬೇಕೆಂದು ಕತ್ತಿಯನ್ನು ಹಿಡಿದನು.

ಆಗ ಬ್ರಹ್ಮನು ರಾವಣನನ್ನು ಕುರಿತು—

ಶ್ಲೋ|| ಭವಿಷ್ಯತಿ ವಧಸ್ತೇಽದ್ಯ, ರಾಮೋಽದ್ಯೈವ ಜನಿಷ್ಯತಿ, | ಯುದ್ಧವಿಷ್ಯಂ ತದ್ಭವತು ತದಗ್ರೇ ಮಾಸ್ತು ಸಾಮ್ಪ್ರತಮ್ || —(ಆ.ರಾ)

ಅ|| ರಾಮನು ಈಗಲೇ ಹುಟ್ಟುತ್ತಾನೆ; ನಿನ್ನ ಮರಣವು ಈಗಲೇ ಆಗುತ್ತದೆ. ಏನಾಗಬೇಕೋ ಅದಾಗಲಿ; ಅದು ಮುಂದೆ ಆಗಲಿ. ಈಗ ಬೇಡ.

ಎಂದು ಬುದ್ಧಿವಾದವನ್ನು ಹೇಳಿದ ಮೇಲೆ ರಾವಣನು ಒಪ್ಪಿ ಅವನ ಮಾತಿನಂತೆ ಆ ಪೆಟ್ಟಿಗೆಯನ್ನು ರಾಕ್ಷಸರ ಮೂಲಕವಾಗಿ ಅಯೋಧ್ಯೆಗೆ ಕಳುಹಿಸಿಬಿಟ್ಟನು. ಅಲ್ಲಿ ದಶರಥನು ಕೌಸಲ್ಯೆಯನ್ನು ಮಾತ್ರವಲ್ಲದೆ ಸುಮಿತ್ರೆ, ಕೈಕಯಿ-ಎಂಬ ಇನ್ನಿಬ್ಬರನ್ನೂ ವಿಧಿಪೂರ್ವಕವಾಗಿ ಮದುವೆಯಾದನು.

ಆ ದಶರಥಮಹಾರಾಜನ ಪ್ರಭಾವವೆಂತಿತ್ತೆಂದರೆ—

ಷ|| ವನಧಿ ಗಂಭೀರದಲಿ; ತತ್ತನುಜನು ಮಹಾಶಾಂತದಲಿ; ತತ್ಪತಿಯನುಪಮಾಕಾರದಲಿ; ತದ್ರಿಪು ಚಾಪವಿದ್ಯದಲಿ; || ವಿಸುತತತ್ಸುತ ಶಕ್ತಿಯಲಿ; ತಜ್ಜನನಿವೆತ್ರವ ಧೈರ್ಯವಿಭವದೊಳೆಸುತ ಬುಧಕೋಟಿಗಳು ನುತಿಸುವರಾ ಮಹೀಪತಿಯ || —(ರಾ.ಕ.ಕು)

ಟಿ|| ತತ್ತನುಜನು—ಸಮುದ್ರನ ಮಗನಾದ ಚಂದ್ರ. ತತ್ಪತಿ—ಚಂದ್ರನ ಒಡೆಯನಾದ ಮನ್ಮಥ. ತದ್ರಿಪು—ಮನ್ಮಥನ ಶತ್ರುವಾದ ಈಶ್ವರ. ತತ್ಸುತ—ಈಶ್ವರನ ಮಗನಾದ ಷಣ್ಮುಖ. ತಜ್ಜನನಿವೆತ್ರವ—ಷಣ್ಮುಖನ ತಾಯಾದ ಪಾರ್ವತಿಯನ್ನು ಹಡೆದ ಹಿಮವಂತ.

ದಶರಥನಿಗೆ ಇಷ್ಟೆಲ್ಲ ಗುಣಗಳಿದ್ದರೂ ಮನಸ್ಸಿನ ತೃಪ್ತಿಮಾತ್ರ ಇರಲಿಲ್ಲ. ಅದನ್ನು ಕೊಡತಕ್ಕ ಸಂಪತ್ತು ಬೇರೆ. ಅದು ಯಾವದೆಂದರೆ—

ಕಂ॥ ಶಾಂತಿಗೆಣೆಯುಪ್ಪ ತಪಮುಂ। ಸಂತೋಷಕೆ ಸದೃಶಮುಪ್ಪ ಸುಖಮುಂ ನೀಡುಂ। ಚಿಂತೆಗೊರೆಯುಪ್ಪ ಗದಮುಂ। ಸಂತಾಪಕೆ ಸಾಟಿಯುಪ್ಪ ಸಿರಿಯುಮದಿಲ್ಲಂ ॥ —(ನ.ಶ)

ಟಿ॥ ನೀಡುಂ—ಚೆನ್ನಾಗಿ. ಗದ—ರೋಗ. ಎಣೆ, ಸದೃಶ, ಒರೆ, ಸಾಟಿ—ಸಮಾನ.

ಅದು ಹೇಗೆಂದರೆ—

ಶ್ಲೋ॥ ಪಾತ್ರಂ ನ ತಾಪಯತಿ, ನೈವ ಮಲಂ ಪ್ರಸೂತೇ,। ಸ್ನೇಹಂ ನ ಸಂಹರತಿ, ನೈವ ಗುಣಾನ್ಕ್ಷಿಣೋತಿ,। ದ್ರವ್ಯಾವಸಾನಸಮಯೇ ಚಲತಾಂ ನ ಧತ್ತೇ, ಸತ್ಪುತ್ರ ಏಷ ಕುಲಸದ್ಮನಿ ಕೋಽಪಿ ದೀಪಃ ॥ —(ಸು)

ಅ॥ (೧) ಸತ್ಪುತ್ರನು ಕುಲವೆಂಬ ಮನೆಗೆ ಒಂದು ಹೊಸಬಗೆಯ ದೀಪದಂತೆ. ಈ ದೀಪವು ಹಣತೆಯನ್ನು ಬಿಸಿಗೊಳಿಸುವದಿಲ್ಲ, ಕೊಳೆಯನ್ನುಂಟುಮಾಡುವದಿಲ್ಲ, ಎಣ್ಣೆಯನ್ನು ಕುಡಿಯುವದಿಲ್ಲ, ಬತ್ತಿಗಳನ್ನು ಕಡಿಮೆಮಾಡುವದಿಲ್ಲ, ತನ್ನ ಉಪಕರಣಗಳೆಲ್ಲಾ ಹೋಗುತ್ತಲೇ ತಾನೂ ಹೋಗುವದಿಲ್ಲ. ಇದರಂತೆ (೨) ಸತ್ಪುತ್ರನು ಯೋಗ್ಯರನ್ನು ತಾಪಗೊಳಿಸುವದಿಲ್ಲ, ಪಾಪವನ್ನು ಮಾಡುವದಿಲ್ಲ, ಸ್ನೇಹವನ್ನು ಬಿಡುವದಿಲ್ಲ, ದ್ರವ್ಯವೆಲ್ಲ ಹೋದರೂ ತಾನು ಬಿಟ್ಟು ಹೋಗುವದಿಲ್ಲ.

ಇಂತಹ ಸತ್ಪುತ್ರನು ಸಾಮಾನ್ಯವಾಗಿ ಎಲ್ಲರಿಗೂ ಬೇಕಾದರೂ ರಾಜರಿಗೆ ಇದರ ಅವಶ್ಯಕತೆ ಹೆಚ್ಚು. ಏಕೆಂದರೆ—

ಷ॥ ಇಳೆಯೊಳಧಿಕಕ್ಷತ್ರಧರ್ಮದೊ। ಳುಳಿದ ಧರ್ಮಗಳಡಗಿಹವು ನೃಪ। ತಿಲಕ, ಕೇಳೈ ಗಜದ ಹೆಜ್ಜೆಯೊಳುಳಿದ ಹೆಜ್ಜೆಗಳು ॥ ಸಲೆಯುಡಗಿದಂದದಲಿ ನೃಪ ನಿಜ। ಸಲು ನಡೆವುದಲ್ಲದೊಡೆ ಕೆಡುವದು । ತಿಳಿದು ನೋಡಲು ಪರಮ ಧರ್ಮಕ್ಕೆಲ್ಲ ನೃಪರೆಂದ ॥ —(ಕ.ಭಾರ)

ಆದ್ದರಿಂದ ದಶರಥನು ಮಕ್ಕಳಾಗಲಿಲ್ಲವೆಂಬ ಯೋಚನೆಯನ್ನು ಮಾಡುತ್ತಾನೆ—

ಆನಂದಭೈರವಿ—ಅಟತಾಳ

ಯಾರಿಗೆ ಹೇಳಲೀ ಗೋಳ। ಬಹು। ಗಾರುಗೆಡಿಸುವೆನ್ನ ದೈವದ ಕಾಳ ॥ ಪ ॥ ಪಾರುಗಾಣಿಸುವವರ ಕಾಣದೆ। ಭೂರಿಭಯಕೊಳಗಾದೆ ಮೂಳ ॥ಅ.ಪ॥ ಸುತರಿಲ್ಲದುದರಿಂದ ಎನಗೆ। ಈ। ಅತಿಶಯಸಿರಿ ಸುಖದೋರದು ಕೊನೆಗೆ। ಕ್ಷಿತಿಯಾಧಿಪತ್ಯದ ಬಿಸುಗೆ। ಬಹು। ಮತವಲ್ಲ ನೋಡಲು ನನ್ನಯ ಮನೆಗೆ ॥ ಸುತರಿರದೆ ಪುನ್ನಾಮನರಕದೊ। ಳತಿಶಯದ ದುಃಖವನು ತಾಳುವ। ಗತಿಯ ನೆನೆದೊಡ ನೆದೆಯೊಡೆಯುವದು। ಸತತವೀ ಸನ್ಮಾರ್ಗರತಗೆ ॥ ೧ ॥ ಧರೆಯನಿನ್ನಾರು ರಕ್ಷಿಪರು?। ಬಹು। ಪರಿ ಕುಲಧರ್ಮವ ನಡೆಸುವರಾರು?। ವರಧರ್ಮಗಳಿಗಿದು ಬೇರು। ಇದ। ಹೊರತುಳಿದೆಲ್ಲವು ತಲೆಗೊಂದು ಹೇರು ॥ ಮೆರೆವ ರಘುವರವಂಶವೃಕ್ಷವ। ನೆರೆ ಚಿಗುರಿಸದೆ ಒಣಗಿಸಿದ ದು। ರ್ಧರದಪಖ್ಯಾತಿಯು ವಿಶೇಷಕೆ । ಗುರಿಯೆ ನಾದುರ್ದೈವನಕಟಾ! ॥ ೨ ॥ ಸುಡಲೆನ್ನ ಬಾಳನಿನ್ನೇಕೆ?। ಬಹು। ನಡಗರಪಡುವದ್ಧು

ತನಗಿನ್ನು ಬೇಕೆ? । ಒಡಲ ಸೌಭಾಗ್ಯವಿನ್ನೇಕೆ? । ಈ । ಗಡಿಬಿಡಿಯೊಳಗಾನು ಇರಬೇಕು ಜೋಕೆ!॥ ಪೊಡವಿಯೊಳು ಚಿನ್ಮಯನನುಗ್ರಹ । ಪಡೆಯದೀ ಸಂಸಾರದಲಿ ಮುಂ। ದಡಿಯನಿಡಲಾರದೆ ಭವಾಬ್ಧಿಯ । ತಡಿಯ ಕಾಣದೆ ತೊಳಲ್ವೆನಕಟಾ!॥೩॥

ಟಿ॥ ಕಾಳ—ಕಾಡುಸ್ಥಿತಿಯನ್ನು. ಬಿನುಗೆ—ವ್ಯರ್ಥವಾದವೆ. ದುರ್ಧರದ—ತಡೆಯುವದಕ್ಕಾಗದ.

ನಿಜವಾಗಿ ಪುತ್ರವಂತರಿಗೇ ಸದ್ಗತಿ.

ಶ್ಲೋ॥ ನಾಪುತ್ರಸ್ಯ ಗತಿರ್ನಾಸ್ತೀತಿ ಸಸುತಃ ಸ್ಯಾದಿತ್ಯಮುಕ್ತಂ ಶ್ರುತೇಃ । ಕೋ ನಾಮಪಾತ್ರಜನೋ ನ ಸತ್ಯಮಿತಿ ತದ್ಬ್ರೂಯಾತ್ಪರಂ ವಚ್ಮ್ಯಹಮ್ ॥ ಯೋ ಗೋವಿಂದಪದಃ ಸ ಸದ್ಗತಿಧರಃ ಸೋಽಯಂ ಸುತಾಢ್ಯಶ್ಚ ಯ । ಲೋಕೇ ತದ್ಗತಿಭಾಕ್ ಸನಂದನ ಇತಿ ಬ್ರಹ್ಮಾತ್ಮಜೋ ಗೀಯತೇ ॥ —(ಸು.ಲಾ)

ಅ॥ ಮಕ್ಕಳಿಲ್ಲದವನಿಗೆ ಗತಿಯಿಲ್ಲವೆಂದೂ ಮಕ್ಕಳುಳ್ಳವನಿಗೆ ಅದು ಉಂಟೆಂದೂ ಶ್ರುತಿ ಹೇಳುವ ಮಾತನ್ನು ಯಾರೂ ಸುಳ್ಳೆನ್ನುವದಿಲ್ಲ. ನಾನು ಅದನ್ನು ಮುಂದುವರಿಸಿ ಹೇಳುವದೇನೆಂದರೆ-ಜಗತ್ತಿನಲ್ಲಿ ಯಾರು ಭಗವದ್ಭಕ್ತರೊ ಯಾರು ಸತ್ಸಂಗತಿಯನ್ನು ಮಾಡುವರೊ ಅಥವಾ ಯಾರು ಪುತ್ರವಂತರೊ ಅವರೇ ಆ ಸದ್ಗತಿಗೆ ಪಾತ್ರರು. ಹೇಗೆಂದರೆ—ಅದು ಬ್ರಹ್ಮನ ಮಗನಿಗೂ ದೊರೆತಿದೆ. ಆದ್ದರಿಂದಲೇ ಅವನಿಗೆ ಸನಂದನನೆಂದು ಹೆಸರು. ಸನಂದನನೆಂದರೆ ಮಕ್ಕಳುಳ್ಳವನೆಂದೂ ಅರ್ಥ.

ಆದ್ದರಿಂದ ದಶರಥನು—

೮೦॥ ಶರಣುಹೋಗುತ್ತಾ ಋಷ್ಯಶೃಂಗರನ್ನು । ಕರೆದು ತಂದಾ ಪುತ್ರೇಷ್ಟಿಕಾರ್ಯವನ್ನು ॥ ವಿರಚಿಸಲ್ಕೆಂದೇ ಮುನಿಕೆ ತಂದನಿನ್ನು । ಗುರುವಸಿಷ್ಠನೊರ್ಡುತ್ತೆ ಪೇಳ್ದುದನ್ನು ॥

ಇಲ್ಲಿ ಋಷ್ಯಶೃಂಗರ ಸಾನ್ನಿಧ್ಯವೇಕೆ ಬೇಕೆಂದರೆ—

ಶ್ಲೋ॥ ಜಾಡ್ಯಂ ಧಿಯೋ ಹರತಿ, ಸಿಂಚತಿ ವಾಚಿ ಸತ್ಯಮ್, । ಮಾನೋನ್ನತಿಂ ದಿಶತಿ, ಪಾಪಮಪಾಕರೋತಿ, ॥ ಚೇತಃ ಪ್ರಸಾದಯತಿ, ದಿಕ್ಷು ತನೋತಿ ಕೀರ್ತಿಂ, । ಸತ್ಸಂಗತಿಃ ಕಥಯ ಕಿಂ ನ ಕರೋತಿ ಪುಂಸಾಮ್ ॥ —(ಸು)

ಅ॥ ಮನಸ್ಸಿನ ಮಾಂದ್ಯವನ್ನು ಕಳೆಯುತ್ತದೆ; ಮಾತಿನಲ್ಲಿ ಸತ್ಯವನ್ನು ಸುರಿಸುತ್ತದೆ; ಹೆಚ್ಚಿನ ಮಾನವನ್ನು ಕೊಡುತ್ತದೆ; ಪಾಪವನ್ನು ಹಿಮ್ಮೆಟ್ಟಿಸುತ್ತದೆ; ಮನಸ್ಸನ್ನು ಪ್ರಸನ್ನವಾಗಿ ಮಾಡುತ್ತದೆ; ಕೀರ್ತಿಯನ್ನು ಎಲ್ಲ ದಿಕ್ಕುಗಳಿಗೂ ಹಬ್ಬಿಸುತ್ತದೆ. ಸತ್ಸಂಗತಿಯು ಮನುಷ್ಯನಿಗೆ ಏನನ್ನು ತಾನೆ ಮಾಡುವದಿಲ್ಲ?

ಇದರ ಮೇಲೆ ಋಷ್ಯಶೃಂಗರ ಚರಿತ್ರೆಯೂ ವಿಲಕ್ಷಣವಾದದ್ದು,

೮॥ ಇದಕೇಳಿರಿಂದೀ ಕಥೆಯ । ಮುನಿ । ಋಷ್ಯಶೃಂಗಚರಿತೆಯ ॥ ಪ ॥ ಮುನಿವಿಭಾಂಡಕನ ಮಗನಾದವನು । ಮುನಿವರ ಋಷ್ಯಶೃಂಗಾಧಿಪನು । ವನದಲ್ಲಿಯೆ ಆತನ ಸಂಚಾರ । ಅನುದಿನ ಪಿತೃಸೇವೆಯೊಳೇ ತತ್ಪರ । ಅರಿಯನವನು ಪುರವನು ಹಳ್ಳಿಗಳನು । ಅರಿಯನವನು ಪ್ರಾಪಂಚಿಕಜನರನು । ವೇದಾಧ್ಯಯನ ತಪಸ್ಸಂಪನ್ನನು । ಭೇದಭಾವಗಳ ವಾಸನೆಯರಿಯನು । ವಿಷಯಸುಖವ

ಕನಸಿನೊಳುಂ ಕಾಣನು । ರಸೆಯೊಳ್ಸ್ತ್ರೀಯರಸರಿಯುದ ಜಾಣನು । ಇವನ ಕಾಲದೊಳಗಂಗಾಧೀಶನು । ಬುವಿಗೆ ರೋಮಪಾದಾಭಿದನಾದನು । ಅವನ ದೇಶದೊಳ್ಕ್ಷಾಮವು ಬಂದಿರೆ । ಜವದೊಳು ನೆನೆದನು ಮುನಿಯನು ಕರೆತರೆ। ಕಳುಹಿದನೊಡನೆಯೆ ವೇಶ್ಯಾಸ್ತ್ರೀಯರ । ಸಲಿಸಿ ಮೋಸಗೊಳಿಸೆ ಮುನಿ ವರ್ಯರ । ಬಂದರವರು ಸುಸ್ವರವಂ ಹಾಡುತ । ನಿಂದರವನ ವೃತ್ತಾಂತವ ಕೇಳುತ । ಪಡೆದರವರು ಮುನಿಯಿಂ ಸತ್ಕಾರವ । ನುಡಿದರವರು ಮೋಹಕ ವಹ ವಚನವ । ತಂದ ಕಡುಬುಗಳ ಹಣ್ಣೆಂದೆನುತಲಿ। ಅಂದದಿ ಮುಂದಿಟ್ಟರು ಮುನಿಯಿದಿರಲಿ । ತಿನ್ನಲಾಗ ಮುನಿ ಹಣ್ಣೆಂದವುಗಳ । ಚೆನ್ನನೆ ತೋರಿದ ರಾಲಿಂಗನಗಳ । ಈಪರಿಯೊಳಗವರಿಗೆ ವಶನಾಗಿ। ತಾಪಸನಾತನು ವಿಂಗೆ ಬರ ಲಾಗಿ । ಆ ಮುನಿ ಕಾಲಿಟ್ಟೊಡನೆಯೆ ಅಲ್ಲಿ । ನೇಮದಿ ಸುವೃಷ್ಟಿಯಾಯ್ತಾ ಕ್ಷಣದಲಿ । ಆ ಮಹಿಪನು ಶಾಂತಾಭಿದಸುತೆಯನು । ಆ ಮಹಿಮರಿಗಂದೇ ಒಲಿದಿತ್ತನು ॥

ದಶರಥನು ಆ ಋುಷಿಯ ಆಕರ್ಷಣಕ್ಕಾಗಿ ಅಶ್ವಮೇಧವೆಂಬ ಯಾಗವನ್ನು ಹೂಡಿ ಸಮೀಪದ ರೋಮಪಾದನ ದೇಶದಲ್ಲಿದ್ದ ಅವರನ್ನು ಕರೆದುಕೊಂಡು ಬಂದನು. ಯಜ್ಞಸಮಾರಂಭವೂ ನಡೆ ಯಿತು.

ರ॥ ಆಯಿತಾಗಲೆ ಬಹು ಸಂರಂಭ। ಯಜ್ಞದಾರಂಭ ॥ಪ॥ ಮುದುಕರಾಗಿ ಯಾ। ಗದ ವಿಷಯವನೋ। ದಿದ ಭೂಸುರರಿಗೆ। ಮುದದಿ ಸುದ್ದಿಯಿ। ತ್ತದುಬುತ ವಹ ಶಿ। ಲ್ಪದ ವಿದ್ಯದಿ ಕೋ। ವಿದರ ಕರೆಸಿ ಬಹು। ವಿಧವರ್ಧಕಿ, ಬಲ್। ಪದಪಿನ ಗಣಕರ। ಚದುರ ನಟರನೊ । ಪ್ಪಿದ ನರ್ತಕಿಗಳ। ಒದವಿದ ಶಾಸ್ತ್ರದ । ವಿಧಿಯ ಸಹಸ್ರಾ। ವಧಿಯಿಟ್ಟಿಗೆ ಬಂ। ದೊದಗೆ ಸಮಿತ್ಕುಶ। ಮೊದಲಾಗಿಹ ಯ। ಜ್ಞದ ಸಾಮಗ್ರಿಗ । ಳಿದಿರೊಳು ನಿಲೆ ಬೆ । ಟ್ಟದ ಪರಿಯಲಿ ತಾ। ನಿದು ಖಾದಿರತರು। ವಿದುಬಿಲ್ವವು ಮೇ। ಣಿದುವೆ ದೇವದಾ। ರಿದು ಯೂಪಾವಳಿ। ಯಿದು ವೇದಿಕೆ ಮ। ತ್ತಿದು ಕುಂಡವೆನುತ್ತಿದಿರೊಳು ತೋರುತ ॥

ಆ ಯಜ್ಞವು ಮುಗಿಯುತ್ತಲಿ—

ಕೀ॥ ಮುಕ್ಕಳಾಗಲೆಂದಥರ್ವವೇದ । ಪ್ರೋಕ್ತವಿಧಾನದೊಳಿಷ್ಟಿಯನು ॥ ಅಕ್ಕರೆಯಿಂ ಋುಷ್ಯಶೃಂಗನು ತಾ। ತಕ್ಕಂತವನಿಂ ಗೈಸಿದನು ॥

ಆಗ ಅಗ್ನಿಯಲ್ಲಿ ಒಬ್ಬ ಮಹಾಪುರುಷನು ಸ್ವರ್ಣಮಯವಾದ ಪಾತ್ರೆಯಲ್ಲಿ ಪಾಯಸವನ್ನು ಹಿಡಿದುಕೊಂಡು ಆವಿರ್ಭೂತನಾಗಿ—

ಶ್ಲೋ॥ ಇದಂ ತು ನೃಪಶಾರ್ದೂಲ, ಪಾಯಸಂ ದೇವನಿರ್ಮಿತಮ್ । ಪ್ರಜಾಕರಂ ಗೃಹಾಣ ತ್ವಂ ಧನ್ಯಮಾರೋಗ್ಯವರ್ಧನಮ್ । ಭಾರ್ಯಾಣಾ ಮನುರೂಪಾಣಾಮಶ್ನೀತೇತಿ ಪ್ರಯಚ್ಛ ವೈ ॥ —(ಶ್ರೀ.ರಾ)

ಅ|| ಹೇ ರಾಜಶ್ರೇಷ್ಠನೆ, ದೇವತೆಗಳು ನಿರ್ಮಿಸಿದ ಪಾಯಸವಿದು. ಇದು ಸಂತತಿಯನ್ನು ಕೊಡುವದು, ಕೃತಾರ್ಥತೆಯನ್ನುಂಟುಮಾಡುವದು, ಮತ್ತು ಆರೋಗ್ಯವನ್ನು ಹೆಚ್ಚಿಸುವದು; ಇದನ್ನು ಹಿಡಿ. ನಿನಗೆ ಅನುರೂಪರಾದ ಹೆಂಡತಿಯರಿಗೆ ತಿನ್ನಿರೆಂದು ಕೊಡು.

ಎಂದು ಕೊಡುತ್ತಲಿ ಮುಂದೇನಾಯಿತೆಂದರೆ—

ಶ್ಲೋ|| ಕೌಸಲ್ಯಾಯೈ ಪ್ರಥಮಮದಿಶದ್ಭೂಪತಿಃ ಪಾಯಸಾರ್ಧಮ್ । ಪ್ರಾದಾದರ್ಧಂ ಪ್ರಣಯಮಧುರಂ ಕೇಕಯೇನ್ದ್ರಸ್ಯ ಪುತ್ರ್ಯೈ ॥ ಏತೇ ದೇವ್ಯೌ ತರಲಮನಸಃ ಪತ್ಯುರಾಲೋಚ್ಯ ಭಾವಮ್ । ಸ್ವಾರ್ಧಾಂಶಾಭ್ಯಾಂ ಸ್ವಯಮಕುರುತಾಂ ಪೂರ್ಣಕಾಮಾಂ ಸುಮಿತ್ರಾಮ್ ॥ —(ರಾ.ಚಂ)

ಅ|| ದಶರಥನು ಮೊದಲು ಅರ್ಧಪಾಯಸವನ್ನು ಕೌಸಲ್ಯೆಗೆ ಕೊಟ್ಟನು; ಕೈಕೆಯಿಗೆ ಪ್ರೇಮ ವಿಶೇಷದಿಂದ ಮಧುರವಾಗಿ ತೋರುತ್ತಿದ್ದ ಅರ್ಧವನ್ನು ಕೊಟ್ಟುಬಿಟ್ಟನು.(ಆಮೇಲೆ)ಸುಮಿತ್ರೆಗೆ ಪಾಯಸದ ಭಾಗವನ್ನು ಕೊಡುವದಕ್ಕಿಲ್ಲವಾಯಿತೆಂದು ವಿಷಾದಗೊಂಡ ಗಂಡನ ಅಭಿಪ್ರಾಯವನ್ನು ತಿಳಿದು ಅವರಿಬ್ಬರೂ ತಮ್ಮ ಅರ್ಧಭಾಗಗಳಿಂದ ತಾವೇ ಸುಮಿತ್ರೆಯ ಬಯಕೆಯನ್ನು ಪೂರ್ಣಮಾಡಿದವರಾದರು.

ಈ ಪ್ರಕಾರ ನಡೆದ ಇಷ್ಟಿಯಲ್ಲಿ—

ರ|| ಪರಿಪೂರ್ಣವಾಯಿತು ಯಾಗ । ಹರಿ ಪ್ರೀತನಾದನು ಬೇಗ ||ಪ|| ಅನಲಮುಖದೊಳಿಟ್ಟಾಹುತಿಯನ್ನು । ತಸತಸಗೆಂದರು ನಾಕದೊಳಿನ್ನು । ಅನಿಮಿಷರೆಲ್ಲರು ಮಾಭಾಗವನು । ಮನದಣಿಪಂತುಂಡು ಸಂದೈಪನನು । ನೆನೆದರೆಲ್ಲ ತಮ್ಮಯ ಧನ್ಯತೆಯನು । ಜನರ ಸ್ಥಿತಿಯ ಹೇಳುವದಿನ್ನೇನು । ಅನ್ನರಾಶಿಗಳು ಕುಲಪರ್ವತಗಳ । ನಿನ್ನು ವಿಾರಿ ಮೇಲೆತ್ತಿರೆ ತಲೆಗಳ । ಮಧುದಧಿಘೃತವೇ ಮೊದಲಾದವುಗಳ । ನದಿಗಳುಕ್ಕಿ ಕೆಡವಿರ್ದವು ದಡಗಳ । ಬಗೆಬಗೆಯುಹ ಭಕ್ಷ್ಯದ ರಾಶಿಗಳ । ಬಗೆ ವಿಾರಿದವಳತೆಯ ಕಣ್ಣುಗಳ । ಉಂಡು ದಣಿದುದಲ್ಲದೆ ಜನನೆಲ್ಲ । ಕೊಂಡು ಪೋಗಿ ದಣಿಯದ ಜನವಿಲ್ಲ । ಉಂಡೂಟದಿ ಹೊಟ್ಟೆಯು ತಾ ಬಿರಿಯಿತು । ಕೊಂಡ ಹೊರೆಯ ಭಾರದಿ ಬೆನ್ನುರಿಯಿತು । ಸೂರೆಯಾಯಿತೆಲ್ಲರಿಗೂ ದಕ್ಷಿಣೆ । ಪೂರ್ಣವಾಯಿತೆಲ್ಲರಿಗೆ ನಿರೀಕ್ಷಣೆ । ಬಹುವಿಧದಾನವಿಶೇಷಗಳಿಂದ । ಮಹಿಪರಾದರೆಲ್ಲರು ಬಹುಚೆಂದ । ಧರೆಗಿದು ಹೊಸತೆನಿಸಿತು ಯಾಗವನು । ನರರೆಲ್ಲರಿಗಿತ್ತು ಸುಯೋಗವನು । ನೋಡಿದ ಜನಕಾಯಿತು ತನ್ಮಯತೆ । ಪಾಡಿದ ಜನಕಾಯಿತು ಚಿನ್ಮಯತೆ ||

ಆಗ ಪೀಠಿಕೆಯಲ್ಲಿ ಭಾಗವತಶಿರೋಮಣಿಗಳು "ಭಕ್ತಿಯಿಂದ ಸುವಿರಕ್ತಿಯ ಹೊಂದಿದ ಭಕ್ತಿಪರಂತರಾಸಕ್ತಿಗೆ ಮೆಚ್ಚುತ" ಎಂದು ಮುಂಠಾಗಿ ಹೇಳಿರುವ ಅರ್ಥದಂತೆ ವಿಷ್ಣು ದಶರಥನ ಗರ್ಭವನ್ನು ತನ್ನ ಅವತಾರಕ್ಕೆ ಆರಿಸಿಕೊಂಡನು. ಯಜ್ಞವು ಮುಗಿಯುತ್ತಲಿ ಮೂವರೂ ಗರ್ಭಿಣಿಯರಾದರು. ಅವರಲ್ಲಿ ಕೌಸಲ್ಯೆಯ ಭಾವವನ್ನು ನೋಡಿದರೆ—

ಶ್ಲೋ|| ಸ್ವರ್ಗೋದ್ಧಪತ್ರಸಮತಾಂ ಕ್ರಮಶಃ ಪ್ರಯಾತಾಮ್ । ಅಂಗೀಚಕಾರ ಪುನರಪ್ಯುದರಂ ಕೃಶಾಙ್ಗ್ಯಾಃ ॥ ಜೀವಾತವೇ ದಶಮುಖೋರಗಪೀಡಿತಾನಾಮ್ । ಗರ್ಭಚ್ಛಲೇನ ವಸತಾ ಪ್ರಥಮೇನ ಪುಂಸಾ ॥ —(ರಾ.ಚಂ)

ಅ|| ಆಲದೆಲೆಯ ಸಮತ್ವವನ್ನು ದಿನದಿನಕ್ಕೆ ಕಳೆದುಕೊಂಡು ಬಡವಾದ ಕೌಸಲ್ಯೆಯ ಹೊಟ್ಟೆಯಲ್ಲಿ ರಾವಣನೆಂಬ ಹಾವಿನಿಂದ ಅಥವಾ ಹತ್ತುತಲೆಯುಳ್ಳ ಹಾವಿನಿಂದ ಪೀಡಿತರಾದವರನ್ನು ಬದುಕಿಸುವದಕ್ಕಾಗಿ ಬಸಿರಲ್ಲಿ ಬಂದಂತೆ ಆದಿಪುರುಷನಾದ ಮಹಾವಿಷ್ಣು ಬಂದು ನಿಂತ ಕಾರಣದಿಂದ ಅದು ಮತ್ತೆ ಆಲದೆಲೆಗೆ ಸಮವಾಯಿತು.

ಟಿ|| ಹೆಂಗಸರ ಹೊಟ್ಟೆಯು ಆಲದೆಲೆಯಂತಿದ್ದರೆ ಗಂಡು ಸಂತತಿಯು ಆಗುವದೆಂದು ಸಾಮುದ್ರಿಕಶಾಸ್ತ್ರವು ಹೇಳುತ್ತದೆ. ಕೌಸಲ್ಯೆಯು ಗರ್ಭಿಣಿಯಾದ ಮೇಲೆ ಸ್ಥೂಲದೃಷ್ಟಿಯಿಂದ ಅವಳ ಹೊಟ್ಟೆಗೆ ಅದರ ಹೋಲಿಕೆಯು ಹೋಗಿದ್ದರೂ ಗರ್ಭದಲ್ಲಿ ವಿಷ್ಣುವಿದ್ದದ್ದರಿಂದ—ಸೃಷ್ಟ್ಯಾದಿಯಲ್ಲಿ ವಿಷ್ಣು ಆಲದೆಲೆಯ ಮೇಲೆ ಮಲಗಿರುವದರಿಂದ– ಅದರ ಹೋಲಿಕೆಯನ್ನು ಪಡೆಯಿತೆಂದರ್ಥ.

ಮುಂದೆ ಕ್ರಮವಾಗಿ ಗರ್ಭಿಣಿಯರ ಚಿಹ್ನೆಗಳು ಕಾಣಬಂದದ್ದೆಂತೆಂದರೆ—

ಸಾಂ|| ಬಿಳುಪೇರಿತು ಮೊಗ, ತೆಳುಪೇರಿತು ಕೆನ್ನೆ, । ಹೊಳಪೇರಿತು ಕುಡಿನೋಟ, ॥ ಕಳೆಯೇರಿತು ಕೋಮಲಕಾಯ, ಕುಂತಲ । ಬೆಳೆಯೇರಿತು ಸೀರೆಯೊಳು ॥ —(ಜೀ.ಸಾಂ)

ಹೀಗೆ ಹತ್ತು ತಿಂಗಳು ಕಳೆದ ಮೇಲೆ—

ಷ|| ವಸುಮತೀಶನ ಹಿರಿಯರಸಿ ಸಂ । ತಸದಿ ರಾಮನ ಪಡೆದಳಾಂಗೀ । ರಸದ ಚೈತ್ರದ ಶುದ್ಧನವಮಿಯ ಸೌಮ್ಯವಾಸರದ ॥ ಕುಸುಮ ಮಧ್ಯಾಹ್ನದ ಪುನರ್ವಸು । ವೆಸೆವ ಕರ್ಕಾಟಕದ ಲಗ್ನದೊ । ಳಸುರಹರಕಾರಣಕೆ ಹರಿಯು ಧರ್ಗಾಂಶುವಿಕ್ರಮನ ॥ —(ರಾ.ಕ.ಕು)

ಆಗ ರಾಮರೂಪು ಕಾಣಿಸುವದಕ್ಕೆ ಮುಂಚೆ ಕೌಸಲ್ಯೆಯ ಕಣ್ಣಮುಂದೆ—

ಶ್ಲೋ|| ಆವಿರಾಸೀಜ್ಜಗನ್ನಾಥಃ ಪರಮಾತ್ಮಾ ಸನಾತನಃ । —(ಅ.ರಾ)

ಅ|| ಪುರಾಣಪುರುಷನಾದ ಜಗನ್ನಾಥನಾದ ಪರಮಾತ್ಮನು ಕಾಣಿಸಿಕೊಂಡನು.

ಅದನ್ನು ಕಂಡು ಕೌಸಲ್ಯೆಯು ಸ್ತೋತ್ರಮಾಡುತ್ತಾಳೆ—

ಚೂ|| ಅಚ್ಚರಿಯಿದಚ್ಚರಿಯಿದೀ ತೋರ್ಪ ರೂಪ, ಗುಣಕಲಾಪ, ದುರಿತಕೋಪ, ಪಾಪಶಾಪ, ಬಹುಪ್ರತಾಪ, ದುರಾಪ । ನೀಲೋತ್ಪಲವ ಸೋಲಿಸುವ ಕಾಳಿಮೆಯ ಮೈಗಪ್ಪು, ಮೇಲೆ ಜೋಲಾಡುವ ವಿಶಾಲವಹ ಪೀತಾಂಬರದ ವಸನದೊಪ್ಪು, ಇದ ನೋಡಲಾರದಿಹುದು ನಮ್ಮದೇ ತಪ್ಪು । ಎಸಿದು ವಿಲಕ್ಷಣದ ನಾಲ್ದೋಳ ವೇಷ, ಕಾಣಿಸುವದು ಕೋಟಿರವಿಭಾಸ, ಮುನಿಹೃದಯವಾಸ, ಶ್ರೀಶ, ಸುಜನಪೋಷ, ವಿಗತದೋಷ, ಮಂಗಲಭೂಷ । ಅರುಣಕಮಲದ ಕಣ್ಣು, ತರುಣತುಲಸಿಯ ಮಾಲೆ, ಸುರುಚಿರದ ಕುಂಡಲಕಿರೀಟ, ಬಹು ಮಾಟ । ಗುಂಗುರಹ ಮುಂಗುರುಳು, ಬಂಗಾರದ ಬೆರಳು, ರಂಗುಮಾಣಿಕದ ಕೊರಳು, ಕೇಳು । ಶಂಖಚಕ್ರಗದಾಂಬುಜಾಂಕ, ಬಹುಬಿಂಕ, ನೋಡಿದರೆ ಹಿಂಜರಿವುದಾತಂಕ, ಮುಖಕೆ ನಾಚುವದು ಶಶಾಂಕ, ಚಿತ್ತವಾಗುವದು ನಿಶ್ಶಂಕ, ನಿಷ್ಪಂಕ । ಕಿರುನಗೆಯ ಬೆಳಕು ಕಿರಿಯುಲೆಗಳಿಂದೆನ್ನ ಹರಣಕಾಗಿಪುದು ತಂಪು

ಪೆಂಪು, ಶ್ರೀವತ್ಸಹಾರದಾ ಸೊಂಪು, ವನಮಾಲೆಯಾಕಂಪು, ಬಲು ಇಂಪು। ಕ್ಷೋಣಿಯೊಳಗೆ ನೀ ಕಾಣಿಸುವದಿಲ್ಲವೆಂದಾಣೆಯಿಡುವರಿಗೆ ಗತಿ ನಾಣೆ, ಎನ್ನಾಣೆ। ಮಾಯೆಯಲಿ ಧರೆಯ ಕಾಣಿಸಿ ಕಾದು ಮಾಣಿಸುವ ಜಾಣ, ಕೃಪಾಪೂರ್ಣ। ಎಲ್ಲೆಲ್ಲಿಯೂ ಇದ್ದು ಎಲ್ಲಿಯೂ ಕಾಣದೇ ಎಲ್ಲರನು ವಂಚಿಸಿಹೆಯಲ್ಲ, ಎಲ್ಲವನು ಹೊಟ್ಟೆಯೊಳಗಿಡುವ ನೀನಿಲ್ಲಿಂತು ತೋರ್ಪೆಯಲ್ಲ, ಬಲ್ಲವರ ಬಲ್ಲ, ನಿನಗಿಂತಧಿಕರಿಲ್ಲ। ಅವ್ಯಕ್ತನಹ ನಿನಗಿದು ಬಹು ಮನೋಹರವಾದ ಚೋಹ, ಭಕ್ತರ ಮೇಲಣಾಸಕ್ತಿಯಿಂದಿಂತು ನಿನಗೆ ಸ್ನೇಹ, ಯುಕ್ತವಾಗಿಹುದಯ್ಯ ಪಕ್ಷಿವಾಹ, ನಿರೀಹ, ನಿರ್ಮೋಹ, ನಿರಪೋಹ, ಚಿದ್ದೇಹ, ಆಹಾ! ॥

ಟಿ॥ ನಾಣೆ—ನಾಚಿಕೆಯೆ. ಮಾಣಿಸುವ—ಇಲ್ಲದಂತೆ ಮಾಡುವ. ಚೋಹ—ವೇಷ.

ಈಪ್ರಕಾರ ನಿಜರೂಪವನ್ನು ತೋರಿಸಿದ ಉದಾಹರಣೆಯನ್ನಿಟ್ಟುಕೊಂಡೇ ಪೀಠಿಕೆಯಲ್ಲಿ ಭಾಗವತಶಿರೋಮಣಿಗಳು 'ದಾಸಜನಕೆ ಬಹು ಲೇಸು ಲೇಸೆಂಬಂತೆ ಭಾಸುರಮುಹ ಚಿದ್ವೇಷವ ತೋರುತ' ಎಂದು ಉಪದೇಶಿಸಿರುವರು. ಇರಲಿ; ಇದರಿಂದ ಸಂತುಷ್ಟಳಾದ ಕೌಸಲ್ಯೆಯು ದೇವರನ್ನು ಮತ್ತೆ ಪ್ರಾರ್ಥಿಸಿದ್ದೇನೆಂದರೆ—

ಮಲಯಮಾರುತ—ಆದಿತಾಳ

ಚಿತ್ತದಲ್ಲಿ ನೀ ನಿತ್ಯವೂ ಇರೆನ್ನ। ಅತ್ತ ಇತ್ತ ನೀ। ನಗಲಬೇಡವಯ್ಯ॥ ಪ ॥ ಮನುಜವೇಷದಿಂದ। ಮನವ ಮೋಹಿಸುವ। ಮುನಿಜನಸುತ। ಅನಿಮಿತ್ತಬಂಧು ॥ಅ.ಪ॥ ನಿನ್ನ ಪಾದರಜವನ್ನು ವೇದಗಳು। ಇನ್ನು ಹುಡುಕುತ್ತ ಕಾಣದಿರುವವು ॥ ನನ್ನ ತಾಂಗನೆ ಸಾಮವೇದಪ್ರಿಯ। ಇನ್ನು ನಾ ನಿನ್ನ ಹುಡುಕಬಲ್ಲೆನೆ? ॥ ೧ ॥ ನಾರದಾದಿಗಳು ನಿನ್ನ ಕೀರ್ತಿಯನು। ಪಾರುಗಾಣದೆ ಹಾಡುತಿರುವರು ॥ ಆ ರೀತಿ ನಿನ್ನನೊಲಿಸಬಲ್ಲೆನೆ?। ಕಾರುಣ್ಯಸಾಗರ, ದಯಮಾಡು ॥ ೨ ॥ ಮುನಿಜನಂಗಳೂ ನಿನ್ನರೂಪವನ್ನು। ಮನದಲ್ಲಿ ಕಟ್ಟಲಾರದಿರುವಾಗ ॥ ನನಗೆ ಸಾಧ್ಯವೇ ನಿನ್ನ ಹಿಡಿವುದು। ಅನಿಮಿಷಸ್ತುತ ಚಿನುಮಯಾತ್ಮನೇ ॥ ೩ ॥ —(ಭಕ್ತಿ.ಗೀ)

ಶ್ಲೋ॥ ಉಪಸಂಹರ ವಿಶ್ವಾತ್ಮನ್ನದೋ ರೂಪಮಲೌಕಿಕಮ್। ದರ್ಶಯಸ್ವ ಮಹಾನನ್ದ, ಬಾಲಭಾವಂ ಸುಕೋಮಲಮ್ । ಲಲಿತಾಲಿಙ್ಗನಾಲಾಪೈಸ್ತರಿಷ್ಯಾಮ್ಯುತ್ಕಟಂ ತಮಃ ॥ —(ಅ.ರಾ)

ತಿ॥ ಸರ್ವಾತ್ಮಕನಾದವನೇ, ಈ ದೇವತಾರೂಪವನ್ನು ಸಾಕುಮಾಡು. ಹೇ ಆನಂದರೂಪನೆ, ಬಹುಕೋಮಲವಾದ ಬಾಲಭಾವವನ್ನು ನನಗೆ ತೋರಿಸು. ನನ್ನಲ್ಲಿ ನಿಬಿಡವಾಗಿರುವ ಅಜ್ಞಾನವನ್ನು ನಿನ್ನ ಮನೋಹರವಾದ ಆಲಿಂಗನದ ಮತ್ತು ಸಂಭಾಷಣದ ಬಲದಿಂದ ದಾಟುತ್ತೇನೆ.

ಹೀಗೆನ್ನುತ್ತಲೇ ವಿಷ್ಣುವೇ ಮಗನಾದನೆಂದು ಮನಗಾಣಿಸುವದಕ್ಕಾಗಿ ತನ್ನ ಅಲೌಕಿಕರೂಪವನ್ನು ತೋರಿಸಿದ ಪರಮಾತ್ಮನು ಒಡನೆ ಮನುಷ್ಯಶಿಶುವಾಗಿದ್ದಾನೆ.

ಕೀ॥ ಮನುಜಜನ್ಮವಿದು ಹುಟ್ಟಿದ ಮೊದಲಿಂ। ಕೊನೆಗೂ ಅಳಿಸುವದೆಂಬಂತೆ ॥ ಮನುಜರೂಪಗೊಂಡಾ ಶಿಶುವತ್ತಿತು। ಜನರಿಗೆ ತನ್ನಳು ಕೇಳ್ವಂತೆ ॥

ಕೀ॥ ಬಾಲತನದಿ ಮೇಘಶ್ಯಾಮನು ಸುವಿ। ಶಾಲನಯನನತಿಸುಂದರನು ॥ ಬಾಲಾರುಣಸಂಕಾಶನಖಿಲದಿ। ಕ್ಪಾಲಕಪಾಲಕನಾಸುತನು ॥

ಶ್ಲೋ॥ ಯಸ್ಮಿನ್ ರಮನ್ತೇ ಮುನಯೋ ವಿದ್ಯಯಾಽಜ್ಞಾನವಿಪ್ಲವೇ । ತಂ ಗುರುಃ ಪ್ರಾಹ ರಾಮೇತಿ ರಮಣಾದ್ರಾಮ ಇತ್ಯಪಿ ॥ —(ಅ.ರಾ)

ಅ॥ ಅಜ್ಞಾನವು ಹೋದಮೇಲೆ ಯಾವನಲ್ಲಿ ಮುನಿಗಳು ತನ್ಮಯರಾಗುತ್ತಾರೋ ಅವನನ್ನು ರಾಮನೆಂದು ಅಥವಾ ಎಲ್ಲರಿಗೂ ಮನೋಹರನಾದ್ದರಿಂದ ರಾಮನೆಂದು ವಸಿಷ್ಠರು ನಾಮ ಕರಣವನ್ನು ಮಾಡಿದರು.

ಕೀ॥ ಕೇಕಯಸುತೆ ಭರತನನು, ಸುಮಿತ್ರೆಯು। ಶ್ರೀಕರವಹ ಸುತ ಯುಗಳವನು ॥ ಲೋಕವು ಲಕ್ಷ್ಮಣಶತ್ರುಘ್ನರೆನಲ್। ಜೋಕೆಯಿಂದ ಕೇಳ್. ಪಡೆದುದನು ॥

ಇದರಿಂದ ಆ ದಂಪತಿಗಳಲ್ಲಾದ ಪರಿಣಾಮವಿಶೇಷವನ್ನಂತು ಹೇಳಬೇಕಾದ್ದೇ ಇಲ್ಲ.

ಶ್ಲೋ॥ ಅನ್ತಃಕರಣತತ್ತ್ವಸ್ಯ ದಮ್ಪತ್ಯೋಃ ಸ್ನೇಹಸಂಶ್ರಯಾತ್ ॥ ಆನನ್ದಗ್ರನ್ಥಿರೇಕೋಽಯಮಪತ್ಯಮಿತಿ ಬದ್ಧ್ಯತೇ ॥ —(ಸು)

ಅ॥ ದಂಪತಿಗಳ ಪರಸ್ಪರಸ್ನೇಹದಿಂದಾದ ಅಂತಃಕರಣತತ್ತ್ವದ ಒಂದು ಆನಂದಗ್ರಂಥಿ ವಿಶೇಷವೇ ಮಗುವೆನಿಸಿಕೊಂಡು ಅವರಿಬ್ಬರನ್ನೂ ಕಟ್ಟಿಹಾಕುತ್ತದೆ.

ಹೀಗೆ ಸಂತತಿಯ ಲಾಭವಾದ್ದರಿಂದ ದಶರಥನು ಬೇಕಾದಷ್ಟು ದಾನಧರ್ಮಗಳನ್ನು ಮಾಡಿದನು. ಪುರನಾರಿಯರೆಲ್ಲ ಸೇರಿ ಆ ರಾತ್ರೆ ಜೋಗಳವನ್ನು ಹಾಡಿದ್ದೆಂತೆಂದರೆ—

ಆನಂದಭೈರವಿ—ಅಟತಾಳ.

ಜೋ ಜೋ ಜೋ ನೀಲಮೇಘಸಂಕಾಶ। ಲೀಲಾವಿನೋದ ಜೋ ಜೋ ॥ ಪಲ್ಲ ॥ ಜೋ ಜೋ ಜೋ ಜಗನ್ಮೋಹಕಾಮಲರೂಪ । ರವಿವಂಶದೀಪ ಜೋ ಜೋ ॥ ಅ. ಪ ॥ ಕುಲಕೋಟಿಕೋಟಿಗಳಿಗುದ್ಧಾರವನು ಗೈದೆ। ಬಲು ಹರ್ಷವಾಯಿತೈದೆ ॥ ಇಳೆಯಾಗುಹೋಗುಗಳ ತಿಳಿದು ನಡೆಸಲು ಬಲ್ಲೆ। ನಲವಿಂದ ಮುನಿಜನರನೊಲಿದು ರಕ್ಷಿಸಬಲ್ಲೆ ॥ ೧ ॥ ದುರ್ಜನರ ತಂಡಗಳ ಜರ್ಜರಗೊಳಿಪೆ ನೀನು । ನಿರ್ಜರರಿಗಭಯ ನೀನು ॥ ಆರ್ಜವವೆ ಮೊದಲಾದ ಗುಣಗಳಾಕರ ನೀನು। ಊರ್ಜಿತಶ್ರೀಯಿಂದ ಬಾಳಬಲ್ಲವ ನೀನು ॥ ೨ ॥ ನೀನು ನೋಡಿದೊಡೆಲ್ಲ ದೇವನಿವಹಕಧೀಶ । ಮಾನವೋತ್ತಮನ ವೇಷ ॥ ದೀನಜನಮಂದಾರ ಭೂರಿಮಂಗಲಭೂಷ। ನೀನಿನ್ನು ಸರ್ವಕಾಧಾರದ ಚಿದಾಕಾಶ ॥ ೩ ॥

ಈ ಸಂದರ್ಭದಲ್ಲಿ ಕವಿಗಳು ಹೇಳಿರುವದೇನೆಂದರೆ—

ಷ॥ ಒಡಲೊಳಬುಜಭವಾಂಡಕೋಟಿಯ। ನಡಗಿಸಿಪ್ಪ ಮಹಾಮಹಿಮಗಾ। ಯ್ತೊಡಕ ತೊಟ್ಟಿಲೊಳಮಳನಿಗಮಾಳಿಗಳು ಬೆರಗಾಗೆ ॥ ನುಡಿಗಗೋಚರದಮಳಬೊಮ್ಮದ । ಕಡುಹು ಸಿಂದುದು ಜೋಗುಳದಲಿಪ ! ಗಡದ ದೇವತ್ವಕೆ ಶಿಶುತ್ವದೊಳಾಯ್ತು ನಿರ್ವಾಹ ॥ —(ತೊ.ರಾ)

ಶ್ಲೋ॥ ಯಸ್ಯ ನಾಮೋಚ್ಚಾರಾತ್ ಕಾಲೋಽಪಿ ಹಿ ಬಾಧತೇ ನ ಭಕ್ತಜನಾನ್ ॥ ಜನದೃಗ್ಭೀತ್ಯಾ ಜನನೀ । ತಸ್ಯ ಕಪೋಲೇ ವ್ಯಧಾನ್ಮಷೀತಿಲಕಂ ॥(ಸು)

ಅ॥ ಯಾವನ ಹೆಸರನ್ನು ಉಚ್ಚಾರಮಾಡಿದ ಮಾತ್ರದಿಂದ ಯಮನು ಕೂಡ ಅವನ ಭಕ್ತರನ್ನು ಬಾಧಿಸುವದಿಲ್ಲವೊ ಆ ರಾಮಚಂದ್ರನಿಗೆ ಜನರ ದೃಷ್ಟಿ ತಾಕೀತೆಂಬ ಭೀತಿಯಿಂದ ತಾಯಿಯು ಕೆನ್ನೆಯ ಮೇಲೆ ಮಸಿಯಿಂದ ತಿಲಕವನ್ನಿಟ್ಟಳು.

ಶ್ಲೋ॥ ನಿವಸನ್ತಿ ಯಸ್ಯ ರೋಮ್ಣಿ । ಬ್ರಹ್ಮಕಟಾಹಾ ಯಥಾವಕಾಶೇನ ॥ ಚಿತ್ರಂ ಸ ಹರಿಃ ಶೇತೇ । ಪಞ್ಚವಿತಸ್ತಿಪ್ರಮಾಣಕಾನ್ದೋಲೇ ॥ —(ಸು)

ಅ॥ ಯಾರ ರೋಮದಲ್ಲಿ ಬ್ರಹ್ಮಾಂಡಕಟಾಹಗಳು ಇಕ್ಕಟ್ಟಿಲ್ಲದಂತೆ ಇರುವವೊ ಆ ಹರಿಯು ಐದುಗೇಣ ತೊಟ್ಟಿಲಲ್ಲಿ ಮಲಗಿರುವದು ಆಶ್ಚರ್ಯ!

ಶ್ಲೋ॥ ಲಕ್ಷ್ಮಣೋ ರಾಮಚನ್ದ್ರೇಣ ಶತ್ರುಘ್ನೋ ಭರತೇನ ಚ । ದ್ವನ್ದ್ವೀಭೂಯ ಚರನ್ತೌ ತೌ ಪಾಯಸಾಂಶಾನುಸಾರತಃ ॥ —(ಅ.ರಾ)

ಅ॥ ಪಾಯಸದ ಅಂಶಗಳಿಗೆ ಅನುಗುಣವಾಗಿ ಲಕ್ಷ್ಮಣನು ರಾಮಚಂದ್ರನೊಡನೆಯೂ ಶತ್ರುಘ್ನನು ಭರತನೊಡನೆಯೂ ಕೂಡಿಕೊಂಡು ನಡೆಯುತ್ತಿದ್ದರು.

ಹೀಗೆ ದಶರಥನ ಭಕ್ತಿಗೆ ಮೆಚ್ಚಿ ಬಂದ ರಾಮಾವತಾರದಿಂದ ಬರೀ ದಶರಥನಿಗೆ ಮಾತ್ರವೇ ಅಲ್ಲ; ಸಂಪೂರ್ಣಜಗತ್ತಿಗೇ ಎಷ್ಟು ಹೆಚ್ಚಿನ ಮಂಗಲವಾಗಿರುವದೆಂಬದನ್ನು ಶ್ರೀರಾಮಚರಿತ್ರೆಯು ಪ್ರಕಾಶಮಾಡುವದು. ಇದನ್ನು ಲಕ್ಷ್ಯದಲ್ಲಿಟ್ಟುಕೊಂಡ ಭಾಗವತಶಿರೋಮಣಿಗಳು ಪರಮಾತ್ಮನ ಅಹೇತುಕದಯಾಮಯತೆಯನ್ನು ಜನತೆಗೆ ತಿಳಿಸುವದಕ್ಕಾಗಿ ಪೀಠಿಕೆಯಲ್ಲಿ "ಅವತರಿಸಿದನು । ಹರಿಯು ತಿದಯದೊಳು" ಎಂದು ಮುಂತಾಗಿ ಪರಮಾತ್ಮನ ಗುಣಕಥನವನ್ನು ಮಾಡಿರುವರು.

**ಮಂಗಲ** ಸೌರಾಷ್ಟ್ರ—ಏಕತಾಳ **ಆರತಿ**

ಶ್ರೀರಾಮ ರಾಮಭದ್ರ । ರಾಮಚಂದ್ರ ಮಂಗಲಂ ॥ಪ॥ ಸೀತಾಲಕ್ಷ್ಮಣ ಸಮೇತ । ಪೂತಾತ್ಮ ತ್ರಿದಶವಿನುತ ॥೧॥ ಭರತಾದಿಸ್ವಜನಸೇವ್ಯ । ಭಕ್ತಸಂದೋಹಭಾವ್ಯ ॥ ೨ ॥ ಪರಮಾತ್ಮ ಪರಬ್ರಹ್ಮ । ಪರಂಜ್ಯೋತಿ ಪರಂಧಾಮ ॥ ೩ ॥ ವೇದಾಂತಸರ್ವಸಾರ । ಖೇದಸಂಹರಣ ಧೀರ ॥ ೪ ॥ ಭಕ್ತಸಂಪೂಜ್ಯವೇಷ । ಭಕ್ತೇಡ್ಯ ಚಿದ್ವಿಶೇಷ ॥ ೫ ॥ —(ಭಕ್ತಿ.ಗೀ)

ಶ್ಲೋ॥ ತವ ಕಥಾಮೃತಂ ತಪ್ತಜೀವನಮ್ ॥ ಕವಿಭಿರೀಡಿತಂ ಕಲ್ಮಷಾಪಹಮ್ ॥ ಶ್ರವಣಮಂಗಲಂ ಶ್ರೀಮದಾತತಮ್ । ಭುವಿ ಗೃಣನ್ತಿ ತೇ ಭೂರಿದಾ ಜನಾಃ ॥೧॥ ಕಾಯೇನ ವಾಚಾ ಮನಸೇನ್ದ್ರಿಯೈರ್ವಾ । ಬುದ್ಧ್ಯಾತ್ಮನಾ ವಾ ಪ್ರಕೃತೇಃ ಸ್ವಭಾವಾತ್ ॥ ಕರೋಮಿ ಯದ್ಯತ್ಸಕಲಂ ಪರಸ್ಮೈ । ನಾರಾಯಣಾಯೇತಿ ಸಮರ್ಪಯಾಮಿ ॥ ೨ ॥ ಅಚ್ಯುತಂ ಕೇಶವಂ ರಾಮನಾರಾಯಣಮ್ । ಕೃಷ್ಣದಾಮೋದರಂ ವಾಸುದೇವಂ ಹರಿಮ್ ॥ ಶ್ರೀಧರಂ ಮಾಧವಂ ಗೋಪಿಕಾವಲ್ಲಭಮ್ । ಜಾನಕೀನಾಯಕಂ ರಾಮಚನ್ದ್ರಂ ಭಜೇ ॥ ೩ ॥ —(ಸು)

**ಜಯ ಜಯ ರಘುವೀರ ಸಮರ್ಥ**

# ಶ್ರೀರಾಮವಿವಾಹ

## ಪೀಠಿಕೆ—ಗೃಹಸ್ಥಾಶ್ರಮ

ಖರಹರಪ್ರಿಯ—ಆದಿತಾಳ

ಕೇಳ್ಳೆ ಗೃಹಸ್ಥರಾಗಲು । ಯೋಗ್ಯತೆಯನು ॥ ಪ ॥ ಗುರುಕುಲವಾಸದಿ । ಶರೀರವು ಸವೆದಿರೆ ॥ ಗುರುಗಳನುಗ್ರಹ ಶಿರದೊಳಿರಲು ಬೇಕು ॥೧॥ ಗೃಹದ ಭಾರವನು । ವಹಿಪ ಯೋಗ್ಯತೆಯು ॥ ಬಹು ಸಡಗರದಲಿ । ಮಹಿಗೆ ತೋರಬೇಕು ॥ ೨ ॥ ಪ್ರತಿಕಕ್ಷಿಗಳಿಗೆ । ಪ್ರತಿಗೈಯುತ ಚಿ ॥ ತ್ಸ್ಥಿತಿಯೊಳು ಮನವನು । ಸತತ ನಿಲ್ಲಿಸಬೇಕು ॥ ೩ ॥

ಪ್ರಾಪಂಚಿಕರಾದ ಜನರು ತಮ್ಮ ಇಷ್ಟಪ್ರಾಪ್ತಿಗೂ ಅನಿಷ್ಟನಿವೃತ್ತಿಗೂ ಮನುಷ್ಯರನ್ನೇ ಶರಣುಹೋಗಿ ಆಯಾಸಪಡುತ್ತಿರುವದನ್ನು ಕಂಡು ಭಗವದ್ಭಕ್ತರು ಉಪದೇಶಿಸಿರುವದೇನೆಂದರೆ—

ಪಂತುವರಾಳಿ—ಅಟತಾಳ

ಸಾಕು ಸಾಕು ಮನುಜಸೇವೆಯು । ಶ್ರೀರಂಗರಾಯ ॥ ಪ ॥ ಸಾಕು ಸಾಕು ಮನುಜಸೇವೆ । ಮಾಡಿ ಮಾಡಿ ನೊಂದೆನಯ್ಯ ॥ ಬೇಕು ನಿನ್ನ ಪಾದ ಭಜನೆ । ಲೋಕದೊಡೆಯ ರಂಗರಾಯ ॥ ಅ.ಪ. ॥ ಹೊತ್ತಾರೆದ್ದು ಹೋಗಿ ಪರರ । ಚಿತ್ತವೃತ್ತಿಯನ್ನು ತಿಳಿದು । ಹತ್ತಿರಿದ್ದು ಹಲವುದಿವಸ । ಭೃತ್ಯನಂತೆ ಮಾಡಿರಿಕ್ತ ॥ ಹಸ್ತದಿಂದ ಮನೆಯ ಸೇರುವೆ । ಈ ಉದರಕಾಗಿ । ಮತ್ತೆ ಕಂಡ ಕಡೆಗೆ ತಿರುಗುವೆ । ನಾ ಒಂದು ಅಪರ । ರಾತ್ರಿಯಲ್ಲಿ ತಿಂದು ಮಲಗುವೆ । ಶ್ರೀರಂಗರಾಯ ॥೧॥ ಸ್ನಾನಸಂಧ್ಯಾದಿನಿತ್ಯ । ನೇಮವೆಲ್ಲವನ್ನು ತೊರೆದು । ಹೀನನಾಗಿ ಕೆಟ್ಟಜನರ । ಮನೆಗಳನ್ನು ತಿರುಗಿ ತಿರುಗಿ ॥ ಶ್ವಾನನಂತೆ ದಿನವ ಕಳೆವೆನೊ । ಈ ಉದರಕಾಗಿ । ಮಾನ ತೊರೆದು ಧನವ ಗಳಿಪೆನೊ । ನಾ ಕಡೆಗೆ ಎಳ್ಳ । ಕಾಳಿನಷ್ಟು ಸುಖವ ಕಾಣೆನೋ । ಶ್ರೀರಂಗರಾಯ ॥೨॥ ಒಡಲಿನಾಶೆಗಾಗಿ ನೊಣವು । ತೊಡಕಿ ಬಿದ್ದು ಜೇನಿನೊಳಗೆ । ಮಿಡುಕುವಂತೆ ನಾನು ಬಾಯ । ಬಿಡುತಲಿಹೆನು ಬಿಸರುಹಾಕ್ಷ ॥ ಬಿಡಿಸು ನನ್ನ ಪಾಶಬಂಧವ । ಹೇ, ಕರುಣಾನಿಧಿಯೆ, । ಕೊಡಿಸು ನಿನ್ನ ಭಕ್ತಸಂಗವ । ಸಾಹಸ್ರ ನಾಮ । ದೊಡೆಯನೆ ಚೆನ್ನಾದಿಕೇಶವ । ಶ್ರೀರಂಗರಾಯ ॥ ೩ ॥ —(ದಾ)

ದೇವರ ಸ್ತೋತ್ರವಲ್ಲದ ವಾಣಿಯು ಅಮಂಗಲವೆಂದು ಕವಿ ಹೇಳುವದೇನೆಂದರೆ—

ಶ್ಲೋ॥ ಅಪಿ ಲಲಿತಸುಗುಣವೇಣೀ । ಸಾಲಙ್ಕಾರಾಪಿ ಯಾ ಸುವರ್ಣಾಪಿ ॥ ರಘುತಿಲಕವಿಹೀನಾ ಚೇ । ದ್ವಾಣೀ ರಮಣೀವ ನೈವ ಕಲ್ಯಾಣೀ ॥ —(ಸು.ಲಾ)

ಅ॥ (೧) ಸ್ತ್ರೀಯು ಮನೋಹರವಾದ ಗುಣಯುಕ್ತವಾದ ಜಡೆಯುಳ್ಳವಳಾದರೂ ಅಲಂಕಾರಯುಕ್ತಳಾದರೂ ಒಳ್ಳೇರೂಪುಳ್ಳವಳಾದರೂ (ರಲಯೋರಭೇದವಾದ್ದರಿಂದ— ಲಘುತಿಲಕ

ಪಿಹೀನಾ ಚೇತ್) ಸಣ್ಣದಾದ ತಿಲಕವಿಲ್ಲದೆ ಇದ್ದರೆ ಮಂಗಲಕರಳಲ್ಲ. ಅದರಂತೆ (೨) ವಾಣಿಯು ಮನೋಹರವಾದ ಕಾವ್ಯಗುಣಗಳಿಂದ ಹೆಣೆಯಲ್ಪಟ್ಟಿದ್ದರೂ ಶಬ್ದಾಲಂಕಾರಗಳಿಂದಲೂ ಅರ್ಥಾಲಂಕಾರಗಳಿಂದಲೂ ಕೂಡಿದ್ದರೂ ಒಳ್ಳೇ ಅಕ್ಷರಗಳಿಂದ ತುಂಬಿದ್ದರೂ (ರಘುತಿಲಕ ಪಿಹೀನಾ ಚೇತ್) ರಾಮಚಂದ್ರನ ಸಂಬಂಧವಿಲ್ಲದೇ ಇದ್ದರೆ ಅದು ಮಂಗಲಕರವಲ್ಲ.

ಆದ್ದರಿಂದ ಬರೀ ಶ್ರೀಮಂತರ ಸೇವೆಯು ತಮ್ಮ ಪಾಲಿಗೆ ದೊರೆಯಬಾರದೆಂದು ದೊಡ್ಡವರು ಅಪೇಕ್ಷಿಸುವದೆಂತೆಂದರೆ—

ಕಂ|| ವಾಸವರೆನಿಂಬ ದುರ್ವಿಘ। ವಾಸವಮುದವುಳ್ಳ ಖಲರ ಮನೆವಾಗಿ ಲೊಳಾ || ವಾಸವಸೇಯದಿರಲಿ ದೇ। ವಾ, ಸವನಿಸುಗೆನಗೆ ನಿನ್ನ ಕರುಣಾವಿಭವಂ —(ಸೂ.ತಾ)

ಟಿ|| ವಾಸವರು + ಎವು—ನಾವೇ ಇಂದ್ರರು. ದುರ್ವಿಭವ + ಆಸವ(ಮದ್ಯ). ಮನೆವಾಗಿಲೊಳು + ಆವಾಸವ. ಸವನಿಸುಗೆ + ಎನಗೆ—ನನಗೆ ದೊರೆಯಲಿ.

ಏಕೆಂದರೆ ಒಂದುವಕ್ಷ ಆ ಶ್ರೀಮಂತರು ಔದಾರ್ಯದಿಂದ ನಮ್ಮ ಹೊಟ್ಟೆಬಟ್ಟೆಗಳನ್ನು ನೋಡಿ ಕಾಪಾಡಿದರೂ ಈ ಜನ್ಮವೇನೂ ಶಾಶ್ವತವಲ್ಲ.

ಶ್ಲೋ|| ಯಥಾಗಾರಂ ದೃಢಂ ಸ್ಥೂಣಂ ಜೀರ್ಣಂ ಭೂತ್ವಾವಸೀದತಿ ||
ತಥೈವ ಸೀದನ್ತಿ ನರಾ ಜರಾಮೃತ್ಯುವಶಂ ಗತಾಃ || —(ಸು)

ಅ|| ಬಿಗಿಯಾಗಿಯೂ ಗಟ್ಟಿಯಾಗಿಯೂ ಇರುವ ಮನೆಯು ಹಳೆಯದಾಗಿ ಬಿದ್ದುಹೋಗುವಂತೆ ಮನುಷ್ಯರು ಮುಪ್ಪಿಗೂ ಮರಣಕ್ಕೂ ವಶರಾಗಿ ನಾಶವಾಗುತ್ತಾರೆ.

ಅದಕ್ಕೆ ಪರಿಹಾರವೇ ಇಲ್ಲವೆಂದು ತಿಳಿದು ಜನರು ನಿರಾಶರಾಗಬಾರದೆಂದು ಜ್ಞಾನಿಗಳು ಹೇಳುವದೇನೆಂದರೆ—

ಶ್ಲೋ|| ಮೃತ್ಯೋರ್ಬಿಭೇಷಿ ಕಿಂ ಮೂಢ, ಮೃತ್ಯುರ್ಭೀತಂ ನ ಮುಞ್ಚತಿ||
ತಸ್ಮಾತ್ಸರ್ವಪ್ರಯತ್ನೇನ ಕುರು ಯತ್ನಮಜನ್ಮನಿ || —(ಸು)

ಅ|| ಎಲೋ ದಡ್ಡ, ಸಾವಿಗೇಕೆ ಹೆದರುತ್ತಿ? ಮರಣವು ಹೆದರಿದವರನ್ನು ಬಿಡುವದಿಲ್ಲ. ಆದ್ದರಿಂದ ಎಲ್ಲಾ ಪ್ರಯತ್ನದಿಂದಲೂ ಹುಟ್ಟದಿರುವದಕ್ಕೇ ಯತ್ನವನ್ನು ಮಾಡಬೇಕು.

ಆ ಸ್ಥಿತಿ ಬರಬೇಕಾದರೆ ದೇವರ ಅನುಗ್ರಹವು ಬೇಕು; ಆದ್ದರಿಂದ ಭಕ್ತರು ಯಾವಾಗಲೂ ಬಯಸುವದೇನೆಂದರೆ—

ಶ್ರೀರಾಗ—ಆದಿತಾಳ

ಶ್ರೀಪತಿಯೊಲವೊಂ। ದೇಪರಿಯಾಗಿರಲಿ || ಪ || ಆ ಪರಾತ್ಪರನಾ। ದಾ ಪುರುಷೋತ್ತಮ || ಅ.ಪ || ಭ್ರಾಂತಿಯ ಜಗದಿಂ। ದಂತರಂಗವು ಕುಣಿ || ವಂತಿರದಾ ಮಹಾ। ಶಾಂತಿದಾಂತಿಗಳೀವ || ೧ || ಪರಿಪರಿ ತೋರುವೆ। ಚ್ಛೆರುಕನಸೆನ್ನುವ || ಮರುಜಲತೃಷ್ಣೆಯ। ನಿರದಂತೆ ಕರುಣಿಪ || ೨ || ಸುಪ್ತಿಸಮಾಧಿಯೊಳ್। ಕ್ಲುಪ್ತವಾಗಿ ಸ್ವಯಂ || ದೀಪ್ತಿಯಿಂ ರಾಜಿಸು। ತಾಪ್ತ ಶಂಕರನಹ || ೩ || —(ಅ.ಗೀ)

ಆ ದೇವರ ಅನುಗ್ರಹವನ್ನು ಬರಮಾಡಿಕೊಡುವದಕ್ಕೊಬ್ಬ ಗುರು ಬೇಕು. ಆ ಗುರು ನಮಗೆ ದೊರೆಯುವದಕ್ಕೆ ನಮ್ಮಲ್ಲಿ ವೈರಾಗ್ಯವು ಬೇಕು.

ತ್ರಿ॥ ಹಸಿಯು ಸೌದೆಯು ತಂದು ಹೊಸೆದರುಂಟೇ ಕಿಚ್ಚು? । ವಿಷಯಂಗಳುಳ್ಳ ಮನುಜಂಗೆ ಗುರುಕರುಣ । ವಶವರ್ತಿಯಹುದೆ? ಸರ್ವಜ್ಞ ॥ —(ಸ.ವ)

ವಿರಕ್ತರಾಗಿ ಗುರುಗಳ ಬಳಿಗೆ ಹೋಗಿ ನಾವು ಮಾಡಬೇಕಾದ್ದೇನೆಂದರೆ—

ನಾದರಾಮಕ್ರಿಯ—ಛಾಪು

ಮನಸವ ಶೋಧಿಸಬೇಕು ನಿಚ್ಚ । ದಿನ । ದಿನದಲಿ ಮಾಡುವ ಪಾಪಪುಣ್ಯದ ವೆಚ್ಚ ॥ ಪ ॥ ಧರ್ಮ ಅಧರ್ಮ ವಿಂಗಡಿಸಿ । ಆ । ಧರ್ಮದ ನರಗಳ ಬೇರ ಕತ್ತರಿಸಿ ॥ ಕರ್ಮಲಾಚಾರದಿ ಬೆರಸಿ । ಪರ । ಬೊಮ್ಮಮೂರುತಿಪಾದಕಮಲವ ಭಜಿಸಿ ॥ ೧ ॥ ಮನಸವ ಖಂಡಿಸಿ ಒಮ್ಮೆ ಮಾಣೋ । ನಿನ್ನ । ತನುವ ದಂಡಿಸಿ ಪರಮಾತ್ಮನ್ನ ಕಾಣೋ ॥ ಕೊನೆಗೆ ನಿನ್ನೊಳಗೆ ನೀ ಜಾಣೋ । ಮುಕ್ತಿ । ನಿನಗೆ ದೂರಿಲ್ಲವು ಒಂದೇ ಗೇಣೋ ॥ ೨ ॥ ಆತನಪರಿಗೆ ಕೇಡಿಲ್ಲ । ಅವ । ಪಾತಕಪತಿತ ಸಂಗವ ಮಾಳ್ಪನಲ್ಲ ॥ ನೀತಿವಂತರು ಕೇಳಿರೆಲ್ಲ । ನಮ । ಗಾತನೆ ಗತಿಯಿಹಾವ ಪುರಂದರವಿಠಲಾ ॥ ೩ ॥ —(ದಾ)

ಹೀಗೆ ಮನಸ್ಸಿನ ಶುದ್ಧಿಗಾಗಿ ಯತ್ನಿಸುವವರು ಬಹುಕಡಿಮೆ.

ಶ್ಲೋ॥ ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ । —(ಭ.ಗೀ)

ಅ॥ ಮನುಷ್ಯರಲ್ಲಿ ಸಹಸ್ರಕ್ಕೊಬ್ಬನು ಆ ಸಿದ್ಧಿಗಾಗಿ ಯತ್ನಿಸುತ್ತಾನೆ.

ಆ ಸಾವಿರಕ್ಕೊಬ್ಬರು ಎಂಥವರಾಗಿರುವರೆಂದರೆ—

ಶ್ಲೋ॥ ಮಹಾತ್ಮಾನಸ್ತು ಮಾಂ ಪಾರ್ಥ, ದೈವೀಂ ಪ್ರಕೃತಿಮಾಶ್ರಿತಾಃ । ಭಜನ್ತ್ಯನನ್ಯಮನಸೋ ಜ್ಞಾತ್ವಾ ಭೂತಾದಿಮವ್ಯಯಮ್ ॥ —(ಭ.ಗೀ)

ಅ॥ ಹೇ, ಅರ್ಜುನ, ದೈವೀಪ್ರಕೃತಿಯನ್ನು ಹೊಂದಿದ ಮಹಾತ್ಮರು ಇನ್ನೊಂದುಕಡೆ ಮನಸ್ಸುಹಾಕದೆ ನನ್ನನ್ನು ಸರ್ವಕ್ಕೂ ಆದಿಯೆಂದೂ ನಾಶರಹಿತನೆಂದೂ ತಿಳಿದು ಭಜಿಸುವರು.

ದೈವೀಪ್ರಕೃತಿಯೆಂದರೆ—

ಶ್ಲೋ॥ ಅಭಯಂ ಸತ್ತ್ವಸಂಶುದ್ಧಿರ್ಜ್ಞಾನಯೋಗವ್ಯವಸ್ಥಿತಿಃ । ದಾನಂ ದಮಶ್ಚ ಯಜ್ಞಶ್ಚ ಸ್ವಾಧ್ಯಾಯಸ್ತಪ ಆರ್ಜವಮ್ ॥ ಅಹಿಂಸಾ ಸತ್ಯಮಕ್ರೋಧಸ್ತ್ಯಾಗಃ ಶಾನ್ತಿರಪೈಶುನಮ್ । ದಯಾ ಭೂತೇಷ್ವಲೋಲುಪ್ತ್ವಂ ಮಾರ್ದವಂ ಹ್ರೀರಚಾಪಲಮ್ । ತೇಜಃ ಕ್ಷಮಾ ಧೃತಿಃ ಶೌಚಮದ್ರೋಹೋ ನಾತಿಮಾನಿತಾ । ಭವನ್ತಿ ಸಮ್ಪದಂ ದೈವೀಮಭಿಜಾತಸ್ಯ ಭಾರತ ॥ —(ಭ.ಗೀ)

ಅ॥ ಭಯವಿಲ್ಲದಿರುವಿಕೆ, ಚಿತ್ತಶುದ್ಧಿ, ಆತ್ಮಾದಿಪದಾರ್ಥಗಳ ಸ್ವರೂಪವನ್ನು ತಿಳಿದು ಒಂದೇ ಮನಸ್ಸಿನಿಂದ ಅವುಗಳನ್ನು ಕೂಡಿಸಿಕೊಂಡಿರೋಣ, ಅನ್ನ ಮೊದಲಾದವುಗಳನ್ನು ಕೊಡುವದು, ಹೊರಗಣ ಇಂದ್ರಿಯುಗಳನ್ನು ಬಿಗಿಹಿಡಿಯುವದು, ಅಗ್ನಿಹೋತ್ರಮೊದಲಾದವು, ವೇದಾಧ್ಯಯನ, ಶಾರೀರಾದಿತಪಸ್ಸು, ಸರಳಸ್ವಭಾವ, ಪರಪೀಡೆಯನ್ನು ಮಾಡದೆ ಇರುವದು, ಇದ್ದದ್ದಿದ್ದಹಾಗೆ ಹೇಳುವದು,

ಸಿಟ್ಟಿಲ್ಲದಿರುವದು, ಸಂನ್ಯಾಸ, ಮನೋನಿಗ್ರಹ, ಚಾಡಿಹೇಳದಿರುವದು, ಕನಿಕರ, ವಿಷಯುಗಳ ಮುಂದೆ ಮನಸ್ಸು ವಿಕಾರವಾಗದೆ ಇರುವದು, ಮೃದುಸ್ವಭಾವ, ನಾಚಿಕೆ, ಚಪಲತೆಯಿಲ್ಲದಿರುವದು, ಪ್ರಗಲ್ಭತೆ, ಕ್ಷಮೆ, ಧೈರ್ಯ, ಶೌಚ, ಕೆಡಕುಮಾಡದೆ ಇರುವದು, ನಿರಭಿಮಾನ—ಇವು ದೈವೀ ಸಂಪತ್ತಿನಲ್ಲಿ ಹುಟ್ಟಿದವನಿಗೆ ಬರುತ್ತವೆ.

ಈ ದೈವೀಪ್ರಕೃತಿಯನ್ನು ಹೊಂದಿ ನಾವು ವಿರಕ್ತರಾದರೆ ನಮ್ಮ ಯೋಗಕ್ಷೇಮಕ್ಕೆ ಯಾರು ಗತಿಯೆಂದು ಹೆದರಬೇಕಾದ್ದಿಲ್ಲ. ವಿರಕ್ತರ ಯೋಗಕ್ಷೇಮವೆಲ್ಲ ಗೃಹಸ್ಥರ ಮೇಲೆ ಬಿದ್ದ ಭಾರ. ವಿರಕ್ತರೆಲ್ಲರ ಯೋಗಕ್ಷೇಮದ ಗುತ್ತಿಗೆಯನ್ನು ಹೊತ್ತಿರುವ ಒಬ್ಬ ಗೃಹಸ್ಥನಿದ್ದಾನೆ. ಅವನು ಯಾರೆಂದರೆ–

ಷ|| ಸಿರಿಯೆ ಕುಲಸತಿ, ಸುತನು ಕಮಲಜ, | ಹಿರಿಯ ಸೊಸೆ ಶಾರದೆ, ಸಹೋದರಿ | ಗಿರಿಜೆ, ಮೈದುನ ಶಂಕರನು, ಸುರರೆಲ್ಲ ಕಿಂಕರರು, || ನಿರುತ ಮಾಯೆಯು ದಾಸಿ, ನಿಜಮಂ | ದಿರ ಮಜಾಂಡವು, ಜಂಗಮಸ್ಥಾ | ವರಕುಟುಂಬಿಗ ನೀನು ರಕ್ಷಿಸು ನಮ್ಮ ನನವರತ || —(ಹ.ಭ)

ಶ್ಲೋ|| ಮಾಮೇವ ಯೇ ಪ್ರಪದ್ಯನ್ತೇ ಮಾಯಾಮೇತಾಂ ತರನ್ತಿ ತೇ | —(ಭ.ಗೀ)

ಅ|| ನನಗೇ ಯಾರು ಶರಣುಬರುತ್ತಾರೊ ಅವರು ಈ ಮಾಯೆಯನ್ನು ದಾಟುತ್ತಾರೆ.

ಎಂದು ಆ ಭಗವಂತನೇ ಹೇಳಿದ್ದಾನೆ. ಆದ್ದರಿಂದ ಸಮರ್ಥರಾಮದಾಸರು ಉಪದೇಶ ಮಾಡಿರುವದೇನೆಂದರೆ—

ಸಾಂ|| ಮನವೆ ರಾಮನ ಬಿಟ್ಟು ಬಯಸಬೇಡಿತರನ | ನೆನೆಯಬೇಡನ್ಯಮಾನವರ || ನೆನೆ ವೇದಶಾಸ್ತ್ರಪುರಾಣವರ್ಣಿತನನು | ಮನವೆ ನೀ ಧ್ಯಾನ್ಯನೆಂದೆನಿಸುವೆ || —(ಮ.ಉ)

ಆ ರಾಮಧ್ಯಾನವು ಹೇಗೆ ನಡೆಯಬೇಕೆಂದರೆ—

ತ್ರಿ|| ಧ್ಯಾನದಾ ಹೊಸಬತ್ತಿ ಮೌನದಾ ತಿಳಿದುಪ್ಪ | ಸ್ನಾನಸುಘನವೆಂಬಾ ಬೆಳಗಿನಾ ಜ್ಯೋತಿಯು | ಜ್ಞಾನವಂ ಸುಡಗು ಸರ್ವಜ್ಞ || —(ಸ.ವ)

ಗೃಹಸ್ಥನು ಧ್ಯಾನಮಾಡುವದಕ್ಕೆ ತೊಡಗಿದರೆ ಹೆಂಡತಿಮೊದಲಾದವರ ಮೇಲಿನ ಪ್ರೇಮವು ಅವನಿಗೆ ಅಡ್ಡಬರುವದೆಂದು ತಿಳಿಯಬಾರದು. ಏಕೆಂದರೆ—

ಶ್ಲೋ|| ಪರಮೈವ ಯಾ ಸ್ವಭಾವಾ | ದಪಕಾರಂ ಪ್ರಾಪಿತಾ ಯದಪಿ || ನಾ ಕಿಂ ಸ್ವಾಸ್ಮಿತ್ಯಾ | ದೈನ್ಯಾಪಾದನಕರೀ ಭವೇತ್ಪುಂಸಃ || —(ಸು.ಲಾ)

ಅ|| (೧) ಸ್ವಭಾವವಾಗಿ ಉದಾರಳೇ ಆದ ಸ್ತ್ರೀಯು ತನಗೆ ಒಂದು ಪಕ್ಷ ದುಃಖವೇ ಆದರೂ ತನ್ನ ಇರುವಿಕೆಯಿಂದ ಗಂಡನಿಗೆಂದಿಗಾದರೂ ದೈನ್ಯವನ್ನು ಹುಟ್ಟಿಸುವಳೇನು? (೨) (ಇದರಂತೆ) ಸ್ವಭಾವವಾಗಿ ಪರಮಾ ಎಂದರೆ ಶ್ರೇಷ್ಠಳೆನಿಸಿಕೊಂಡ ಸ್ತ್ರೀಯು ಪಕಾರವನ್ನು ತೆಗೆ ಬಿಟ್ಟರೂ ರಮಾ. (ಲಕ್ಷ್ಮಿ) ಎಂದು ಉಳಿಯುವದರಿಂದ ಆಕೆ ತನ್ನ ಗಂಡನನ್ನು ಎಂದಿಗಾದರೂ ದಾರಿದ್ರ್ಯದೆಸೆಯಲ್ಲಿಟ್ಟಾಳೇನು?

ಆದ್ದರಿಂದ ಗೃಹಸ್ಥನೂ ಅಗತ್ಯವಾಗಿ ಧ್ಯಾನದಲ್ಲಿ ತೊಡಗಬೇಕು. ಅವನ ಧ್ಯಾನವು ಹೇಗಿರಬೇಕೆಂದರೆ—

ವೃ|| ಘಟಿಕಾಪಾತ್ರಕನನ್ನರೊಳ್ಕಥೆಯನೊಂದಂ ಸೂಚಿಸುತ್ತಿರ್ದೊಡಂ |
ಸ್ಫುಟದಿಂ ಚಿತ್ತಮುಮುಕ್ತಿಯುಂ ಪದಪದಕ್ಕಾಪಾತ್ರೆಯುಂ ಸಾರ್ಗುಮಂ ||
ತುಟುಮು ತಾನಂತುಟು ಬಾಹ್ಯದೊಳ್ನೆಗಳ್ದೊಡಂ ಧ್ಯಾನಂ ಕ್ಷಣಕ್ಕೊರ್ಮೆ ಸಂ |
ಘಟಿಸಲ್ಕಿಮ್ಮ ಪದಂಗಳೊಳ್ಪಿರಿಯಳಾ ರತ್ನಾಕರಾಧೀಶ್ವರಾ || —(ರ.ಶ)

ಟಿ|| ಘಟಿಕಾಪಾತ್ರಕಂ—ತುಂಬಿದ ಗಡಿಗೆಯನ್ನು ಹೊತ್ತುಕೊಂಡು ಕುಣಿಯುತ್ತ ಕಥೆಯನ್ನು ಹೇಳುವವನು. ಬಾಹ್ಯದೊಳ್ನೆಗಳ್ದೊಡಂ—ಹೊರಗೆ ವ್ಯವಹಾರವನ್ನು ಮಾಡಿದರೂ.

ಗೃಹಸ್ಥರ ಧ್ಯಾನಕ್ಕೆ ಎಷ್ಟೋ ಮಂತ್ರಗಳಿದ್ದರೂ ಅವುಗಳಲ್ಲೆಲ್ಲ ರಾಮಮಂತ್ರವು ಬಹಳ ಪ್ರಶಸ್ತವಾದದ್ದು. ಏಕೆಂದರೆ—

ಶ್ಲೋ|| ಶತ್ರುಚ್ಛೇದೈಕಮಂತ್ರಂ, ಸಕಲಮುಪನಿಷದ್ವಾಕ್ಯಸಂಪೂಜ್ಯಮಂತ್ರಮ್ || ಸಂಸಾರೋತ್ತಾರಮಂತ್ರಂ ಸಮುಚಿತಸುಗುಣಾಪಾದಕಶ್ರೇಷ್ಠಮಂತ್ರಮ್ || ಸರ್ವೈಶ್ವರ್ಯೈಕಮಂತ್ರಂ ವ್ಯಸನಭುಜಗಸಂದಷ್ಟಸಂತ್ರಾಣಮಂತ್ರಮ್ | ಜಿಹ್ವೇ, ಶ್ರೀರಾಮಮಂತ್ರಂ ಜಪ ಜಪ ಜಪ ಮೇ ಜನ್ಮಸಾಫಲ್ಯಮಂತ್ರಮ್ || — (ರಾ.ಕ.ಅ)

ಅ|| ರಾಮಮಂತ್ರವು ಶತ್ರುಗಳನ್ನೆಲ್ಲ ಹೋಗಲಾಡಿಸುವದರಲ್ಲಿ ಹೆಸರಾದದ್ದು, ಪ್ರಕಾಶಮಾನವಾದ ಉಪನಿಷದ್ವಾಕ್ಯಗಳಲ್ಲೆಲ್ಲ ಪೂಜ್ಯವಾದದ್ದು, ಸಂಸಾರದಿಂದ ದಾಟಿಸುವಂಥದ್ದು, ಯೋಗ್ಯವಾದ ಗುಣಗಳನ್ನು ಕೊಡುವದರಲ್ಲೆಲ್ಲ ಶ್ರೇಷ್ಠವಾದದ್ದು, ಸಮಸ್ತ ಐಶ್ವರ್ಯಗಳನ್ನೂ ಕೊಡತಕ್ಕದ್ದು, ವ್ಯಸನವೆಂಬ ಹಾವು ಕಚ್ಚಿದವರನ್ನು ಬದುಕಿಸತಕ್ಕದ್ದು. ಹೇ, ನಾಲಿಗೆಯೇ, ನನ್ನ ಜನ್ಮಸಾಫಲ್ಯವನ್ನುಂಟುಮಾಡುವ ರಾಮಮಂತ್ರವನ್ನು ಜಪಿಸು, ಜಪಿಸು, ಜಪಿಸು.

ಧ್ಯಾನಕ್ಕೆ ವಿಷಯನಾದ ಆ ರಾಮನನ್ನು ಕೇಳಿಕೊಳ್ಳಬೇಕಾದ್ದೇನೆಂದರೆ—

ದೇಶೀಕಾಪಿ—ತ್ರಿಪುಟಿ

ಏತಕುಪೇಕ್ಷೆಯ ಮಾಡುವೆ | ರಘುರಾಮ ದಯಾಳೊ || ಪ || ಎಲ್ಲೆಲ್ಲಿಯೂ ನೀ | ನಿರುತಿಹೆಯೆಂಬರು || ಎಲ್ಲಿಯೂ ನನಗೆ ನೀ ಕಾಣಿಸೆ || ೧ || ಎಲ್ಲವ ತಿಳಿಯುವ ನಾದರೆ ಎನ್ನಯ | ಸೊಲ್ಲಿಗೆ ಕಿವಿಗೊಡಬಾರದೆ? || ೨ || ಶರಣರಕ್ಷಕನೆಂಬ | ಬಿರುದುಗೊಪ್ಪುವಂತೆ || ವರಚಿದ್ರೂಪವ | ತೋರದೆ || ೩ ||
—(ಭಕ್ತಿ. ಗೀ)

ರಾಮಜಪದಿಂದ ಗೃಹಸ್ಥರಿಗೆ ದೊರೆಯುವ ಗುಣಗಳೇನೆಂದರೆ—

ಶ್ಲೋ|| ಮಾನುಷ್ಯಂ, ವರವಂಶಜನ್ಮ, ವಿಭವೋ, ದೀರ್ಘಾಯುರಾರೋಗ್ಯತಾ, | ಸನ್ಮಿತ್ರಂ, ಸುಸುತಃ, ಸತೀ ಪ್ರಿಯತಮಾ, ಭಕ್ತಿಶ್ಚ ನಾರಾಯಣೇ, || ವಿದ್ವತ್ತ್ವಂ, ಸುಜನತ್ವಮಿಂದ್ರಿಯಜಯಃ, ಸತ್ಪಾತ್ರದಾನೇ ರತಿ | ಸ್ತೇ ಪುಣ್ಯೇನ ವಿನಾ ತ್ರಯೋದಶಗುಣಾಃ ಸಂಸಾರಿಣಾಂ ದುರ್ಲಭಾಃ || —(ಸು)

ಅ|| ಮನುಷ್ಯತ್ವ, ಒಳ್ಳೆ ವಂಶದಲ್ಲಿ ಹುಟ್ಟುವಿಕೆ, ಐಶ್ವರ್ಯ, ದೀರ್ಘಾಯು, ಆರೋಗ್ಯ, ಒಳ್ಳೆ ಗೆಳೆಯ, ಒಳ್ಳೆ ಮಗ, ಪ್ರಿಯತಮಳಾದ ಹೆಂಡತಿ, ವಿಷ್ಣುಭಕ್ತಿ, ವಿದ್ವತ್ತ್ವ, ಸುಜನತ್ವ, ಜಿತೇಂದ್ರಿ

ಯತ್ವ; ಸತ್ಪಾತ್ರದಲ್ಲಿ ದಾನಮಾಡುವ ಇಚ್ಛೆ—ಈ ಹದಿಮೂರು ಗುಣಗಳು (ರಾಮಜಪದ) ಪುಣ್ಯವಿಲ್ಲದಿದ್ದರೆ ಸಂಸಾರಿಗಳಿಗೆ ದೊರೆಯುವದಿಲ್ಲ.

ಈ ಗುಣಗಳ ನೆನಪುಕೊಡಬೇಕೆಂದೇ ಪೀಠಿಕೆಯಲ್ಲಿ "ಕೇಳ್ವೆ ಗೃಹಸ್ಥರಾಗಲು" ಎಂದು ಮೊದಲಾಗಿ ಭಗವದ್ಭಕ್ತರು ಉಪದೇಶಮಾಡಿರುವರು. ಈ ಪದ್ಯದಲ್ಲಿ ಹೇಳಿರುವ ಯೋಗ್ಯತೆಗಳಿಗೆ ಉದಾಹರಣೆಯಾಗಿ ಶ್ರೀರಾಮವಿವಾಹವೆಂಬ ಆಖ್ಯಾನವು ಯಥಾಮತಿ ನಿರೂಪಣಮಾಡಲಾಗುವದು.



## ಆಖ್ಯಾನ



ಕೀ॥ ಐದನೆಯಬ್ದದಿ ಬರೆಯ ಕಲಿತು ನೇ|ಮಾದರದಿಂ ಹನ್ನೆರಡರೊಳು ॥
ಸಾಧಿಸಿ ಪುಂಜಿಸು ರಾಮಚಂದ್ರ ಹೆಸ|ರಾದನು ಲೋಕಗಳೆರಡರೊಳು ॥

ಹೀಗೆ ರಾಮನು ಧನುರ್ವಿದ್ಯೆ ಮೊದಲಾದ್ದರಲ್ಲಿ ಹೆಸರುಗೊಂಡು ಯೌವನವನ್ನು ಪಡೆಯುತ್ತ ಬಂದದ್ದನ್ನು ನೋಡಿ ದಶರಥನು ಯೋಚಿಸಿದ್ದೇನೆಂದರೆ—

ವೃ॥ ಸರ್ವಧರ್ಮಂಗಳ್ಗೆ ಪೂರ್ವಮಪ್ಪುದರಿಂದೆ | ಸರ್ವಾಶ್ರಮಾಧಾರವಪ್ಪ ಕತದಿಂ ॥ ಉರ್ವಿಯೊಳ್ಮನುಜರ್ಗೆ ಸರ್ವಸೌಖ್ಯಮನೀವ | ಗುರ್ವಿನಿಂದೆಸೆವುದು ಗೃಹಸ್ಥಾಶ್ರಮಂ ॥ —(ಜ.ವ)

ಟಿ॥ ಕತ—ಕಾರಣ. ಅಗುರ್ವು—ಹೆಚ್ಚುಗಾರಿಕೆ.

ಆದ್ದರಿಂದ ಅವನು ಮಕ್ಕಳ ವಿವಾಹವನ್ನು ಮಾಡಬೇಕೆಂದಿರುವಾಗ—

ಸಾ॥ ಬಂದನು ಕೌಶಿಕನಂದು ದಶರಥನ | ಸುಂದರತರಗೃಹಕಾಗ ॥
ಅಂದಿನ ಕಾರ್ಯವನಾತನ ದೆಸೆಯಿಂ | ಚಂದದಿ ಸಾಧಿಸೆ ಬೇಗ ॥

ಅವರನ್ನು ಸತ್ಕರಿಸಿ ದಶರಥನು ಹೇಳುತ್ತಾನೆ—

ಶ್ಲೋ॥ ಸಂಸಾರವಿಷವೃಕ್ಷಸ್ಯ ದ್ವೇ ಫಲೇ ಹ್ಯಮೃತೋಪಮೇ | ಕಾವ್ಯಾಮೃತರಸಾಸ್ವಾದ, ಆಲಾಪಃ ಸಜ್ಜನೈಃ ಸಹ ॥ —(ಸು)

ಅ॥ ಸಂಸಾರವೆಂಬ ವಿಷದ ಮರಕ್ಕೆ ಅಮೃತದಂಥ ಎರಡು ಫಲಗಳಿವೆ. ಅಮೃತಪ್ರಾಯವಾದ ಕಾವ್ಯರಸವನ್ನು ರುಚಿನೋಡುವದೊಂದು; ಸತ್ಪುರುಷರೊಡನೆ ಸಂಭಾಷಣೆಮಾಡುವದೊಂದು.

ಆದಿನ ತನಗೆ ಆ ಎರಡನೆಯದು ಪ್ರಾಪ್ತವಾಗಿರುವದೆಂದು ದಶರಥನು ವಿಶ್ವಾಮಿತ್ರರನ್ನು ಕುರಿತು —

ಶ್ಲೋ॥ ಯದರ್ಥಮಾಗತೋಽಸಿ ತ್ವಂ ಬ್ರೂಹಿ ಸತ್ಯಂ ಕರೋಮಿ ತತ್ ॥ —(ಅ.ರಾ)

ಅ॥ ತಾವು ಬಂದ ಕಾರಣವನ್ನು ಹೇಳಿದರೆ ನಿಜವಾಗಿ ಅದನ್ನು ನಡೆಸಿಕೊಡುತ್ತೇನೆ.

ಎನಲು ಆಗ ವಿಶ್ವಾಮಿತ್ರರು ಹೇಳುತ್ತಾರೆ—

ಶ್ಲೋ॥ ಗುಣಾಃ ಕುರ್ವನ್ತಿ ದೂತತ್ವಂ ದೂರೇಽಪಿ ವಸತಾಂ ಸತಾಮ್।
ಕೇತಕೀಗನ್ಧಮಾಘ್ರಾಯ ಸ್ವಯಮಾಯಾನ್ತಿ ಷಟ್ಪದಾಃ ॥ —(ಸು).

ಅ॥ ಸತ್ಪುರುಷರು ದೂರದಲ್ಲಿ ವಾಸಮಾಡಿಕೊಂಡಿದ್ದರೂ ಗುಣಗಳು ಅವರ ದೂತತ್ವವನ್ನು ಮಾಡುತ್ತವೆ. ಕೇದಗೆಹೂವಿನ ವಾಸನೆಯನ್ನು ಹಿಡಿದು ಭ್ರಮರಗಳು ತಾವಾಗಿ ಬರುತ್ತವೆ.

ಪ್ರಕೃತ ನಾವು ಶ್ರೀರಾಮಲಕ್ಷ್ಮಣರ ಗುಣಗಳಿಂದ ಕರೆಸಿಕೊಂಡವರಾಗಿ ಬಂದಿದ್ದೇವೆ. ನಮ್ಮಂಥ ತಪಸ್ವಿಗಳಿಗೆ ಎಲ್ಲ ಕಾರ್ಯಗಳೂ ದೈವಸಹಾಯದಿಂದ ಸುಸೂತ್ರವಾಗಿ ನೆರವೇರುವದರಿಂದ ನಾವು ಯಾರನ್ನೂ ಆಶ್ರಯಿಸಬೇಕಾದ್ದಿಲ್ಲವಾದರೂ ಆ ದೈವವು ಆರು ವಿಷಯಗಳನ್ನು ಅವಲಂಬಿಸಿಕೊಂಡಿದೆ. ಅವು ಯಾವವೆಂದರೆ—

ಶ್ಲೋ॥ ಉದ್ಯಮಂ ಸಾಹಸಂ ಧೈರ್ಯಂ ಬುದ್ಧಿಃ ಶಕ್ತಿಃ ಪರಾಕ್ರಮಃ।
ಷಡೇತೇ ಯತ್ರ ವರ್ತನ್ತೇ ತತ್ರ ದೇವಃ ಸಹಾಯಕೃತ್ ॥ —(ಸು)

ಅ॥ ಉದ್ಯೋಗ, ಸಾಹಸ, ಧೈರ್ಯ, ಬುದ್ಧಿ, ಶಕ್ತಿ, ಪರಾಕ್ರಮ– ಈ ಆರು ಎಲ್ಲಿರುವವೋ ಅಲ್ಲಿ ದೇವರು ಸಹಾಯಮಾಡುವನು.

ಆದ್ದರಿಂದ ನಿನ್ನ ಬಳಿಗೆ ಬರುವ ಉದ್ಯೋಗವೆಂಬ ಮೊದಲನೆಯ ಸಾಧನವನ್ನು ಮಾಡಿದರೆ ಉಳಿದವುಗಳು ತಾವೇ ಹಿಂಬಾಲಿಸಿ ಬರುವವೆಂದು ನಾವು ತಿಳಿದಿದ್ದೇವೆ. ನಮಗೆ ಆಗಬೇಕಾಗಿರುವ ಕಾರ್ಯವೇನೆಂದರೆ—

ಕಾನಡ—ಆದಿತಾಳ

ಲಾಲಿಸು ನೀ ದಶರಥ। ಕೇಳಿ ನಡೆಸು ನೀನೆಮ್ಮ ಮನೋರಥ ॥ ಪ ॥ ಬರುವ ಪರ್ವದಲಿ ಸುರಪಿತೃಸಂಘಕೆ ॥ ಹರುಷವೀವ ಯಾಗವ ನಾ ಗೈವೆನು ॥ ೧ ॥ ಮಾರೀಚಸುಬಾಹುಗಳೆಂಬುವರದ ॥ ವಿಚಾರಿ ಕೆಡಿಸೆ ಕಾದಿರುವರೆಂಬುದಿದ ॥ ೨ ॥ ಲಕ್ಷ್ಮಣನೊಂದಿಗೆ ರಾಮಚಂದ್ರಮನ ॥ ಈ ಕ್ಷಣದೊಳಗೆವೊಡನೆ ಕಳುಹುವದು ॥ ೩ ॥

ಈ ಮಾತನ್ನು ಕೇಳುತ್ತಲೇ ಮಗನನ್ನು ಅಗಲಿರಲಾರದ ದುಃಖದಿಂದ ದಶರಥನು ವಿಶ್ವಾಮಿತ್ರರನ್ನು ಬೇಡಿಕೊಳ್ಳುತ್ತಾನೆ—

ತೋಡಿ—ರೂಪಕ

ಮುನಿವರಾ, ಕ್ಷಮಿಸು ಮಗನ ಕಳುಹಲಾರೆನೈ ॥ಪ॥ ಬಹಳ ದಿವಸ ತಪವಗೈದು। ಮಹಿಯೊಳೀಗ ಪೆತ್ತಿರುವನ ॥ ಅಹಹ! ಕಾಡಿಗೆ ಕಳುಹಿ ನಾನು। ಸಹಿಸಿ ಬದುಕಲಾಪೆನೆ? ॥ ೧ ॥ ಎಳೆಯ ಬಾಲರನ್ನು ನಾನು। ಬಳಿಯೊಳಗಲಿ ರೂಢಿಯಿಲ್ಲ;॥ ಚಳಿಗಾಳಿಗಳೊಳಗೆ ತಿರುಗಿ। ಬಳಲಬಲ್ಲ ಕುವರರಲ್ಲ! ॥ ೨ ॥ ನಾನೆ ಬಂದು ನಿಮ್ಮ ಕಾರ್ಯವ। ನಾನುರಾಗದಿಂದ ಗೈವೆ; ॥ ಪ್ರಾಣಾಧಿಕಸುತರನುಳುಹು; ದೀನನಾಗಿ ನಾನು ಬೇಳ್ವೆ ॥ ೩ ॥

ಈಪ್ರಕಾರ ದಶರಥನು ಪುತ್ರಮೋಹಕ್ಕೆ ಒಳಗಾಗಿದ್ದಾನೆ. ಜಗತ್ತಿನ ಹಣೆಯು ಬರಹವೇ ಇಷ್ಟು.

ಶ್ಲೋ॥ ಕಿಂ ಮೃಷ್ಟಂ ಸುತವಚನಮ್ । ಮೃಷ್ಟತರಂ ಕಿಂ ತದೇವ ಸುತ-ವಚನಮ್ ॥ ಮೃಷ್ಟಾನ್ಮೃಷ್ಟತರಂ ಕಿಮ್ । ಶ್ರುತಿಪರಿಪಕ್ವಂ ತದೇವ ಸುತ-ವಚನಮ್ (ಸು.)

ಅ॥ ರುಚಿಕರವಾದದ್ದು ಯಾವದು? ಮಗನ ಮಾತು; ಅದಕ್ಕಿಂತ ರುಚಿಕರವು ಯಾವದು? ಅದೇ ಮಗನ ಮಾತೇ; ರುಚಿಕರವಾದವುಗಳಲ್ಲಿಲ್ಲ ಅತ್ಯಂತರುಚಿಕರವು ಯಾವದು? ಕಿವಿಗೆ ಹಿತವಾಗಿರುವಂಥ ಆ ಮಗನ ಮಾತೇ.

ಹೀಗೆ ದಶರಥನು ಪುತ್ರಾಭಿಮಾನವನ್ನು ಹಿಡಿಯುತ್ತಲೆ ವಿಶ್ವಾಮಿತ್ರರು—

ಷ॥ ಕಳುಹುವರೆ ನೃಪ ಕೇಳು ರಾಮನ । ಕಳುಹು; ಕಳುಹದೊಡೆಮ್ಮ ನೀಕ್ಷಣ । ಕಳುಹು; ಕಾವವರುಂಟು ಯಜ್ಞವನಿಳೆಯೊಳರಸುಗಳು; ॥ ಹೊಳಚಿ ನುಡಿವರಸಲ್ಲವೆಂದಾ । ನೊಳಗನರಿಯದೆ ಬಂದೆ; ನೀನಿದ । ಕಳಲಲೇತಕೆ? ಬಿರುದ ಬಿಸುಟರೆ ತೋಟಿಯೇನೆಂದ ॥ ೩ ॥ —(ತೊ.ರಾ)

ಟಿ॥ ಹೊಳಚಿ—ವಿರುದ್ಧವಾಗಿ ಎಂದರೆ ಇಲ್ಲವೆಂದು. ಒಳಗನು—ಗುಟ್ಟನ್ನು. ಬಿರುದ ಬಿಸುಟರೆ—ಕೇಳಿದವರ ಇಷ್ಟಾರ್ಥವನ್ನು ಪೂರೈಸುವನೆಂಬ ಹೆಸರನ್ನು ಬಿಟ್ಟರೆ. ತೋಟಿ—ಜಗಳ.

ಹೀಗೆಂದು ಏಳುತ್ತಲೆ ದಶರಥನ ಕುಲಗುರುಗಳಾದ ವಸಿಷ್ಠರು ಅವರನ್ನು ಸಮಾಧಾನಗೊಳಿಸಿ ತಮ್ಮ ಗೃಹಸ್ಥನಾದ ದಶರಥನಿಗೆ ಹೇಳುತ್ತಾರೆ. ಈ ವಿಶ್ವಾಮಿತ್ರರು—

ಶ್ಲೋ॥ ಅನ್ಯಮಿನ್ದ್ರಂ ಕರಿಷ್ಯಾಮಿ; ಲೋಕೋ ವಾ ಸ್ಯಾದನಿನ್ದ್ರಕಃ। (ಶ್ರೀ.ರಾ)

ಅ॥ ಬೇರೊಬ್ಬ ಇಂದ್ರನನ್ನು ಮಾಡುತ್ತೇನೆ; ಅಥವಾ ಜಗತ್ತಿನಲ್ಲಿ ಇಂದ್ರನೇ ಇಲ್ಲದಂತೆ ಮಾಡುತ್ತೇನೆ.

ಎಂದು ಪ್ರತಿಜ್ಞೆಯನ್ನು ಮಾಡಿದಂಥ ಮಹಿಮರಾಗಿದ್ದಾರೆ. ಇವರಹಿಂದೆ ರಾಮಲಕ್ಷ್ಮಣರನ್ನು ಕಳುಹಿಸುವದಕ್ಕೆ ಸಂಶಯಗೊಳ್ಳಬಾರದು. ರಾಮಲಕ್ಷ್ಮಣರು ಹುಡುಗರಾದರೇನು!

ಶ್ಲೋ॥ ಬಾಲಸ್ಯಾಪಿ; ರವೇಃ ಪಾದಾಃ ಪತನ್ತ್ಯುಪರಿ ಭೂಭೃತಾಮ್ । ತೇಜಸಾ ಸಹ ಜಾತಾನಾಂ ವಯಃ ಕುತ್ರೋಪಯುಜ್ಯತೇ ॥ —(ಸು.)

ಅ॥ ಸೂರ್ಯನು ಎಳೆಯನಾದರೂ ಅವನ ಕಿರಣಗಳು ಪರ್ವತಗಳ ತಲೆಯನ್ನು ಮುಟ್ಟುತ್ತವೆ. ತೇಜಸ್ವಿಗಳಾಗಿ ಹುಟ್ಟಿದವರಿಗೆ ವಯಸ್ಸಿನುಪಯೋಗವೆಲ್ಲಿ ಕಂಡುಬಂದಿದೆ?

ಇಷ್ಟೆಲ್ಲ ಹೇಳಿದ ಮೇಲೆ ದಶರಥನು ರಾಮಲಕ್ಷ್ಮಣರನ್ನು ಅವರ ಹಿಂದೆ ಕಳುಹಿಸಿದ್ದಾನೆ. ಶ್ರೀರಾಮಚಂದ್ರನು ಹೊರಟಾಗ ಕೋದಂಡಧಾರಣೆಮಾಡಿದ್ದನ್ನು ಕವಿ ವರ್ಣಿಸಿರುವದೆಂತೆಂದರೆ:—

ಶ್ಲೋ॥ ಸದ್ವಂಶಜಾತಃ ಸಗುಣಸ್ತು ನಮ್ರೋ । ಯಶ್ಚಾಪಿ ಶಕ್ತೌ ಬಹುಮಾರ್ಗಣೇಭ್ಯಃ ॥ ದದಾತಿ ಲಕ್ಷ್ಮಂ ತಮಹಂ ಸಮುಜ್ಝೇ । ಕೋದಣ್ಡಮಿತ್ಥಂ ಕಥಯನ್ ಬಿಭರ್ತಿ ॥ —(ಸು. ಲಾ.)

ಅ॥ (೧) ಒಳ್ಳೇ ಕುಲದಲ್ಲಿ ಹುಟ್ಟಿರೋಣ, ಗುಣದಿಂದ ಕೂಡಿರೋಣ, ವಿನಯಸಂಪನ್ನನಾಗಿರೋಣ, (ಶಕ್ತೌ) ಶ್ರೀಮಂತಿಕೆ ಇದ್ದರೆ (ಬಹುಮಾರ್ಗಣೇಭ್ಯಃ) ಸಹಸ್ರಾರು ಯಾಚ

ಕರಿಗೆ ಲಕ್ಷಾವಧಿ ರೂಪಾಯಿಗಳನ್ನು ದಾನಮಾಡೋಣ, ಇಂಥವನನ್ನು ನಾನು ಎಂದೂ ಬಿಡಲಾರೆನೆಂದು ಹೇಳುವಂತೆ ರಾಮನು ಕೋದಂಡವನ್ನು ಧಾರಣೆಮಾಡಿದ್ದಾನೆ. (ಎಂದರ್ಥವಾದರೂ ಇಲ್ಲಿ ನಾವು ಗ್ರಹಿಸಬೇಕಾದ ಅರ್ಥವೇನೆಂದರೆ:) — (೨) ಒಳ್ಳೆ ಬಿದಿರಿನಿಂದ ಸಿದ್ಧಮಾಡಿದಂಥದ್ದೂ ಹುರಿಯನ್ನು ಕಟ್ಟಿದಂಥದ್ದೂ ಬಗ್ಗಿರುವಂಥದ್ದೂ ಚೆನ್ನಾಗಿ ಗುರಿಯನ್ನಿಟ್ಟು ಲಕ್ಷಾವಧಿ ಬಾಣಗಳನ್ನು ಬಿಡತಕ್ಕದ್ದೂ ಆದ ಕೋದಂಡವೆಂಬ ಧನುಸ್ಸನ್ನು ಬಿಡಲಾರೆನೆಂದು ಹಿಡಿದುಕೊಂಡಿದ್ದಾನೆ.

ಸ್ವಲ್ಪದೂರ ಹೋಗುವದರಲ್ಲಿಯೇ ಹುಡುಗರು ಹಸಿವು ಬಾಯಾರಿಕೆಗಳಿಂದ ದಣಿದಾರೆಂದು ವಿಶ್ವಾಮಿತ್ರರು—

ಶ್ಲೋ॥ ದದೌ ಬಲಾಂ ಚಾತಿಬಲಾಂ ವಿದ್ಯೇ ದ್ವೇ ದೇವನಿರ್ಮಿತೇ ।
ಯಯೋರ್ಗ್ರಹಣಮಾತ್ರೇಣ ಕ್ಷುತ್ಕ್ಷಾಮಾದಿ ನ ಜಾಯತೇ ॥ —(ಅ. ರಾ.)

ಅ॥ ಯಾವ ಮಂತ್ರಗಳನ್ನು ಜಪಿಸಿದರೆ ಹಸಿವುಬಾಯಾರಿಕೆಗಳಾಗುವದಿಲ್ಲವೋ ಅಂಥ ದೇವನಿರ್ಮಿತಗಳಾದ ಬಲಾ, ಅತಿಬಲಾ— ಎಂಬೆರಡು ವಿದ್ಯೆಗಳನ್ನು ಅವರಿಗೆ ಹೇಳಿಕೊಟ್ಟರು.

ಸಾ॥ ಬರುತ ಶಿವಾಶ್ರಮದೊಳು ಕೋದಂಡದಿ । ಹೊರಟ ಟಣತ್ಕೃತಿಯಿಂದ ॥ ಮೊರೆದು ಮೂರ್ಛೆಗೊಂಡೆದ್ದು ತಾಟಕಿಯು । ಹರಿತಂದಳು ಭರದಿಂದ॥

ಹತ್ತಿರಕ್ಕೆ ಬಂದಾಗ ಅವಳು ಕಾಣುತ್ತಿದ್ದದ್ದೆಂತೆಂದರೆ—

ಷ॥ ಜವನ ಜನನಿಯೊ, ಮೇಣು ಲಯಭೈ । ರವನ ಭಗಿನಿಯೊ, ವಿಲಯ ಕಾಲನ । ಶಿವನ ಸಖಿಯೋ, ಸತಿಯೊ ಪ್ರಲಯದ ಚಂಡಮೃತ್ಯುವಿನ, ॥ ಇವಳ ಕೆಣಕಿದು ಜೀವದಲಿ ಬದು । ಕುವರ ಪರಬ್ರಹ್ಮಾಮರೇಂದ್ರರ । ಹರಣ ಹುಸಿಯೆಂದೆಂಬವೊಲ್ನಡೆತಂದಳಿದಿರಿನಲಿ ॥ —(ತೊ. ರಾ.)

ವಿಶ್ವಾಮಿತ್ರರ ಇಂಗಿತವನ್ನು ತಿಳಿದು ಆಗ ರಾಮಚಂದ್ರನು—

ದಿಂ॥ ಹೆಂಗುಸೆಂದೇ ತಾ ತೋಳ ಮೂಗನಾಗ । ಇಂಗಿಸಲ್ಕಾ ತಾಟಕಿಯ ನೋಡಿ ಬೇಗ ॥ ಮಂಗಳಾತ್ಮಾ ಕೊಲ್ಲಿವಳನೆಸಲು ಮೌನಿ । ಭಂಗಿಸಿದ ನೊಂದಸ್ತ್ರದಿಂ ಮಹಾಜ್ಞಾನಿ ॥

ತಾಟಕಿಯ ಮರಣವಾಗುತ್ತಲೆ ದೇವದುಂದುಭಿಯೂ ಹೂಮಳೆಯೂ ಆದವು. ರಾಮನ ಈ ಶೌರ್ಯವನ್ನು ಕುರಿತು ಕವಿ ವರ್ಣಿಸಿರುವದೆಂತೆಂದರೆ—

ಶ್ಲೋ॥ ಶೂರಃ ಸ ಏವ ಯೋ ವ್ಯೋ । ವಿಷ್ಣುಪದಸ್ಥಃ ಪ್ರಚಣ್ಡಕರಪಾಲಃ ॥
ನಕ್ಷತ್ರಲೋಪಕೃದ್ಯಃ । ಸದ್ಯೋ ದ್ವಿಜಸಙ್ಘದೈನ್ಯಭಙ್ಗಕರಃ ॥ —(ಸು. ಲಾ)

ಅ॥ (೧) ಆಕಾಶದ ಮಧ್ಯೆ ಇರುವಂಥ ಉಷ್ಣಕಿರಣವನ್ನು ಧಾರಣಮಾಡುವಂಥ (ನಕ್ಷತ್ರಲೋಪಕೃತ್ + ಯಃ) ನಕ್ಷತ್ರಗಳ ಲೋಪವನ್ನು ಮಾಡಿಬಿಡುವಂಥ (ದ್ವಿಜ)ಪಕ್ಷಿಗಳ ದೈನ್ಯವನ್ನು ತತ್ಕ್ಷಣ ದೂರಮಾಡುವಂಥ ಅವನೇ ಶೂರ ಅಥವಾ ಸೂರ್ಯ. (ಹೀಗೊಂದರ್ಥವಾದರೂ ಇಲ್ಲಿ ಗ್ರಹಿಸಬೇಕಾದದ್ದೇನೆಂದರೆ)–(೨) ಯಾವನು ವಿಷ್ಣುವಿನ ಪದಗಳ ಭಕ್ತಿಯನ್ನು ಮಾಡುತ್ತಾನೊ ಭಯಂಕರವಾದ ಕತ್ತಿಯನ್ನು ಕೈಯಲ್ಲಿ ಹಿಡಿಯುತ್ತಾನೊ (ನ + ಕ್ಷತ್ರ + ಲೋಪಕೃತ್ + ಯಃ)

ಕ್ಷತ್ರಧರ್ಮದ ಲೋಪವನ್ನು ಮಾಡುವದಿಲ್ಲವೋ ಮತ್ತು ತಕ್ಷಣದಲ್ಲಿಯೇ (ದ್ವಿಜ) ಬ್ರಾಹ್ಮಣ ಸಮುದಾಯದ ದೈನ್ಯವನ್ನು ಹೋಗಲಾಡಿಸುತ್ತಾನೋ ಅವನೇ ಶೂರ.

ಮುಂದಾದದ್ದೇನೆಂದರೆ—

✓ ಕೀ|| ದನುಜೆಯಾದ ತಾಟಕಿಯು ದೇಹದಿಂ । ಘನಶಾಪದಿ ಬಿಡುಗಡೆಯಾಂತು || ವಿನುಗುವೋರ್ವ ಯಕ್ಷಿಣಿ ತಾ ಗಗನಾಂ । ಗಣಕ್ಕೈದಿದಳಚ್ಚರಿಯಿಂತು || ೧ || ಇದರಿಂ ತುಷ್ಟಿಯು ಪೊಂದಿದ ಮುನಿ ಬಹು । ವಿಧದಸ್ತ್ರಗಳನನುಗ್ರಹಿಸೆ||ಮುದದಿ ರಾಮಲಕ್ಷ್ಮಣರೈತಂದರು । ಪದಪಿಂದಸುರರ ನಿಗ್ರಹಿಸೆ || ೨ ||

ಟಿ|| ಪದಪಿಂದ+ಅಸುರರ.

ವಿಶ್ವಾಮಿತ್ರರೊಡನೆ ಮಾಡಿದ ದೇಶಸಂಚಾರದಿಂದ ರಾಮಲಕ್ಷ್ಮಣರಿಗೆ ಬಹು ದೊಡ್ಡ ಲಾಭವಾಯಿತು. ಆ ಲಾಭದ ವಿಷಯದಲ್ಲಿ ನೀತಿಶಾಸ್ತ್ರಕಾರರು ಹೇಳಿರುವದೇನೆಂದರೆ—

ಶ್ಲೋ|| ಯೋ ನ ಸಞ್ಚರತೇ ದೇಶಾನ್ಯೋ ನ ಸೇವೇತ ಪಣ್ಡಿತಾನ್ ।
ತಸ್ಯ ಸಙ್ಕುಚಿತಾ ಬುದ್ಧಿರ್ಘೃತಬಿನ್ದುರಿವಾಮ್ಭಸಿ || —(ಸು.)

ಅ|| ಯಾರು ದೇಶಸಂಚಾರಮಾಡುವದಿಲ್ಲವೊ ಯಾರು ಪಂಡಿತರನ್ನು ಸೇವಿಸುವದಿಲ್ಲವೊ ಅವರ ಬುದ್ಧಿಯು ನೀರಿನಲ್ಲಿ ಬಿದ್ದ ತುಪ್ಪದ ತೊಟ್ಟಿನಂತೆ ಹೆತ್ತುಕೊಂಡಿರುವದು.

✓ ಸಾ|| ಸಿದ್ಧಾಶ್ರಮವನು ನೋಡುತ್ತಲ್ಲಿಯ । ಸಿದ್ಧರನೆಲ್ಲರ ಕಂಡು || ಸಿದ್ಧರಾದರಾ ಕುವರರು ಯಾಗದ । ಸಿದ್ಧಿಗೆ ಧನುವನು ಕೊಂಡು || ೧ || ದೀಕ್ಷಿತರಾಗುತೆ ಗುರುದಕ್ಷಿಣೆಯನ । ಪೇಕ್ಷಿಸಿರೆನಲಾ ರಾಮ || ಶಿಕ್ಷಿಸು ಸುಬಾಹುಮಾರೀಚರನೆಂ । ದೀಕ್ಷಿಸಿದನು ಮುನಿಭೀಮ || ೨ ||

ಅವರೆಲ್ಲಿರುವರೆನ್ನುವಾಗಲಿ—

ಷ|| ಕೆದರಿತಧ್ವರ್ಯರಾದಿಋತ್ವಿಜ । ರದುಬುತದ ಭೀತಿಯಲಿ ಗಡ್ಡದ । ಮುದುಕರಲುಗುವ ತಲೆಯು ಕೈಕಾಲುಗಳ ಕಂಪನದ || ಬೆದರಿಸಲಿ ಬಿಸುಟಾಹುತಿಗಳನು । ಗದಗದಿಸಿ ಕಂಗೆಟ್ಟು ಹಾಯ್ದುದು । ಹೊದಿಕೆದಂಡಕಮಂಡಲವ ಬಿಟ್ಟಖಿಲದೆಸೆದೆಸೆಗೆ || (ತೊ. ರಾ)

✓ ಕೀ|| ನಡುಹಗಲಲಿ ವೇದಿಗೆ ರುಧಿರಾಸ್ಥಿಯು । ಕೆಡಹುತೆ ಮೇಲಡಗಿರ್ದವರ || ಕಡುಹ ಕಂಡು ರಾಮನು ತದ್ಬಲವನು । ಕೊಡಹ ಕಳುಹೆ ಬಂತೆರಡು ಶರ ||

ಶ್ಲೋ|| ತಯೋರೇಕಸ್ತು ಮಾರೀಚಂ ಭ್ರಾಮಯನ್ ಶತಯೋಜನಮ್ । ಪಾತಯಾಮಾಸ ಜಲಧೌ ತದದ್ಭುತಮಿವಾಭವತ್ || ದ್ವಿತೀಯೋಽಗ್ನಿಮಯೋ ಬಾಣಃ ಸುಬಾಹುಮಜಯತ್ಕ್ಷಣಾತ್ || —(ಅ. ರಾ.)

ಅ|| ಅವುಗಳಲ್ಲೊಂದು (ವಾಯವ್ಯಾಸ್ತ್ರವು) ಮಾರೀಚನನ್ನು ನೂರುಯೋಜನ ಸುತ್ತಿಸಿ ಸಮುದ್ರದಲ್ಲಿ ಒಗೆದು ಬಿಟ್ಟಿತು. ಅದು ಬಹಳ ಅದ್ಭುತವಾಯಿತು. ಎರಡನೆ ಅಗ್ನೇಯಾಸ್ತ್ರವು ಸುಬಾಹುವನ್ನು ಕ್ಷಣಮಾತ್ರದಲ್ಲಿ ಜಯಿಸಿಬಿಟ್ಟಿತು.

ಆಗ ಹೂಮಳೆಯೂ ದೇವದುಂದುಭಿಗಳೂ ಆದವು. ಯಜ್ಞವು ಸಾಂಗವಾಯಿತು. ಇದರಿಂದ ಸಂತುಷ್ಟರಾದ ವಿಶ್ವಾಮಿತ್ರರು ಶ್ರೀರಾಮಚಂದ್ರನನ್ನು ಹೊಗಳುತ್ತಾರೆ—

ಭೈರವಿ—ಅಟತಾಳ

ನೀನೊಲಿಯೆ ಮುನಿವರಾರು । ಶ್ರೀಹರಿಯೇ । ನೀ ಮುನಿಯೆ ಕಾಯ್ವ ರಾರು? ॥ ಪ ॥ ದಾನವಾಂತಕ ನೀನು ನಿಜಭಕ್ತಜನಕೆಲ್ಲ। ಕಾಮಧೇನುವಿನಂತೆ ಜಗವ ಪಾಲಿಸಿದವನು ॥ ಅ. ಪ ॥ ಹರಿ ವಿಶ್ವಮಯನೆನ್ನುತ। ಪ್ರಹ್ಲಾದ । ನೆರೆ ನುತಿಸಲದ ಕೇಳುತ ॥ ತೆರಳಿ ಖಳನತಿದೂರುತ । ಕೂರಸಿಯ । ಭರದಿಂಡ ತಾ ನೆಳೆವುತಾ ॥ ಶಿರ ತರಿವೆನೆನುತಲಾ । ತರಳನನು ಭಂಗಿಸಲು । ಭರದಿ ಹಿರಣ್ಯಾ ಕನುರವ । ನಿರಿದು ಶರಣನ ಕಾಯ್ದೆ ॥ ೧ ॥ ಹರನೊಲುಮೆಯನು ಪಡೆದನು । ಬಾಹುಸಾ । ಸಿರವಂತ ಜಸಪಡೆದನು ॥ ಧುರದೊಳಪ್ರತಿಸಹಸನು । ತಾನೆನುತ। ಹಿರಿದು ಸೆಣಸಿದ ಬಾಣನು ॥ ಪುರಹರನು ನೋಡುತಿರೆ । ಸಾವಿರಕರಂಗಳನು। ತರಿತರಿದು ಎರಡುಳಿಯೆ । ವೈರಿದಲ್ಲಣನಾದೆ ॥ ೨ ॥ ಬಲ್ಲಿದರಿಗೆಲ್ಲ ನೀನೇ । ಬಲ್ಲಿದನು। ಎಲ್ಲ ಲೋಕಕ್ಕೊಡೆಯನೆ ॥ ಸಲ್ಲಲಿತಗುಣಪೂರ್ಣನೆ। ವಾಂಛಿತವ। ನೆಲ್ಲ ಕೊಡು ಸಂಪನ್ನನೆ ॥ ಫುಲ್ಲಲೋಚನನೆ ವರ । ಚೆಲ್ವ ಚೆನ್ನಿಗರಾಯ।ಬಲ್ಲು ದನು ಸಾರಿದೆನು।ಸಲಹು ಶ್ರೀರಂಗಧಾಮಾ ॥ ೩ ॥ —(ದಾ.)

ಟಿ॥ ಕೂರಸಿಯ—ಹರಿತವಾದ ಕತ್ತಿಯನ್ನು. ಬಾಹುಸಾಸಿರವಂತ—ಸಹಸ್ರಬಾಹುಗಳುಳ್ಳ ಕಾರ್ತವೀರ್ಯಾರ್ಜುನ. ಅಪ್ರತಿಸಹಸನು—ಎದುರಿಲ್ಲದ ಪರಾಕ್ರಮಿ.

ಈ ಪ್ರಕಾರ ಹೊಗಳಿ ವಿಶ್ವಾಮಿತ್ರರು ಶ್ರೀರಾಮಚಂದ್ರನನ್ನು ಕುರಿತು ಹೇಳುತ್ತಾರೆ—

ಶ್ಲೋ॥ ಸಮ್ಪೂರ್ಣಪ್ರಾಣಭೃತ್ತ್ರಾಣವಿಶ್ರಾಣನಪರಾಯಣಃ।ಯಥಾ ರ್ಥಂ ರಾಜತೇಽತ್ಯರ್ಥಂ ಸಕಲತ್ರಃ ಕಿಲಾಶ್ರಮಃ ॥ —(ಸು.ಲಾ)

ಅ॥ ಸರ್ವಪ್ರಾಣಿಗಳ ಸಂರಕ್ಷಣೆಯನ್ನು ಮಾಡುವದರಲ್ಲಿ ಏಕನಿಷ್ಠೆಯುಳ್ಳದ್ದಾಗಿ(೧)(ಸಕಲ+ತ್ರಃ) ಸಕಲವನ್ನೂ ರಕ್ಷಣೆಮಾಡುವ ಕ್ಷತ್ರಿಯತ್ವವು ಅರ್ಥಕ್ಕನುಗುಣವಾಗಿ ಶೋಭಿಸುತ್ತಿದೆಯಲ್ಲ! ಮತ್ತು (೨) (ಸ + ಕಲತ್ರ) ಪತ್ನಿಯೊಡನೆ ಕೂಡಿರುವ ಆಶ್ರಮವೂ ಅರ್ಥಕ್ಕೆ ತಕ್ಕಂತೆ ಇರುತ್ತದೆ. ಏಕೆಂದರೆ—

ಶ್ಲೋ॥ ಯಥಾ ವಾಯುಂ ಸಮಾಶ್ರಿತ್ಯ ವರ್ತನ್ತೇ ಸರ್ವಜನ್ತವಃ।ತಥಾ ಗೃಹಸ್ಥಮಾಶ್ರಿತ್ಯ ವರ್ತನ್ತೇ ಸರ್ವ ಆಶ್ರಮಾಃ ॥ —(ಮ. ಸ್ಮೃ)

ಅ॥ ಹೇಗೆ ಎಲ್ಲ ಪ್ರಾಣಿಗಳೂ ವಾಯುವನ್ನು ಆಶ್ರಯಿಸಿಕೊಂಡಿರುವವೋ ಹಾಗೆ ಎಲ್ಲ ಆಶ್ರಮಗಳೂ ಗೃಹಸ್ಥನನ್ನು ಆಶ್ರಯಿಸಿಕೊಂಡಿರುವವು.

ಆದ್ದರಿಂದ ನಿಮ್ಮ ತಂದೆಯ ಅಪೇಕ್ಷೆಯಂತೆ ಇನ್ನು ವಿವಾಹಿತರಾಗಬಹುದೆಂದರು. ಈ ಅನುಗ್ರಹವೇ ಪೀಠಿಕೆಯ 'ಗುರುಕುಲವಾಸದಿ ಶರಿರವು ಸವೆದಿರೆ' ಎಂದು ಮೊದಲಾಗಿ ರುವ ನುಡಿಯಿಂದ ಸೂಚಿತವಾಗಿರುವದು. ಇಷ್ಟರಲ್ಲಿ ಮಿಥಿಲೆಯಿಂದ ಒಬ್ಬ ದೂತನು ಲಗ್ನಪತ್ರಿಕೆ ಯನ್ನು ತಂದುಕೊಟ್ಟನು. ಅದನ್ನು ಓದಿಕೊಂಡು ವಿಶ್ವಾಮಿತ್ರರು ಹೇಳುತ್ತಾರೆ—

ಕಾನಡಾ—ಆದಿತಾಳ

ಇನಕುಲೇಶನೆ ಮನದಿ ಲಾಲಿಸೈ । ಜನಕನಗರಿಗೆ ಗಮನವಿರುವದ ॥ಪ॥ ಮಿಥಿಲಾಧಿನಾಥ। ನತಿಹರ್ಷದಿಂದ ॥ ಹಿತಗೈವ ಶಿಷ್ಯ। ತತಿಯೊಡನೆಮ್ಮ ॥ ೧ ॥ ಪುತ್ರಿಗೀಗ ಲಗ್ನ। ಚಿತ್ರವಪ್ಪುದಂತೆ ॥ ಕ್ಷತ್ರಿಯರ್ಕಳೀ । ಕತ್ರ ಸೇರ್ವರಂತೆ ॥ ೨ ॥ ಮನವು ಮಾತ್ರ ಮೆಚ್ಚಿ । ಧನವ ನೋಳ್ಪೆವಾವು ॥ ಜನಗಳೆಲ್ಲ ಮೆಚ್ಚಿ। ಧನುವನೋಳ್ಪೆ ನೀನು ॥ ೩ ॥

ಹೀಗೆಂದು ಪ್ರಯಾಣಮಾಡಿ ಹೊರಟುಬರುವಾಗ ದಾರಿಯಲ್ಲಿ ಒಂದು ಆಶ್ರಮವನ್ನು ಕಂಡು ಶ್ರೀರಾಮನು ಕೇಳುತ್ತಾನೆ—

ಶ್ಲೋ॥ ಕಸ್ಯೈತದಾಶ್ರಮಪದಂ ಭಾತಿ ಭಾಸ್ವಚ್ಛುಭಂ ಮಹತ್ । ಪತ್ರ ಪುಷ್ಪಫಲೈರ್ಯುಕ್ತಂ ಜನ್ತುಭಿಃ ಪರಿವರ್ಜಿತಮ್ ॥ —(ಅ. ರಾ)

ಅ॥ ಪ್ರಕಾಶಮಾನವಾಗಿ ಒಳ್ಳೆ ಮಂಗಳಕರವಾಗಿರುವ ಈ ಆಶ್ರಮವು ಯಾರದು? ಪತ್ರ ಪುಷ್ಪಫಲಗಳಿಂದ ಕೂಡಿದೆ; ಆದರೆ ಪ್ರಾಣಿಗಳು ಮಾತ್ರ ಇಲ್ಲ.

ಅದಕ್ಕೆ ವಿಶ್ವಾಮಿತ್ರರ ಉತ್ತರ—

✓ ಕೀ॥ ಗೌತಮರಾಶ್ರಮವಿದರೊಳು ಸುರಪನ । ನೀತಿಯೊಳವರ ಸತಿಯ ಕೆಡಿಸೆ ॥ ಧಾತನ ಸುತೆ ಶಾಪದಿ ತಪದೊಳಗೀ। ರೀತಿ ಶಿಲೆಯೊಳಿಹಳವಳೆಣಿಸೆ ॥

ಟಿ॥ ಸುರಪನು+ಅನೀತಿಯೊಳು. ಧಾತನ ಸುತೆ—ಅಹಲ್ಯೆ.

ಜ್ಞಾನಿಗಳಾದ ಗೌತಮರು ಇದನ್ನು ಮುಂದಾಗಿಯೇ ಊಹಿಸಿ ಎಚ್ಚರವಾಗಿರಬಹುದಾಗಿತ್ತಂದರೆ—

ಶ್ಲೋ॥ ಗಣಯತಿ ಗಗನೇ ಗಣಕ । ಶ್ಚನ್ದ್ರೇಣ ಸಮಾಗಮಂ ವಿಶಾಖಾಯಾಃ ॥ ವಿವಿಧಭುಜಙ್ಗಕ್ರೀಡಾ। ಸಕ್ತಾಂ ಗೃಹಿಣೀಂ ನ ಜಾನಾತಿ॥ –(ಸು)

ಜ್ಯೋತಿಷ್ಕರು ಆಕಾಶದಲ್ಲಿ ಚಂದ್ರನೊಡನೆ ವಿಶಾಖೆಗೆ ಸಮಾಗಮವಾಗುವದನ್ನು ಲೆಕ್ಕಹಾಕುತ್ತಾರೆ; ಮನೆಯ ಯಜಮಾನಿಯು ಬೇರೆ ವಿಟನಲ್ಲಿ ಆಸಕ್ತಳಾಗುವದನ್ನು ತಿಳಿಯುವದಿಲ್ಲ.

✓ ಕೀ॥ ಎಂದು ರಘುವರನ ಕೈಹಿಡಿದಾ ಮುನಿ। ಚಂದದಿ ಶಿಲೆಗೇರಿಸಲಾಗ ॥ ಅಂದಹಲ್ಯೆ ನಿಜರೂಪವ ತಾಳ್ದಾ। ನಂದದೊಳೆರಗಿರ್ದಳು ಬೇಗ ॥

ಈ ರೀತಿಯಲ್ಲಿ ರಾಮಪಾದಧೂಲಿಯಿಂದ ಅಹಲ್ಯೋದ್ಧಾರವಾದದ್ದನ್ನು ಕವಿಯು ವರ್ಣಿಸಿರುವದೆಂತೆಂದರೆ—

ಶ್ಲೋ॥ ದುಃಖೇ ಸುಖೇ ಚ ರಜ ಏವ ಬಭೂವ ಹೇತು। ಸ್ತಾದೃಗ್ವಿಧೇ ಮಹತಿ ಗೌತಮಧರ್ಮಪತ್ನ್ಯಾಃ ॥ ಯಸ್ಮಾದ್ಗುಣೇನ ರಜಸಾ ವಿಕೃತಿಂ ಗತಾ ಸಾ। ಕಾಕುತ್ಸ್ಥಪಾದರಜಸಾ ಪ್ರಕೃತಿಂ ಪ್ರಪೇದೇ ॥ —(ರಾ. ಚಂ)

ಅ॥ ಆ ಮಹಾತ್ಮಳಾದ ಅಹಲ್ಯೆಯ ವಿಷಯದಲ್ಲಿ ದುಃಖಕ್ಕೂ ಸುಖಕ್ಕೂ ರಜವೇ ಕಾರಣವಾಯಿತು. ಹೇಗೆಂದರೆ—(ರಜಸಾ) ರಜೋಗುಣದ ದೆಸೆಯಿಂದ ಅವಳು ಶಿಲಾರೂಪವನ್ನು ಪಡೆದಿದ್ದಳು; ಶ್ರೀರಾಮಚಂದ್ರನ ಪಾದದ (ರಜಸಾ) ಧೂಲಿಯಿಂದ ತನ್ನ ಪೂರ್ವಸ್ಥಿತಿಯನ್ನು ಪಡೆದಳು.

ಈ ಬಗೆಯ ಉದ್ಧಾರದ ವಿಷಯದಲ್ಲಿ ಮತ್ತೊಬ್ಬ ಕವಿ ವರ್ಣಿಸಿರುವದೇನೆಂದರೆ—

ಶ್ಲೋ॥ ವಿಷ್ಣುಪದೇ ಬಹುತಾರಕ । ಮಿತ್ಯುಚ್ಚೈರ್ಯದ್ವದನ್ತಿ ಸರ್ವ-ಜನಾಃ ॥ ತದಿದಂ ನಮೃಷಾ ಮನ್ಯೇ । ಪದಂ ತ್ವಪೇಕ್ಷ್ಯ ಸ್ಥಿತೌ ಪ್ರದೋಷಸ್ಯ ॥ —(ಸು.ಲಾ)

ಅ॥ (೧) ಆಕಾಶದ ನಡುವೆ ಅನಂತನಕ್ಷತ್ರಗಳು ತುಂಬಿರುವವೆಂದು ಎಲ್ಲರೂ ಉದ್ಘೋಷಿಸುವದನ್ನು ಸುಳ್ಳೆಂದು ಹೇಳುವದಕ್ಕಾಗುವದಿಲ್ಲ. ಆದರೆ ಅದಕ್ಕೆ ರಾತ್ರಿ ಕಾಲವು ಬೇಕಾಗುತ್ತದೆ (ಎಂದರ್ಥವಾದರೂ ಇಲ್ಲಿ ಗ್ರಹಿಸಬೇಕಾದ್ದೇನೆಂದರೆ)– (೨)ಪರಮಾತ್ಮನ ಚರಣವು ಅನೇಕರನ್ನುದ್ಧಾರಮಾಡುವದೆಂದು ಎಲ್ಲರೂ ಹೇಳುತ್ತಾರೆ. ಆದರೆ ಅದಕ್ಕೆ ದೊಡ್ಡ ಪಾತಕವು ಮಾತ್ರ ಬೇಕಾಗುತ್ತದೆ.

ಅಹಲ್ಯೋದ್ಧಾರದಿಂದ ಶ್ರೀರಾಮಚಂದ್ರನ ಕೀರ್ತಿ ಬೆಳೆದದ್ದೆಂತೆಂದರೆ—

ವೃ॥ ಕುಲದೊಳ್ಪುಟ್ಟಿದ ಬಾಲನೋರ್ವನಡಿಯಿಂ ಸೋಂಕುತ್ತೆ ಪೆಣ್ಮಾಡಿದಂ। ಶಿಲೆಯೊಂದಂ; ಕುಲನಾಥನಾದ ದಿನಪಂ ಸರ್ವಾಶ್ಮಸಂಜಾತಮಂ ॥ ತುಳಿಪಂ ಪಾದಸಹಸ್ರದಿಂದನುದಿನಂ ಪೆಣ್ಮಾಳ್ಪುದಸಿಲ್ಲಾವುದಂ; ಕುಲದಿಂದೇಂ? ನಿಜಶಕ್ತಿಯಿಂದೆ ನೆಗಳ್ವರ್ ಶ್ರೀಚೆಲ್ವನಾರಾಯಣ ॥ —(ಶ್ರೀ.ಚೆ.ಶ)

ಟೀ॥ ಸರ್ವಾಶ್ಮಸಂಜಾತಮಂ—ಎಲ್ಲ ಕಲ್ಲುಗಳ ಸಮೂಹವನ್ನು. ಪಾದಸಹಸ್ರದಿಂ—ಸಾವಿರಕಾಲುಗಳಿಂದ (ಕಿರಣಗಳಿಂದ.) ನೆಗಳ್ವರ್—ಮಾಡುವರು.

ಕಂ॥ ಆರೀ ಪರಿವರ್ತನಸಂ। ಸಾರದೊಳಳಿದುದಿಸದಿರ್ಪರುದಿಸಿದುದರ್ಕೀ ॥ ಧಾರಿಣಿಯೊಳ್ನಿಜವಂಶಕೆ। ಗೌರವಮಂ ತಂದೊಡಾತನೇ ಉದಿಸಿದವಂ॥—(ಭ.ನೀ)

ಟೀ॥ ಪರಿವರ್ತನ ಸಂಸಾರದೊಳ್—ಹುಟ್ಟುಸಾವುಗಳಲ್ಲಿ ಸುತ್ತುತ್ತಿರುವ ಹೆಂಡತಿಮಕ್ಕಳ ನಡುವೆ.

ಆಗ ಅಹಲ್ಯೆ ರಾಮನನ್ನು ಸ್ತೋತ್ರಮಾಡಿದ್ದೆಂತೆಂದರೆ—

✓ ಚೂ॥ ದೇವಾದಿದೇವ, ಮನುಜಸ್ವಭಾವ, ಭಾವಿಸಿದ ಭಕ್ತರನು ಕಾವ, ಭಾವಿಕಜನಾಳಿಗಳ ಜೀವ, ಸೇವಕಜನಾವನಪ್ರಭಾವ, ದುರಿತವನದಾವ, ಪಾವ ಸತೆಯಿಾವ। ನಿನ್ನಂಗುಟದಿ ಪುಟ್ಟಿದುದರಿಂದ ಗಂಗೆ ಪವಿತ್ರ,। ನಿನ್ನ ಚರಿತ್ರಗಳೆಲ್ಲ ಜಗಕೆ ಚಿತ್ರ, ನಿನ್ನ ಸೌಂದರ್ಯಸಂಭ್ರಮವೂ ವಿಚಿತ್ರ, ನುತಿಪಾತ್ರ, ಶುಭಗಾತ್ರ, ದಶರಥನ ಪುತ್ರ, ದುರುಳರಿಗಮಿತ್ರ, ಶರಣರಿಗೆ ಮಿತ್ರ, ಸುಕ್ಷತ್ರ, । ನಿನ್ನ ನಾಮದಿ ಶಿವನು ಧನ್ಯ, ನಿನ್ನನಾಮದಿ ವಾಲ್ಮೀಕಿ ಮಾನ್ಯ, ನಿನ್ನಶರಣೆಂದವನು ಗಣ್ಯ, ನಿನ್ನ ನಾಮವೆ ನೀಡುವದು ಸೌಜನ್ಯ। ನೀನು ನಿರ್ದೇಹನಾಗಿ ಸದೇಹ, ನೀನು ನಿರ್ಗುಣನಾಗಿ ಸಗುಣ, ನೀನು ನಿರಾಕಾರನಾಗಿ ಸಾಕಾರ, ರಘುವೀರ। ನೀನೆ ಜಗ, ನೀನೆಯುಗ, ನೀನೆ ಸರ್ವವಿದೆಲ್ಲ, ನೀನೇ ತ್ರಿಮೂರ್ತಿರೂಪ, ಭೂಪ, ರಘುವಂಶದೀಪ, ಗುಣಗಣಕಲಾಪ, ಚಿದ್ರೂಪ ॥

✓ ಸಾ॥ ರಾಮನ ನುತಿಸುತ ಪತಿಸನ್ನಿಧಿಗಾ। ಕಾಮಿಸಿಯಹಲ್ಯೆ ಪೋಗೆ ॥ ರಾಮನೊಡನೆ ಮುನಿ ಬಂದನು ಗಂಗೆಗೆ। ಪ್ರೇಮದಿ ದಾರಿಯು ಸಾಗೆ ॥

**ಅಲ್ಲಿ ನಾವಿಕನು ಶ್ರೀರಾಮಚಂದ್ರನನ್ನು ಕುರಿತು—**

ಶ್ಲೋ॥ ಕ್ಷಾಲಯಾಮಿ ತವ ಪಾದಪಙ್ಕಜಮ್। ನಾಥ, ದಾರುದೃಷ-ದೋಃ ಕಿಮನ್ತರಮ್। ಮಾನುಷೀಕರಣಚೂರ್ಣಮಸ್ತಿ ತೇ । ಪಾದಯೋರಿತಿ ಕಥಾ ಪ್ರಥೀಯಸೀ ॥ —(ಅ.ರಾ)

**ಅ॥ ಹೆ, ಒಡೆಯ, ನಿನ್ನ ಪಾದಕಮಲವನ್ನು ನಾನು ತೊಳೆಯುತ್ತೇನೆ. ಕಲ್ಲಿಗೂ ಮರಕ್ಕೂ ಏನು ಭೇದ? ನಿನ್ನ ಕಾಲಿನಲ್ಲಿ ಮನುಷ್ಯರನ್ನು ಮಾಡುವ ಧೂಳಿ ಇದೆಯೆಂದು ಬಹಳ ಹೆಸರಾಗಿದೆ.**

**ಹೀಗೆಂದು ಅವನು ರಾಮನ ಪಾದಗಳನ್ನು ತೊಳೆದು ನದಿಯನ್ನು ದಾಟಿಸಿದನು. ಅವರು ಮುಂದೆ ಸಾಗಿ ಮಿಥಿಲಾಪಟ್ಟಣದ ಊರ ಹೊರಕ್ಕೆ ಬರುವದರೊಳಗೇ ಅವರ ಆಗಮನವೃತ್ತಾಂತ ವನ್ನು ತಿಳಿದು ಜನಕನು ಬಂದು ಅವರನ್ನು ಸತ್ಕರಿಸಿ—**

✓ ಕೀ॥ ಮುನಿವರ, ಇವರಾರೆನಲವರಿರವನು । ಧನುವನವರು ನೋಳ್ಪಿಚ್ಛೆ ಯನು ॥ ಮುನಿ ಸೂಚಿಸೆ ಸತ್ಕರಿಸುತ್ತೊಯ್ದನು । ಜನಕನು ದಶರಥ ತನುಜರನು ॥

**ರಾಮಲಕ್ಷ್ಮಣರು ಬರುವ ಸುದ್ದಿಯನ್ನು ಕೇಳಿ ಊರಿನ ಸ್ತ್ರೀಯರೆಲ್ಲರೂ ಮಾತಾಡಿಕೊಳ್ಳು ತ್ತಾರೆ—**

**ದರ್ಬಾರ್—ರೂಪಕ**

ಬನ್ನಿರೆಲ್ಲ ನೋಡಲೀಗ । ಕಣ್ಣಹಬ್ಬವ ಮಾಡೆ ಬೇಗ ॥ ಪ ॥ ಮುನ್ನ ಮಾಡಿದ ನಮ್ಮ ಪುಣ್ಯ। ಹಣ್ಣಾಗೀ ಬಣ್ಣ ಬಂದಿದೆ ॥ಅ. ಪ॥ ಪ್ರಥಿತದಶರಥಾತ್ಮಜ ರಂತೆ । ಕ್ಷಿತಿಯೊಳಿಲ್ಲ ಚತುರರಂತೆ ॥ ಮತಿವಂತರ ಮಾನ್ಯರಂತೆ । ಚ್ಯುತಿ ಇಲ್ಲದ ರೂಪವಂತೆ ॥ ೧ ॥ ಮುನಿಯ ಮಖವ ಕಾಯ್ದರಂತೆ । ದನುಜರನ್ನು ಹೊಯ್ದ ರಂತೆ ॥ ವಿನಯನಯವಿಭೂಷರಂತೆ । ಮನುಜವೇಷದ ದೇವರಂತೆ ॥ ೨ ॥ ಗೌತ ಮನಾ ಸತಿಯ ಶಾಪವ । ಪ್ರೀತಿಯಿಂದ ಕಳೆದರಂತೆ ॥ ಸೀತಾಸೌಂದರ್ಯದ ವಿ। ಖ್ಯಾತಿಗೇಳಿ ಬಂದಿಹರಂತೆ ॥ ೩ ॥ ಜನಕನು ಕರೆತರುವನಂತೆ। ಜನರೊಳಗಗ್ರ ಗಣ್ಯರಂತೆ ॥ ಜನಪದಿವ್ಯತೇಜರಂತೆ । ಧನುವನೋಡಲಿಚ್ಛಿಪರಂತೆ ॥ ೪ ॥

**ಜನಕನು ರಾಮಲಕ್ಷ್ಮಣರನ್ನು ಉತ್ಸವಪೂರ್ವಕವಾಗಿ ತನ್ನ ಅರಮನೆಗೆ ಕರೆದುಕೊಂಡು ಬಂದನು. ಜನಕನ ಅರಮನೆಯು ಹೇಗಿತ್ತೆಂದರೆ—**

ಷ॥ ಭೋಗದಾಗರವೊ, ಸೊಬಗಿನ ಸೀಮೆಯೋ, ಸುಖದ । ಸಾಗರವೊ, ಸಿರಿಯ ನೆಲೆವನೆಯೊ, ಮಿಗೆ ಸೌಭಾಗ್ಯ । ದಾಗಿನೊಬ್ಬುಳಿಯೊ, ಚದುರಿನ ಬೀಡೊ, ಮನ್ಮಥನ ಗರುಡಿಯೋ, ಸುದತಿರತ್ನ ॥ ಪೂಗ ತೀವಿದ ಕರಂಡಗೆಯೊ, ವಾಗ್ದೇವಿಯನು । ರಾಗದಾಶ್ರಯವೊ, ಭಾವಿಸಿ ಪೊಗಳ್ವಡತಿ ಚೋದ್ಯ। ಮಾಗಿ ಪೆಂಪೇರಿ ಸೊಂಪಂ ಬೀರುತಾ ರಾಜಸದನ ಕಣ್ಗೆಸೆದಿರ್ದುದು ॥ —(ಮ.ಬ ಚ)

ಟಿ॥ ಒಬ್ಬುಳಿ—ರಾಶಿ. ಪೂಗ—ಸಮೂಹ. ಕರಂಡಗೆ—ಭರಣಿ.

ಅಲ್ಲಿಂದ ವಿಶ್ವಾಮಿತ್ರರು ತಮ್ಮ ಶಿಷ್ಯರೊಡನೆ ವಿವಾಹಮಂಟಪಕ್ಕೆ ಬಂದಾಗ ಅದು ಹೇಗಿತ್ತೆಂದರೆ—

ರ॥ ಬಹುಭೋಗಭಾಗ್ಯಗಳ ಮನೆ । ವೈ। ವಾಹಮಂಟಪರಚನೆ ॥ ಪ ॥ ತೀವಿದ ಹೊಂಗೆಲಸದ ಲೋವೆಗಳು । ತಾವು ತಾವು ಹೊಳೆಯುವ ಭಾವಗಳು। ಹೂವಿನರಳ ಬಗೆಬಗೆ ಹರಹುಗಳು। ಆ ವಿವಿಧದ ರತ್ನದ ನೆರಹುಗಳು। ಕುಂಕುಮ ಕರ್ದಮದಿಂ ಕಾರಣೆಯು। ಬಿಂಕದಿಂದ ಸಾದಿನ ಸಾರಣೆಯು। ನೆರೆ ಕರ್ಪೂರದ ರಂಗೋಲಿಗಳ। ಪರಿಮಳ ಪನ್ನೀರಿನ ಚೆಳೆಯುಗಳ । ದಿವ್ಯವಸ್ತ್ರಗಳ ಮೇಲ್ಕಟ್ಟುಗಳ। ಭವ್ಯಲಾಮಜದ ಬಹುದಡ್ಡಿಗಳ। ಶ್ರೀಗಂಧದ ಕಂಬದ ಸಾಲುಗಳ। ಭೋಗವತಿಯ ಮರೆಸುವ ಶಾಲೆಗಳ। ಕನ್ನಡಿಗಳ ತೋರಣವದು ತೋರೆ। ಚೆನ್ನಹ ಮುತ್ತಿನ ಸೂಸಕ ವಿಸಾರೆ। ನೇಪಾಳದ ಚಮರಿಯದಾಳಿಗಳ। ಭೂಪಾಲರನೆರವಿಯ ಧೂಲಿಗಳ। ಹೊಳೆವ ಭಿತ್ತಿಯೊಳಗಿಹ ಭಂಜಿಕೆಗಳ। ಝುಳವ ಕಳೆಯುತಿಹ ಬೀಸಣಿಗೆಗಳ । ಮೆರೆವ ಕರ್ಪೂರದ ತವಲಾಯಿಗಳ । ಪರಿಮಳಗಂಧದ ರಂಜಣಿಗೆಗಳ । ಮಿಗೆ ಪನ್ನೀರ್ಪುಕ್ಕಲೆಯ ಶ್ರೇಣಿಗಳ । ಬಗೆಯಲು ಕಾಂಚನಮಯದ ಡೋಣಿಗಳ । ವಿವಿಧವಾದ್ಯಕೋವಿದರಪತತಿಗಳ । ಕವಿದಿಹ ನಟಜನರ ಗಥಾವಣೆಗಳ । ತೀವಿದ ಗಾಯಕಮಲ್ಲಚಿತ್ರಕರ। ಕೋವಿದಕರ್ಷಕವಾಮನಮೂಕರ। ವಿವಿಧರಾದ ವರ್ಣಾಶ್ರಮಜನಗಳ । ಅವಿರಳವಾಗಿಯೆ ನೆರೆದಿಹ ಮುನಿಗಳ । ಧರೆಯ ರಾಜರೆಲ್ಲರು ನೆರೆದಿರಲು । ಮೆರೆದುದಿದಕೆ ಸರಿ ಇನ್ನಿಲ್ಲೆನಲು ॥

ಟಿ॥ ಹರವು—ಹರಡಿರುವದು. ನೆರಹು—ಸೇರಿಕೆ. ದಾಳಿ—ಗುಂಪು. ತವಲ್ಗಾಯಿ—ತಟ್ಟೆ. ರಂಜಣಿಗೆ—ಕಡಾಯಿ. ಕರ್ಷಕ—ವ್ಯವಸಾಯಗಾರ.

ಹೀಗೆ ಎಲ್ಲರೂ ಸೇರಿರುವಾಗ—

ಶ್ಲೋ॥ ಏವಂ ಬ್ರುವತಿ ಮೌನೀಶ, ಆಗತಾಶ್ಚಾಪವಾಹಕಾಃ । ಚಾಪಂ ಗೃಹೀತ್ವಾ ಬಲಿನಃ ಪಞ್ಚಸಾಹಸ್ರಸಙ್ಖ್ಯಕಾಃ ॥ —(ಅ.ರಾ.)

ಅ॥ ಧನುಸ್ಸನ್ನು ತರಿಸೆಂದು ವಿಶ್ವಾಮಿತ್ರರು ಅನ್ನುತ್ತಿರುವಾಗ ಒಳ್ಳೆ ಬಲಿಷ್ಠರಾದ ಐದು ಸಹಸ್ರ ಜನರು ಆ ಧನುಸ್ಸನ್ನು ಹೊತ್ತುಕೊಂಡು ಬಂದು ಇಟ್ಟರು.

ರಾಜರಿಗೆಲ್ಲ ಅದನ್ನು ತೋರಿಸಿ ಮಂತ್ರಿ ಹೇಳುತ್ತಾನೆ—

ಕೀ॥ ಬಾಲತ್ವದೊಳೀ ಸೀತಾದೇವಿಗೆ । ಲೀಲೆಯ ಕುದುರೆಯಿದಾಗಿರಲು ॥ ಲೋಲಲೋಚನೆಯ ಲಗ್ನಕೆ ಪಣವೀ । ವೇಳೆಯೊಳಾಯ್ತಿದು ಭಾವಿಸಲು ॥

ಶ್ಲೋ॥ ಗುಣಯತಿ ಗಿರಿಶಧನುರ್ದ್ರಾಗ್ । ಗ್ಯೋsಸೌ ಜಗತೀಹ ಜನಕಜಾಮಾತಾ । ಯೋ ಯೋ ವಿಘಟತಿ ಸ ತಥಾ। ತೇಷಾಂ ತೇಷಾಂ ಹಿ ಜನಕಜಾಮಾತಾ ॥ —(ರಾ.ಚ.ಚಂ.)

ಅ॥ ಈ ಜಗತ್ತಿನಲ್ಲಿ ಈಗ ಯಾವನು ಈ ಶಿವಧನುಸ್ಸಿಗೆ ಹುರಿಯನ್ನು ಕಟ್ಟುತ್ತಾನೋ ಅವನು ಜನಕನ ಅಳಿಯನಾಗುವನು. ಯಾರು ಯಾರು ಹೀಗೆ ಮಾಡುವದಿಲ್ಲವೋ ಅವರಿಗೆ ಸೀತಾದೇವಿಯು ತಾಯಿ.

ದಿಂ॥ ಭೂಪರೆಲ್ಲಾ ಬಂದಾಗ ಕೈಯ ನೀಡಿ । ಚಾಪವನ್ನೆತ್ತಲ್ಕಾಗದೆಂದು ಬಾಡಿ ॥ ತಾಪಗೊಂಡೆಲ್ಲರ್ ಬಹಳ ಲಜ್ಜೆಗೂಡಿ । ಪಾಪಿಯಿಾ ಬಿಲ್ಲಿಂದಪರ್ಯಯತ್ನ ಮಾಡಿ ॥

ಈ ಸಮಯದಲ್ಲಿ ರಾವಣನೂ ಬಂದಿದ್ದಾನೆ. ಅವನಿಗೂ ಜನಕನಿಗೂ ಮಾತು ನಡೆಯುತ್ತಿದೆ—

ಶ್ಲೋ॥ (ರಾ) ಅಃ! ಕಸ್ಮಾನ್ಮಿಲಿತಾ ಅಮೀ ನರಪತೇ? (ಜ) ಲಙ್ಕೇಶ್ವರ, ಶ್ರೂಯತಾಮ್ । ಕನ್ಯಾಯಾಃ ಕರಪೀಡನಾಯ ವಿಹಿತಂ ಜೇತುಂ ಪಣಂ ಸಾಮ್ಪ್ರತಮ್॥ (ರಾ) ಆಹೂತಾಃ ಸ್ವಯಮೇವ ಕಿನ್ನು ಮಿಲಿತಾಃ? (ಜ) ಪತ್ರೈಃ ಸಮಾಮನ್ತ್ರಿತಾಃ । (ರಾ) ಕಸ್ಮಾದತ್ರ ಮಹೋತ್ಸವೇ ಜಡಮತೇ ನಾಸ್ಮಾಕಮಾಮನ್ತ್ರಣಮ್? ॥ ೧ ॥ ನ ವಯಂ ಕಿನ್ನು ರಾಜೇನ್ದ್ರಾ ನೃಪ ವಾ ಬ್ರಹ್ಮಶಾಲಿನಃ । ಕಿಂ ನ ವಾ ಸುನ್ದರಾಕಾರಾಃ ಕಸ್ಮಾನ್ನಾಮನ್ತ್ರಣಂ ವದ? ॥ ೨ ॥ —(ಸು.)

ಅ॥ (ರಾ) ಜನಕನೆ, ಇವರೆಲ್ಲ ಇಲ್ಲಿ ಏಕೆ ಸೇರಿದ್ದಾರೆ? (ಜ) ರಾವಣನೆ, ಕೇಳು; ಪಣವನ್ನು ಗೆದ್ದು ಕನ್ಯೆಯ ಪಾಣಿಗ್ರಹಣವನ್ನು ಮಾಡುವದಕ್ಕೆ. (ರಾ) ಅವರೇನು ತಾವಾಗಿ ಬಂದರೋ? ಕರೆಸಿಕೊಂಡು ಬಂದರೊ? (ಜ) ಪತ್ರದ ಮೂಲಕ ಕರೆಸಿಕೊಂಡು ಬಂದರು. (ರಾ) ಎಲೋ ದಡ್ಡ, ಈ ಮಹೋತ್ಸವದಲ್ಲಿ ನಮಗೇಕೆ ಆಮಂತ್ರಣವಿಲ್ಲ? ನಾವೇನು ರಾಜಶ್ರೇಷ್ಠರಲ್ಲವೆ? ನಾವೇನು ಬ್ರಹ್ಮಜ್ಞಾನಿಗಳಲ್ಲವೆ? ಅಥವಾ ಸುಂದರಾಕಾರರಲ್ಲವೆ? ನಮಗೇಕೆ ಆಮಂತ್ರಣವಿಲ್ಲ?

ಅಲ್ಲಿಂದ ಮುಂದೆ ರಾವಣನಿಗೆ ಪುರೋಹಿತರಾದ ಶತಾನಂದರೊಡನೆ ಉತ್ತರ ಪ್ರತ್ಯುತ್ತರಗಳು ನಡೆಯುತ್ತವೆ.

ಶ್ಲೋ॥ (ಶ) ಮಧ್ಯೇ ವಾರಿಧಿವಾಸಿನೋ ನ ವಿಷಯಾ ಯೂಯಂ ನೃಣಾಂ ನಃ ಪರಮ್ । ನಿಧ್ಯಾತಾ ಮನಸಾ ನವೇತಿ ನಿಪುಣಂ ಜ್ಞಾತುಂ ಭವನ್ತಃ ಕ್ಷಮಾಃ ॥ (ರಾ) ಸತ್ಯಂ ಸೌಮ್ಯ, ಸಮಾಗತೋಽಸ್ಮ್ಯಹಮತೋ ನಾಮನ್ತ್ರಿತೋಽಪಿ ಸ್ವಯಮ್ । ತತ್ಸಾದ್ಭೃಗ್ಗಮನಂ ಕನೀಯಸಿ ಪುನಃ ಸ್ಯಾಜ್ಜ್ಯಾಯಸಾಂ ಭೂಷಣಮ್ ॥ —(ಸು.)

ಅ॥ (ಶ) ನೀವು ಸಮುದ್ರದ ನಡುವೆ ಇರುವವರು; ಮನುಷ್ಯರಾದ ನಮಗೆ ಕಾಣಬರುವವರಲ್ಲ. ನಾವದನ್ನು ಯೋಚಿಸಿದೆವೋ ಇಲ್ಲವೋ ಎಂಬುದನ್ನು ಚೆನ್ನಾಗಿ ತಿಳಿಯುವದಕ್ಕೆ ನೀವೇ ಸಮರ್ಥರು. (ರಾ) ಸಾಧುಮನುಷ್ಯನೆ, ಅದು ನಿಜ. ಆದ್ದರಿಂದಲೇ ನಾನು ಕರೆಸಿಕೊಳ್ಳದೆ ಬಂದಿದ್ದೇನೆ. ಚಿಕ್ಕವರ ಮನೆಗೆ ದೊಡ್ಡವರು ಹೀಗೆ ಬರುವದು ಅಲಂಕಾರಪ್ರಾಯವಾದದ್ದು.

ಮತ್ತು—

ಶ್ಲೋ॥ (ರಾ) ಮಕರಾಲಯವಾಸ್ತವ್ಯೈಃ ಸ ಧನುಃ ಕಿಮಧಃಕೃತಮ್? । (ಶ) ಕನ್ಯಾಪ್ರಸಙ್ಗಮಾಸಾದ್ಯ ತುಲಾಯಾಂ ಕಿಲ ದೂರತಃ ॥ —(ಸು.)

ಅ|| (ರಾ) ನಾವು ಮಕರಾಲಯ (ಸಮುದ್ರ)ದಲ್ಲಿರುವವರಾದ್ದರಿಂದ ಧನುಸ್ಸನ್ನು ಕೆಳಗೆ ಮಾಡಿದವರಾಗಲಿಲ್ಲವೆ? (ರಾಶಿಗಳಲ್ಲಿ ಧನುಸ್ಸು ಮಕರದ ಹಿಂದೆ ಇರುವದೆಂದಭಿಪ್ರಾಯ). (ಶ) ಕನ್ಯಾಪ್ರಸಂಗವಿರುವಾಗ ತುಲಾವಿಚಾರವು ದೂರವಾಯಿತು. (ರಾಶಿಗಳಲ್ಲಿ ಕನ್ಯಾ ಆದ ಮೇಲೆ ತುಲಾ.)

ಆಗ ಧನುಸ್ಸನ್ನು ನೋಡಿ ರಾವಣನು ಯೋಚಿಸಿದ್ದೇನೆಂದರೆ—

ಶ್ಲೋ|| ಚಣ್ಡೀಶಚಣ್ಡಭುಜದಣ್ಡನಿಪೀಡನೇನ । ಕೋದಣ್ಡಕಾಣ್ಡಮಖಿಲಂ ಶಿಥಿಲಂ ಯದಾಸ ॥ ತನ್ಮೂಢವಿಪ್ರಶಿಶುಕರ್ಷಣಜರ್ಜರಾಙ್ಗಮ್ । ಕ್ರಷ್ಟುಂ ದಶಾನನಭುಜಾಸ್ತ್ವಿಮೇ ತ್ರಪನ್ತೇ ॥ —(ಸು.)

ಅ|| ಈಶ್ವರನ ಬಲವಾದ ಹೆಗಲಿನಲ್ಲಿ ಸವೆದು ಧನುಸ್ಸಿನ ದಂಡವೆಲ್ಲ ಹುರುಳಿಲ್ಲದಂತಾಗಿಯೂ ಮತ್ತು ಆ ಮೂಢನಾದ ಬ್ರಾಹ್ಮಣರ ಹುಡುಗನು (ಪರಶುರಾಮನು) ಬಾಲ್ಯದಲ್ಲಿ ಎಳೆದಾಡಿದ್ದರಿಂದ ಟೊಳ್ಳಾಗಿಯೂ ಹೋಗಿದೆ. ಆದ್ದರಿಂದ ಇದನ್ನು ಬಗ್ಗಿಸುವದಕ್ಕೆ ಈ ರಾವಣನ ಭುಜಗಳು ನಾಚಿಕೊಳ್ಳುತ್ತವೆ.

ಆದರೂ ಅವನು ಶತಾನಂದರೊಡನೆ ಮತ್ತೊಮ್ಮೆ ಮಾತುನಡೆಸಿದ್ದೇನೆಂದರೆ—

ಶ್ಲೋ|| (ರಾ) ಏಷ ಹ್ವಯ ಕನ್ಯಕಾಂ ದ್ರುತತರಂ ಮಾಹೇಶ್ವರಂ ಕಾರ್ಮುಕಮ್ । ಕನ್ಯಾಯಾಃ ಕರಪಲ್ಲವಂ ಚ ಯುಗಪದ್ಗೃಹ್ಣಾತ್ಯಯಂ ರಾವಣಃ ॥ (ಶ) ಕನ್ಯಾಕಾರ್ಮುಕಯೋಃ ಕ್ವಚಿದ್ಧಿ ಯುಗಪದ್ಗ್ರಾಹೋ ನ ದೃಷ್ಟಃ ಶ್ರುತಃ ।(ರಾ) ತರ್ಹ್ಯಸ್ತ್ವಂ ಕ್ರಮ ಏವ ಗೌತಮಶಿಶೋ (ಶ) ನೋಽತ್ರೇಷ್ಯತೇ ವಿಕ್ರಮಃ ॥ —(ಸು.)

ಅ|| (ರಾ) ಬೇಗ ಕನ್ಯೆಯನ್ನು ಕರೆದುಕೊಂಡು ಬಾ. ಈ ರಾವಣನು ಕನ್ಯೆಯ ಪಾಣಿಗ್ರಹಣವನ್ನೂ ಶಿವಧನುಸ್ಸಿನ ಗ್ರಹಣವನ್ನೂ ಏಕಕಾಲದಲ್ಲಿ ಮಾಡುತ್ತಾನೆ. (ಶ) ಕನ್ಯೆಯನ್ನೂ ಮತ್ತು ಧನುಸ್ಸನ್ನೂ ಏಕಕಾಲದಲ್ಲಿ ಹಿಡಿದದ್ದು ಎಲ್ಲಿಯೂ ಕಂಡೂ ಇಲ್ಲ; ಕೇಳಿಯೂ ಇಲ್ಲ. (ರಾ) ಗೌತಮರ ಮಗನೇ, ಹಾಗಾದರೆ ಕ್ರಮವೇ ಆಗಲಿ. (ಶ) ಇಲ್ಲ; ಇಲ್ಲಿ ಬೇಕಾದದ್ದು ವಿಕ್ರಮ.

ಆಗ ರಾವಣನು ಧನುಸ್ಸನ್ನೆತ್ತುವದಕ್ಕೆ ಹೊರಟದ್ದನ್ನು ನೋಡಿ ಜನಕನು ಯೋಚಿಸುತ್ತಾನೆ—

ಷ|| ಖಲನಿವನು ಪೂರ್ವದಲಿ ರಜತಾ । ಚಲವನಪಗತಭೀತಿಯಲಿ ಕರ । ತಲದಲಗಜೆಯ ಶಿವನು ಸಹಿತೆತ್ತಿದನು ಜಗವರಿಯೆ; ॥ ಅಳುಕನಿರದೀಧನುವಿವಂಗು । ಜ್ಜ್ವಳನಿವಿಾಶ್ವರವಂಶಮುಕುರಕೆ ಕಿಲುಬುದೋರಿತೆಲೇ ! ಮಹಾದೇವೆನುತ ಚಿಂತಿಸಿದ ॥ —(ತೊ. ರಾ.)

ಟಿ|| ರಜತಾಚಲ—ಕೈಲಾಸಪರ್ವತ. ಮುಕುರ—ಕನ್ನಡಿ.

ರಾವಣನು ಹೆಜ್ಜೆಯನ್ನು ಮುಂದಿಡುತ್ತಲೆ—

ಷ|| ಒದೆದುಕೊಂಡುದು ಜಲಧಿ; ಗರಳವ । ನುದುಗರಿಸಿದನು ಫಣಿಪ; ಕೂರ್ಮನ । ಹೃದಯ ಬಿಚ್ಚಿತು; ಬಿಗುಹು ಸಡಿಲಿದುದಾ ಕುಲಾದ್ರಿಗಳ; ॥ ಅದು

ರಿತಂಬರವಂಬುಜಾಂಡದ। ತುದಿ ತುಟಾರಿಸಿತೀ ದಶಾಸ್ಯನ। ಪದವಿಘಾತಿಗೆ ಪೂತು ಮುಝು! ಭಾಪೆಂದುದಮರಗಣ ॥ —(ತೊ. ರಾ.)

ಟಿ॥ ಉದುಗರಿಸಿದನು—ವಾಂತಿಮಾಡಿದನು. ತುಟಾರಿಸಿತು—ನಡುಗಿತು.

ಆಗ ರಾವಣನು—

ಷ॥ ಶಿರಗಳೀರೈದರಲಿ, ಜುಂಜುರು। ಗುರುಳುಗಡ್ಡದ, ಕೋರೆದಾಡೆಯು,। ಸುರಿವ ಕೆಂಗರಿಗಣ್ಣನೋಟದ, ಮೆಯ್ಯ ಕಾಳಿಮದ ॥ ಪರಿ ವಿಡಾಯಿಸಲಸ್ತ್ರ ವಿದ್ಯಾಪರಿಣತನು ತಾನೆನುತಲಾ ಪುರ। ಹರನ ಧನುವಿರೆ ಕರವ ನೀಡಿದನುಬ್ಬು ಗೊಬ್ಬಿನಲಿ ॥ —(ರಾ.ಕ.ಕು.)

ಟಿ॥ ಕಾಳಿಮದ—ಕಪ್ಪು ಬಣ್ಣದ. ವಿಡಾಯಿಸಲು—ಒಪ್ಪುತ್ತಿರಲು.

ಷ॥ ಉಳಿದುದೈ ಯುವಮಾತ್ರವಾ ಬಿಲು; । ಸೆಲೆಯು ತಿರುವಿನ ಕೂಟ ಮೇಲಕೆ। ಸಿಲುಕದಾದುದು; ಕೊಂಡ ಗಮನಕೆ ಪರಮಪರಿತೋಷ ॥ ಫಲಿಸ ಲರಿಯದ ಕಾರ್ಯದಲಿ ಹಂ। ಬಲಿಸಿ ಕೆಡುವವನಂತೆ ಕೆಡೆದನು। ಬಿಲುಸಹಿತ ಬರ್ಹಿರ್ಮುಖರ ವನಿತೆಯರು ಗಹಗಹಿಸೆ ॥ —(ತೊ.ರಾ.)

ಟಿ॥ ಯುವ—ಜವೆಗೋಧಿ. ಕೊಂಡ ಗಮನಕೆ—ಅಲ್ಲಿಗೆ ಹೋದದ್ದಕ್ಕೆ. ಬರ್ಹಿರ್ಮುಖರ—ದೇವತೆಗಳ.

ರಾವಣನ ಆ ಸ್ಥಿತಿಯನ್ನು ನೋಡಿ ಅಂತಃಪುರಸ್ತ್ರೀಯರು ಆಡಿಕೊಂಡದ್ದೇನೆಂದರೆ—

ಶ್ಲೋ॥ ಯೋ ರಾತ್ರಿಞ್ಚರಶೇಖರಃ ಕಿಲ, ದಶಾಸ್ಯಃ, ಕೋಣಪಾಲ್ಯಾ ಶ್ರಯೋ,। ವಜ್ರಾಬಾಧಿತ ಶಕ್ತಿಕೋ, ನೃರುಧಿರಂ ಪಾತುಂ ಸದಾ ವಾಞ್ಛತಿ,। ಉನ್ಮತ್ತೋ ಮಧುಯೋಗತೋ ಭವತಿ ಯಸ್ತನ್ಮತ್ಕುಣೋ ರಾವಣ। ಸ್ತ್ವಸ್ಮಾ ನ್ನಶ್ಯತಿ ಪುತ್ರಪೌತ್ರಸಹಿತಃ ಸೀತಾಭಿಸನ್ನಾಧಸತಃ ॥ —(ಸು.ಲಾ.)

ಅ॥ ರಾವಣನು ತಗುಣೆಯಂತೆ. ಹೇಗೆಂದರೆ ತಗುಣೆಯು (೧) ರಾತ್ರಿಯಲ್ಲಿ ಓಡಾಡುವ ಹುಳುಗಳ ರಾಜ, ಚೂಪಾದ ಮೂತಿಯುಳ್ಳದ್ದು, ಮೂಲೆಮೂಲೆಗಳಲ್ಲಿರುತ್ತದೆ, ವಜ್ರವನ್ನು ಮುರಿಯುವಷ್ಟು ಶಕ್ತಿಯುಳ್ಳದ್ದು, (ತಗುಣೆಯ ರಕ್ತದಿಂದ ವಜ್ರವು ಚೂರಾಗುವದೆಂದು ವಜ್ರಭಸ್ಮ ಮಾಡುವ ವೈದ್ಯರು ಹೇಳುತ್ತಾರೆ.) ಯಾವಾಗಲೂ ಮನುಷ್ಯರ ರಕ್ತವನ್ನು ಕುಡಿಯಲಿಚ್ಛಿಸುತ್ತದೆ, ವಸಂತರ್ತು ಬಂದೊಡನೆ ಮದವೇರುತ್ತದೆ, ಶೀತಕಾಲ ಬರುತ್ತಲೆ ಮಕ್ಕಳುಮರಿಯೊಡನೆ ನಾಶ ವಾಗುತ್ತದೆ. ಅದರಂತೆ ರಾವಣನು (೨) ರಾಕ್ಷಸರ ರಾಜನು, ಅವನಿಗೆ ಹತ್ತು ಮುಖ, ಅವನಿಗೆ ರಾಕ್ಷಸರ ಗುಂಪಿನ ಬೆಂಬಲ, ವಜ್ರಾಯುಧದಿಂದಲೂ ಕೂಡ ಅವನಿಗೆ ಬಾಧೆಯಿಲ್ಲದಂಥ ಶಕ್ತಿ, ಅವನು ಮದ್ಯಪಾನ ಮಾಡಿ ಮದೋನ್ಮತ್ತನಾದವನು, ಅವನು ಯಾವಾಗಲೂ ಮನುಷ್ಯರ ರಕ್ತ ವನ್ನು ಕುಡಿಯಲಿಚ್ಛಿಸುವವನು, ಸೀತೆಯ ದೆಸೆಯಿಂದ ಪುತ್ರಪೌತ್ರರೊಡನೆ ಅವನು ನಷ್ಟನಾ ಗುತ್ತಾನೆ.

ತಗುಣೆಯ ಬಾಧೆಗೆ ಎಂಥೆಂಥವರೋ ಹೆದರಿದ್ದಾರೆ—

ಶ್ಲೋ॥ ಕಮಲೇ ಕಮಲಾ ಶೇತೇ ಹರಃ ಶೇತೇ ಹಿಮಾಲಯೇ। ಕ್ಷೀರಾಬ್ಧೌ ಚ ಹರಿಃ ಶೇತೇ ಮನ್ಯೇ ಮತ್ಕುಣಶಙ್ಕಯಾ ॥ —(ಸು.)

ಅ॥ ಲಕ್ಷ್ಮಿಯು ಕಮಲದಲ್ಲಿಯೂ ಈಶ್ವರನು ಹಿಮಾಲಯಪರ್ವತದಲ್ಲಿಯೂ ವಿಷ್ಣು ಕ್ಷೀರಸಮುದ್ರದಲ್ಲಿಯೂ ಮಲಗುವದು ತಗುಣೆಯ ಭಯದಿಂದಲೆಂದೇ ನನಗೆ ತೋರುತ್ತದೆ.

ಈ ಸಮಯದಲ್ಲಿ ಜನಕನು ನುಡಿದದ್ದೇನೆಂದರೆ—

✓ದಿ॥ ಸಾಯುತಿರ್ಪಂ ರಾವಣಂ ಜನರೆ ನೋಡಿ। ಕಾಯುಬಲ್ಲರ್ ಬನ್ನಿರೈದಯುವ ಮಾಡಿ ॥ ರಾಯರೇ ಇಲ್ಲೆಂಬಿವೇ ಲಜ್ಜೆಗೂಡಿ । ಬಾಯಬಿಟ್ಟಿರ್ಪಂ ಜೀವದಾನ ಮಾಡಿ ॥

ಆಗ ಶ್ರೀರಾಮಚಂದ್ರನು ವಿಶ್ವಾಮಿತ್ರರ ಸನ್ನೆಯಿಂದಲೇ ಅವರ ಆಜ್ಞೆಯನ್ನು ಪಡೆದು ಬರುತ್ತಿದ್ದದ್ದೆಂತಿತ್ತೆಂದರೆ—

ಷ॥ ಸುರರಿಗೀಶ್ವರನಂತೆ, ಧರಣೀ। ಸುರರಿಗಮಲಬ್ರಹ್ಮದೋಲಿತ। ರರಿಗೆ ರಾಜಕುಮಾರನಂದದಿ, ನಿಖಿಲರಾಯರಿಗೆ ॥ ಧರೆಗಧೀಶ್ವರನಾಗಿ, ಮಾನಿನಿ । ಯರಿಗೆ ಮನ್ಮಥನೆಂಬವೊಲ್ಸೋ। ಚರಿಸಿದನು ಗರುವಾಯಿಯಲಿ ಗಜಪತಿಯ ಗಮನದಲಿ ॥ —(ತೊ.ರಾ.)

ಆಗ ಜನಕನು ವಿಶ್ವಾಮಿತ್ರರೊಡನೆ ಹೇಳುತ್ತಾನೆ—

ಶ್ಲೋ॥ ರೂಪಂ ತು ಶೌರ್ಯಪಿಶುನಮ್। ದಶರಥಸೂನೋಸ್ತಥಾಪ್ಯಸೌ ಸ್ವಾಮಿನ್ ॥ ಸಗುಣಃ ಸಗುಣಂ ಕುರ್ಯಾ।ದ್ಯದಿ ಶಿವಧನುರದ್ಯ ಮನ್ಮನಸ್ಸಗುಣಮ್ ॥ —(ರಾ.ಚಂ.)

ಅ॥ ವಿಶ್ವಾಮಿತ್ರರೆ, ಈ ದಶರಥನ ಮಗನ ರೂಪವಾದರೊ ಶೌರ್ಯಸೂಚಕವಾಗಿದೆ. ಗುಣಾಢ್ಯನಾದ ಇವನು ಶಿವಧನುಸ್ಸನ್ನು (ಗುಣದಿಂದ) ಹುರಿಯಿಂದ ಕಟ್ಟಿದರೆ ನನ್ನ ಮನಸ್ಸು (ಸಗುಣಂ) ಕೃತಾರ್ಥವಾಗುವದು.

ಆ ಸಮಯದಲ್ಲಿ ಸೀತೆಯ ಸಖಿಯರು ಅಂದುಕೊಳ್ಳುತ್ತಿದ್ದುದೇನೆಂದರೆ—

ಜುಂಜೋಟಿ—ರೂಪಕ

ಎಷ್ಟು ಸುಂದರ! ಎಷ್ಟು ಬಂಧುರ! । ಈ ಮನೋಹರ, ಕುವರ ॥ ಪ ॥ ದೃಷ್ಟಿ ತಾಕೀತೆಂದು ಹೇಳು।ವಷ್ಟು ಸರ್ವಮೋಹನಾಕಾರ ॥ ಅ. ಪ ॥ ನೀಲ ಮೇಘಶ್ಯಾಮನು ವಿ।ಶಾಲಕಮಲನಯನನು ॥ ಶೀಲವಿನಯಸಹಿತನು ಭೂ। ಪಾಲಸಂಘಮಹಿತನು॥೧॥ ಅಗಲವಾದ ಹಣೆಯು ಬಿಲ್ಲ।ಬಗೆಯೊಳಿರುವ ಹುಬ್ಬುಗಳು ॥ ಬಿಗಿವಡೆದಿಹ ದೀರ್ಘಬಾಹು।ಯುಗಳವು-ಬಲುಶೋಭಿಸುವವು ॥ ೨ ॥ ಬಹುವಿಶಾಲ ವಕ್ಷದೆಡೆಯು।ಲಲಿತವಾದ ಚಲನವಲನ॥ ಸಲೆ ಯೌವನದಿಂ ಶೋಭಿಪ।ಕುಲದೀಪಕನೀ ಚಿದ್ರೂಪ ॥

ಆಗ ಶ್ರೀರಾಮಚಂದ್ರನು ಬಂದು ಧನುವನ್ನು ನೋಡಿ ಹೇಳುತ್ತಾನೆ—

ಕಂ॥ ಧರಿಸಿರ್ದಸಿದಂ ದಕ್ಷಾ। ಧ್ವರಸಮಯದೊಳಿಂದುಶೇಖರಂ ಸಾಮಾ ನ್ಯರ್ ॥ ಸುರಸರಕಿನ್ನರಯಕ್ಷಾ। ಸುರರಾರುಂ ಧರಿಸಲಾರರಿದನೀ ಜಗದೊಳ್ ॥
—(ರಾ.ನಾ.)

ಹೀಗೆಂದು ಅವನು ಕೈನೀಡುತ್ತಲೇ—

ಸಾ॥ ರಾಮನ ರೂಪವ ನೋಡಿದ ಸೀತೆಯು। ಕಾಮಿಸುತುಂಗುಟದಿಂದ ॥ ಭೂಮಿಯನೊತ್ತಲು ಧನುವೈದಿತು ಶ್ರೀ। ರಾಮಕರಕೆ ಭರದಿಂದ ॥

ಒಡನೆ ರಾಮಚಂದ್ರನು ಹುರಿಯನ್ನು ಕಟ್ಟಬೇಕೆಂದು ಧನುಸ್ಸನ್ನು ಬಗ್ಗಿಸುತ್ತಲೇ ಅದು ಭಗ್ನವಾಗಿ—

ಶ್ಲೋ॥ ರಾಮೋ ಬಾಹುಬಲಂ ವಿವೃಣ್ವತಿ ಧನುರ್ವಂಶೇ ಗುಣಾರೋ- ಪಣಮ್ । ಮಾಭೂತ್ಕೇವಲಮಾತ್ಮನಾ ತಿಲಕಿತೇ ವಂಶೇऽಪಿ ವೈಕರ್ತನೇ ॥ ಉತ್ಕೃಷ್ಟಂ ನಿತರಾಂ ತದೇವ ನ ಪರಂ ಸೀತಾಮನೋऽಪಿ ದ್ರುತಮ್ । ಭಜ್ಞ ಸ್ತಸ್ಯ ನ ಕೇವಲಂ; ಕ್ಷಿತಿಭುಜಾಂ ದೋಸ್ತಮ್ಭದಮ್ಭಸ್ಯ ಚ ॥ —(ರಾ.ಚಂ)

ಅ॥ ರಾಮನು ತನ್ನ ಬಾಹುಬಲವನ್ನು ತೋರಿಸಿ ಧನುಸ್ಸಿಗೆ ಹೆದೆಯನ್ನೇರಿಸಲು ಬರೀ ತನಗೆ ಮಾತ್ರ ಕೀರ್ತಿಕರವಾಗಿರದೆ ಸೂರ್ಯವಂಶಕ್ಕೆಲ್ಲ ಕೀರ್ತಿಕರವಾಯಿತು. ಅವನು ಬರೀ ಧನುಸ್ಸನ್ನು ಜಗ್ಗಲಿಲ್ಲ; ಸೀತೆಯ ಮನಸ್ಸನ್ನೂ ಕೂಡ ವೇಗವಾಗಿ ಜಗ್ಗಿದನು. ಆಗ ಆದದ್ದು ಧನುಸ್ಸಿನ ಭಂಗ ಮಾತ್ರವಲ್ಲ; ಸಮಸ್ತರಾಜರ ತೋರವಾದ ಭುಜಗಳ ದಂಭದ ಭಂಗವೂ ಆಯಿತು.

ಆಗ ಆದ ಪರಿಣಾಮವನ್ನು ಮತ್ತೊಬ್ಬ ಕವಿ ವರ್ಣಿಸಿರುವದೆಂತೆಂದರೆ—

ಶ್ಲೋ॥ ಲಜ್ಜಾ ಕೀರ್ತಿರ್ಜನಕತನಯಾ ಶೈವಕೋದಣ್ಡಭಙ್ಗೇ । ತಿಸ್ರಃ ಕನ್ಯಾ ನಿರುಪಮತಯಾ ಭೇಜಿರೇ ರಾಮಚನ್ದ್ರಮ್ ॥ ಅನ್ಯಾ ಪಾಣಿಗ್ರಹಣ- ಸಮಯೇ ಜ್ಯಾಯಸೀ ಜಾತಕೋಪಾ। ಭೂಪೈಃ ಸಾರ್ಧಂ ಖಲು ಗತವತೀ ಮಧ್ಯಮಾಥೋ ದಿಗನ್ತಾನ್ ॥ —(ಸು.)

ಅ॥ ಶಿವಧನುಸ್ಸನ್ನು ಮುರಿದಾಗ ಅನ್ಯಾದೃಶರಾದ ಲಜ್ಜೆ, ಕೀರ್ತಿ, ಸೀತೆ—ಈ ಮೂವರು ಕನ್ಯೆಯರೂ ರಾಮಚಂದ್ರನನ್ನು ವರಿಸಿದರು. ಆಗ ಸೀತೆಯ ಪಾಣಿಗ್ರಹಣವಾಗುತ್ತಲೆ ಸಿಟ್ಟಿನಿಂದ ಹಿರಿಯವಳು ರಾಜರ ಜೊತೆಗೂ ನಡುವಣವಳು ದಿಗಂತಗಳಿಗೂ ಹೋದರು.

ಈ ಪ್ರಕಾರವಾಗಿ ತಮ್ಮ ತಮ್ಮ ವರ್ಣೋಚಿತವಾದ ಯೋಗ್ಯತೆಯನ್ನು ತೋರಬೇಕೆಂಬುದೇ ಪೀಠಿಕೆಯಲ್ಲಿ 'ಗೃಹದ ಭಾರವನು ವಹಿಪ ಯೋಗ್ಯತೆಯ' ಎಂದು ಮೊದಲಾಗಿರುವ ನುಡಿಯ ತಾತ್ಪರ್ಯವು.

ಆಗ—

ಕಂ॥ ಅಲರ್ಗಣೆಯ ಸಂಗಜಂಗೀ । ಯಲೆಂದು ರತಿಬರ್ಪ ಮಾಳ್ಕೆಯಿಂ ಮಾಲೆಯನಾ ॥ ಲಲಿತಾಂಗಿ ಪಿಡಿದು ಕಣ್ಣಂ ಕೆಲಕ್ಕಮಾ ದಾಶರಥಿಯ ಬಗೆಗಂ ಬಂದಳ್ ॥ —(ರಾ.ಚ.ಪು)

ಟಿ॥ ಅಲರ್ಗಣೆಯ—ಹೂವಿನ ಬಾಣವನ್ನು. ಬಗೆಗಂ—ಮನಸ್ಸಿಗೂ.

ಕಂ॥ ಅಸಿತಿಂದ್ರಿಯಮುಂ ವಿಷಯಮು। ನನಾಕುಳಂ ಬಿಟ್ಟು ದರ್ಶನೇಂದ್ರಿಯಮೊಂದ ॥ ರ್ಕನುವಶವಾದುವೆನಲ್ ನೃಪ । ತನಯರ್ ಜಾನಕಿಯ ಮೇಲೆ ಕಣ್ಣಾಗಿರ್ದರ್ ॥ —(ರಾ-ಚ.ಪು.)

ಸೀತೆ ಬಂದಾಗ ಅವಳನ್ನು ನೋಡಿದ ರಾಜರ ಸ್ಥಿತಿ ಹೇಗಾಯಿತೆಂದರೆ—

ಷ॥ ನೋಟದಲಿ ಮದನಾಸ್ತ್ರವೆದೆಯಲಿ । ನಾಟಿದುದು; ವಿಟರುಗಳ ಹುಬ್ಬಸ। ಬೇಟದಲಿ ಬೆಂಡಾದರಗ್ಗದ ನಿರ್ಜಿತೇಂದ್ರಿಯರು; ॥ ದಾಟ ಬಗೆದುದು ವೀರಕಳೆ ನಗೆ ನಾಟಿದುಸ್ಮದವಿರಹಿಗಳ; ವಿ । ಕ್ವಾಟವಿಕಜನ ಭಗ್ನವಾದುದು ನಗೆಯ ಮುರುಕದಲಿ ॥ —(ತೊ.ರಾ)

ಟಿ॥ ವಿರಹಿಗಳ ವೀರಕಳೆ ದಾಟಬಗೆದುದು. ಆಟವಿಕಜನ—ಸಾಮಾನ್ಯಜನರು. ಮುರುಕ—ಒಯ್ಯಾರ.

ಶ್ರೀರಾಮಚಂದ್ರನಿಗೆ ವಿಶ್ವಾಮಿತ್ರರ ರೂಪದಿಂದ ಆದ ಸಾಧುಸಮಾಗಮವು ಹೀಗೆಫಲಿಸಿತು—

ಶ್ಲೋ॥ ಸಾಧೂನಾಂ ದರ್ಶನಂ ಪುಣ್ಯಂ ತೀರ್ಥಭೂತಾ ಹಿ ಸಾಧವಃ । ಕಾಲೇನ ಫಲತೇ ತೀರ್ಥಂ ಸದ್ಯಃ ಸಾಧುಸಮಾಗಮಃ ॥ —(ಸು)

ಅ॥ ಸಾಧುಗಳ ದರ್ಶನವು ಪುಣ್ಯಕರವಾದದ್ದು. ಅವರು ತೀರ್ಥಭೂತರು. ತೀರ್ಥಗಳು ಮುಂದೆ ಯಾವಾಗಲೋ ಫಲಿಸುವವು. ಸಾಧುಗಳು ಆ ಕ್ಷಣದಲ್ಲಿಯೇ ಫಲವನ್ನು ತೋರಿಸುವರು.

ವೃ॥ ರವಿ ನಡೆದತ್ತಲೆಲ್ಲ ಬೆಳಗಲ್ಲದೆ ಕತ್ತಲೆಯುಂಟೆ? ಆತ್ಮತ। ತ್ತ್ವವೆ ಮನದಲ್ಲಿ ನಟ್ಟು ನುಡಿವಾತನ ಮಾತುಗಳೆಲ್ಲ ಮೋಕ್ಷಮಾ॥ರ್ಗವೆ; ಅವನೆಲ್ಲಿ ನಿಂದನದು ತೀರ್ಥವವಂ ನಡೆದತ್ತ ಸರ್ವನು। ತ್ಸವಮಿದು ನಿಮ್ಮ ಮಾರ್ಗದ ರಹಸ್ಯವಲಾ! ಅಪರಾಜಿತೇಶ್ವರಾ ॥ —(ಅ.ಶ)

ಕೀ॥ ಸಾಗಿತು ಸುದ್ದಿಯಯೋಧ್ಯೆಗಾಗ ಬಲು । ಬೇಗ ಲಗ್ನಪತ್ರಿಕೆಯೊಡನೆ ॥ ಸಾಗಿ ಬಂದನಾ ದಶರಥನೃಪನನು। ರಾಗದಿಂದ ಪರಿಜನರೊಡನೆ ॥

ಆಗ ಜನಕನು ರಾಮನನ್ನು ಕುರಿತು—

ಶ್ಲೋ॥ ಇಯಂ ಸೀತಾ ಮಮ ಸುತಾ ಸಹಧರ್ಮಚರೀ ತವ। ಪ್ರತೀಚ್ಛ ಚೈನಾಂ ಭದ್ರಂ ತೇ ಪಾಣಿಂ ಗೃಹ್ಣೀಷ್ವ ಪಾಣಿನಾ ॥ —(ಶ್ರೀ.ರಾ)

ಅ॥ ಈ ಸೀತೆ ನನ್ನ ಮಗಳು; ನಿನ್ನ ಹೆಂಡತಿ; ನೀನು ಇವಳನ್ನು ವರಿಸಿ ಪಾಣಿಗ್ರಹಣ ಮಾಡು. ನಿನಗೆ ಮಂಗಲವಾಗುವದು.

ಎಂದು ರಾಮನಿಗೆ ಸೀತೆಯನ್ನೊಪ್ಪಿಸಿದನು.

ಶ್ಲೋ॥ ಗುಣಮನಿಮಿಷಚಾಪೇ ಕಿಞ್ಚಿದಾರೋಪ್ಯ ಸೀತಾಮ್। ಕುಶಿಕತನಯವಾಕ್ಯಾದಗ್ರಹೀದ್ರಾಮಭದ್ರಃ॥ ತದನು ತದನುಜನ್ಮಾ ಮೈಥಿಲೇಸ್ಟ್ರಸ್ಯ ಚಿತ್ತೇ। ನಿಹಿತಬಹುಗುಣಸ್ಸನ್ ಊರ್ಮಿಳಾಂ ಲಕ್ಷ್ಮಣೋಽಪಿ ॥ —(ರಾ.ಚಂ)

ಅ॥ ರಾಮಚಂದ್ರನು ದೇವಧನುಸ್ಸಿಗೆ ಒಂದು ಗುಣವನ್ನೇರಿಸಿ (ಹುರಿಯನ್ನು ಕಟ್ಟಹೋಗಿ) ವಿಶ್ವಾಮಿತ್ರರ ಮಾತಿನಂತೆ ಸೀತೆಯನ್ನು ಪರಿಗ್ರಹಿಸಿದನು. ಅವನ ತಮ್ಮನಾದ ಲಕ್ಷ್ಮಣನು ಜನಕರಾಜನ ಮನಸ್ಸಿಗೆ ತನ್ನ ಬಹಳ ಗುಣಗಳನ್ನೇರಿಸಿ ಊರ್ಮಿಳೆಯನ್ನು ಮದುವೆಯಾದನು.

ಸುರಟಿ—ಆದಿತಾಳ

ಆಯಿತಾಗ ಮದುವೆ । ಮಿಥಿಲೆಯ । ರಾಯಕುವರಿಯರಿಗೆ ॥ ಪ ॥ ಆಯುಸ ವಿಲ್ಲದೆ ದೊರಕಿದಯೋಧ್ಯೆಯ । ರಾಯಕುವರರೊಡ । ನಾ ಯುವತಿಯರಿಗೆ॥ಅ.ಪ॥ ಸೀತೆ ರಾಮನನ್ನು, । ಊರ್ಮಿಳೆ । ಆತನನುಜನನ್ನು, ॥ ಪ್ರೀತಿಯಿಂದ ಮಾಂಡವಿ ಶ್ರುತಕೀರ್ತಿಯು । ರೋತು ಭರತಶತ್ರುಘ್ನರ ವರಿಸಲು ॥ ೧ ॥ ದಾನಧರ್ಮವೆಲ್ಲ । ನಡೆದವು । ಕ್ಷೋಣಿ ರಣಿಯಲೆಲ್ಲ ॥ ಮಾನವೇಂದ್ರಸತ್ಕಾರಗಳಾದವು । ಸಾನು ರಾಗ ಮಿಗಿಲೆಲ್ಲ ವಿಧದೊಳು ॥ ೨ ॥ ಸುರಿದವು ಹೂಮಳೆಗಳ್ । ಮೇಣ್ಘೋ । ಗರ್‍ರೆದವು ದುಂದುಭಿಗಳ್ ॥ ನೆರೆ ಗಂಧರ್ವರು ಗಾನವ ಗೈದರು । ಭರದಿಂದಪ್ಸರೆ ಯರುನರ್ತಿಸಿದರು ॥ ೩ ॥

ಶ್ಲೋ॥ ಶಿಕ್ಷಿತಾಪಿ ಸಖಿಭಿರ್ನನು ಸೀತಾ । ರಾಮಚನ್ದ್ರಚರಣೌ ಸ ನನಾಮ ॥ ಕಿಂ ಭವಿಷ್ಯತಿ ಮುನೀಶವಧೂವ । ದ್ಬಾಲರತ್ನಮಿಹ ತದ್ರಜಸೇತಿ ॥
—(ಸು.)

ಅ॥ ಸಖಿಯರೆಲ್ಲ ಹೇಳಿದರೂ ಸೀತೆಯು ರಾಮನ ಪಾದಧೂಲಿಯಿಂದ (ತನ್ನ ಶಿರಸ್ಸಿನಲ್ಲಿರುವ) ಬಾಲರತ್ನವು ಅಹಲ್ಯೆಯಂತಾದೀತೆಂದು ಅವನ ಪಾದಗಳಿಗೆ ನಮಸ್ಕಾರವನ್ನು ಮಾಡಲಿಲ್ಲ.

ಆಮೇಲೆ ವಿಶ್ವಾಮಿತ್ರರು ಅತ್ತ ತಪಸ್ಸಿಗೆ ಹೊರಟು ಹೋಗಲು ಇತ್ತ ವಿವಾಹೋಚಿತವಾದ ಸಂಸ್ಕಾರವನ್ನು ಹೊಂದಿ ಶ್ರೀರಾಮಚಂದ್ರನು ಅಯೋಧ್ಯೆಗೆ ಬರುತ್ತಿರುವಾಗ—

✓ ಕೀ॥ ಘೋರವಾಯು ಬಹುಧೂಳಿಯನೆಸುತಿರೆ । ಭೂರಿಸೂರ್ಯತೇಜದೊಳಾಗ ॥ ಸಾರಿದನಾ ದಶರಥನ ಮುಂದೆ ನ್ಮೈ । ವಿಾರಿ ಪರಶುರಾಮನು ಬೇಗ ॥

ಅವನನ್ನು ನೋಡಿ ಲಕ್ಷ್ಮಣನು ಆಶ್ಚರ್ಯದಿಂದ ಹೇಳುತ್ತಾನೆ—

ಕಂ॥ ಶಿರದೆಡೆಯೊಳ್ಕೆಜಂಡೆ, ಭುಜ । ಶಿರದೆಡೆಯೊಳ್ಪರಶು, ಹಸ್ತದೊಳ್ಕೋದಂಡಂ ॥ ಕೊರಳೊಳು ರುದ್ರಾಕ್ಷದ ಸರ, । ಹರಿಣಾಜಿನಮುಡಿಗೆ ಮೆರೆವುದಂಗದೊಳಹಹಾ!
—(ರಾ.ನಾ)

ಆಗ ನಡೆದದ್ದೇನೆಂದರೆ—

ಸಾ॥ ಮಗನ ರಕ್ಷಿಸೆಂದೆರಗಿದ ನೃಪನನು । ಬಗೆಯದೆ ಸರಭಸದಿಂದ ॥ ಮಿಗೆ ತನ್ನಯ ಹೆಸರಿನ ನಿನ್ನಯ ಮಗ । ನಿಗೆ ಕೊಡಲಿಯ ನೋಡೆಂದ ॥

ಶ್ಲೋ॥ಅರ್ಘ್ಯಮರ್ಘ್ಯಮಿತಿ ವಾದಿನಂ ನೃಪಮ್ । ಸೋಽನವೇಕ್ಷ್ಯ ಭರತಾಗ್ರಜೋ ಯತಃ ॥ ಕ್ಷತ್ರಕೋಪದಹನಾರ್ಚಿಷಂ ತತಃ । ಸನ್ದಧೇ ದೃಶಮುದಗ್ರತಾರಕಾಮ್ ॥
—(ರ.ವಂ)

ಅ॥ ಅರ್ಘ್ಯ, ಅರ್ಘ್ಯ—ಎಂದು ದಶರಥನು ಹೇಳುತ್ತಿದ್ದರೂ ಅವನನ್ನು ಲಕ್ಷ್ಯವಿಡದೆ ಪರಶುರಾಮನು ಕಣ್ಣುಗುಡ್ಡೆಗಳನ್ನೆತ್ತಿ ಕ್ಷತ್ರಿಯರ ಮೇಲಿನ ಕೋಪವೆಂಬ ಅಗ್ನಿಯ ಉರಿಯಂತಿದ್ದ ನೋಟವನ್ನು ರಾಮನಿದ್ದ ಕಡೆಗೆ ಬೀರಿದನು.

ಆಗ ಅವರಿಬ್ಬರಿಗೂ ನಡೆದ ಮಾತೇನೆಂದರೆ—

ಶ್ಲೋ॥ (ಪ) ರೇ ರೇ ಕ್ಷತ್ರಕುಲಾಧಮ, (ರಾ) ಪ್ರಕಟಿತಂ ಬ್ರಾಹ್ಮಣ್ಯಮಸ್ತ್ರೇಣ ತೇ। (ಪ) ನನ್ವೇಕಾಂ ರಜನೀಚರೀಂ ತ್ವಮವಧೀ (ರಾ) ಮಾರ್ತಾ ನ ಮೇ ತಾಟಕಾ ॥ (ಪ) ನಿಃಕ್ಷತ್ರಾ ಧರಣೀ ಕೃತಾ ಖಲು ಮಯಾ? (ರಾ) ಕೋಽಹಂ? ಭವಾನ್ ಸತ್ಯವಾಕ್ । ಇತ್ಥಂ ಭಾರ್ಗವರೋಷಪಾಟನಪಟುಃ ಪಾಯಾತ್ಸ ನೋ ರಾಘವಃ ॥ —(ಸು)

ಅ॥ (ಪ) ಎಲೋ ಕ್ಷತ್ರಿಯಕುಲದಲ್ಲಿ ಅಧಮನಾದವನೆ (ರಾ) ಅಸ್ತ್ರಧಾರಿಯಾದ ನೀನು ಬ್ರಾಹ್ಮಣ್ಯವನ್ನು ಚೆನ್ನಾಗಿ ತೋರಿಸುತ್ತಿ (ಪ) ನೀನೊಬ್ಬ ರಾಕ್ಷಸಿಯನ್ನು ಕೊಂದೆಯಲ್ಲವೆ? (ರಾ) ತಾಟಕಿಯು ನನ್ನ ತಾಯಲ್ಲ. (ಪ) ನಾನು ಭೂಮಿಯ ಮೇಲೆ ಕ್ಷತ್ರಿಯರಿಲ್ಲದಂತೆ ಮಾಡಿಲ್ಲವೆ? (ರಾ) ನೀನು ನಿಜವನ್ನಾಡುವವನಾದರೆ ನಾನು ಯಾರು? ಹೀಗೆ ಪರಶುರಾಮನ ಕೋಪವನ್ನು ತಗ್ಗಿಸಿದಂಥ ರಾಮಚಂದ್ರನು ನಮ್ಮನ್ನು ಕಾಪಾಡಲಿ.

ಅದೇ ಮಾತು ಮುಂದೆ ಸಾಗಿದ್ದೆಂತೆಂದರೆ—

✓ ಕೀ॥ (ಪ) ತೋರು ಬಲವ ನೀ ವೈಷ್ಣವಚಾಪಕ್ಕೇರಿಸಲಾಪರೆ ಹೆದೆಯನ್ನು ॥ (ರಾ) ವಿಸಾರಿ ಸೆಳೆದಿಹೆನು ಹೂಡಿ ಬಾಣವನು । ತೋರುನೀನದಕೆ ಲಕ್ಷ್ಯವನು ॥

ಮತ್ತು ನೀನು ಬ್ರಾಹ್ಮಣನಾದರೂ ಕ್ಷಮಾರ್ಹನಲ್ಲವೆಂದು ರಾಮನು ಹೇಳುತ್ತಾನೆ—

ಷ॥ ಜನಪ ಕೇಳ್ ಕರ್ತವ್ಯಪರಿಯದೆ । ಅನವರತ ದೌರಾತ್ಮ್ಯದಿಂದಲಿ। ಮನಕೆ ಬಂದಂದದಲಿ ಅನುಚಿತದಿಂದ ನಡೆವವನ ॥ ತನಗವನು ಗುರುವಾದೊಡಾಗಲಿ । ಮುನಿದು ಶಿಕ್ಷಿಸಿ ಬಿಡಲುಬೇಕದ । ಕಿನಿತುಪೇಕ್ಷೆಯಗೈದನಾದೊಡೆ ಕೆಡುವನರಸೆಂದ ॥ —(ಕ.ಭಾರ.)

ಟಿ॥ ಇನಿತುಪೇಕ್ಷೆಯಗೈದನಾದೊಡೆ—ಸ್ವಲ್ಪ ಉಪೇಕ್ಷೆಯನ್ನು ಮಾಡಿದರೂ.

ಆಗ ನಿರ್ವೀರ್ಯನಾದ ಪರಶುರಾಮನು ರಾಮನನ್ನು ಸ್ತೋತ್ರಮಾಡುತ್ತಾನೆ—

ಆರಭಿ—ಆದಿತಾಳ

ಕಾವ ದೇವ ನೀನಲ್ಲದೆ ಜಗಕಿನ್ನಾವ ದೇವರುಂಟು? ॥ ಪ ॥ ದೇವದೇವ ನೀನೆಂದು ನಂಬಿದೆ । ಕಾಯೋ ಕನಕಾಚಲಗೋಪಾಲ ॥ ಅ. ಪ ॥ ಸಖದಲಿ ಹಿರಣ್ಯಕನಸುವನೆ ನೀಳಿ । ರಕುತವ ದೆಸೆದೆಸೆಗೆ । ಚೆಲ್ಲಲು ॥ ಸಕಲಸುರರು ಕೊಂಡಾಡಲು ಜಯವೆಂದು । ಭಕುತಪ್ರಹ್ಲಾದನನು । ಕರುಣದಿ ॥ ೧ ॥ ತಂದೆಯು ತೊಡೆಯು ಮೇಲ್ಬಂದು ಕುಳ್ಳಿರಲು । ಕಂದನ ಮಲತಾಯಿ । ನೂಕಲು ॥ ಅಂದು ಶಿಶುವು ಅಡವಿಗೆ ನಡೆತರಲು । ಬಂದು ನೀನೆ ಕಾಯ್ದೆಯೊ ಹರಿ ಕರುಣದಿ ॥ ೨ ॥ ಅತಿಚಪಲದಿ ದುಃಶಾಸನ ಸಭೆಯೊಳು । ಖತಿಯಿಂದಲಿ ಸೆಳೆಯೆ । ಸೀರೆಯ ॥ ಸತಿಯರೊಳಗೆ ಅತಿ ಚೆಲುವೆ ದ್ರೌಪದಿ । ಖತಿಗೊಂಡಿರೆ ನೀ ಕಾಯ್ದೆಯೊ ಕರುಣದಿ ॥ ೩ ॥ ಮರಣಕಾಲದಿ ಅಜಾಮಿಳ ಮಗನನು । ಮರುಗಿ ನಾರಗ

ನೆಂದು । ಒದರಲು ॥ ನೆರೆದು ಪೊರೆದೆ ನೀ ಕರುಣೆಗಳರಸನೆ । ಗುರುಪುರಂದರ ವಿಠಲಾ ಕರುಣದಿ ॥ ೪ ॥ —(ದಾ)

ಆಗ ರಾಮನ ಬಾಣಕ್ಕೆ ಪರಶುರಾಮನು ತೋರಿಸಿದ ಲಕ್ಷ್ಯವೇನೆಂದರೆ—

ಶ್ಲೋ॥ ದೇವ, ಯದ್ಯತ್ಕೃತಂ ಪುಣ್ಯಂ ಮಯಾ ಲೋಕಜಿಗೀಷಯಾ । ತತ್ಸರ್ವಂ ತವ ಬಾಣಾಯ ಭೂಯಾದ್ರಾಮ ನಮೋಽಸ್ತು ತೇ ॥ —(ಅ.ರಾ.)

ಅ॥ ಹೆ, ರಾಮಚಂದ್ರದೇವ, ಲೋಕವನ್ನು ಜಯಿಸುವದಕ್ಕೆ ನಾನು ಮಾಡಿದ ಪುಣ್ಯವೆಲ್ಲ ನಿನ್ನ ಬಾಣಕ್ಕೆ ಲಕ್ಷ್ಯವಾಗಲಿ; ನಿನಗೆ ನಮಸ್ಕಾರ.

ಇದರಿಂದಾದದ್ದೇನೆಂದರೆ—

ಶ್ಲೋ॥ ಧನುರೇಕ ಏವ ನ ವಿನಮ್ರಿತಂ ಮನಾ । ಗ್ರಘುನಾಯಕೇನ ಭಗವಾಂಶ್ಚ ಭಾರ್ಗವಃ ॥ ಗತಿರೇವ ತಸ್ಯ ನ ವಿಸಿರ್ಗತಾ ದ್ರುತಮ್ । ಪೃಥುರೀದೃಶೀ ದಶರಥಸ್ಯ ಚ ವ್ಯಥಾ ॥ —(ರಾ.ಚ.ಚಂ.)

ಅ॥ ರಾಮಚಂದ್ರನು ಧನುಸ್ಸೊಂದನ್ನೇ ಬಗ್ಗಿಸಲಿಲ್ಲ; ಭಗವಂತನಾದ ಪರಶುರಾಮನನ್ನು ಕೂಡ ಬಗ್ಗಿಸಿದನು. ಪರಶುರಾಮನ ಗತಿ ಮಾತ್ರವೇ ಹೋಗಲಿಲ್ಲ; ದಶರಥರಾಯನ ಮಹತ್ತಾದ ವ್ಯಥೆಯೂ ಹೋಯಿತು.

ಇಂಥ ಸಾಮರ್ಥ್ಯವಿರಬೇಕೆಂದೇ 'ಪ್ರತಿಕಕ್ಷಿಗಳನು ನಿಗ್ರಹಿಸುತ' ಎಂದು ಮೊದಲಾಗಿರುವ ಪೀಠಿಕೆಯ ನುಡಿಯು ಹೇಳಿರುವದು.

ಕೀ॥ ಸೇರುತಯೋಧ್ಯೆಯ ಭರತಶತ್ರುಘ್ನರು । ಸಾರಿರೆ ಮಾತುಳನರಮನೆಗೆ ॥ ಭೂರಿ ವಿಭವವನು ರಾಮಲಕ್ಷ್ಮಣರು । ಬೀರಿದರೆಲ್ಲಾ ಧಾರಿಣಿಗೆ ॥

ಈ ರಾಮನ ಯೋಗ್ಯತೆಗಳನ್ನು ಮೇಲುಪಜ್ಞ್ತಯಾಗಿಟ್ಟುಕೊಂಡು ತಮ್ಮ ಉದ್ಧಾರವನ್ನು ಮಾಡಿಕೊಳ್ಳಲೆಂದೇ ಪೀಠಿಕೆಯಲ್ಲಿ 'ಕೇಳ್ಳೈ ಗೃಹಸ್ಥರಾಗಲು । ಯೋಗ್ಯತೆಯನು' ಎಂದು ಹೇಳಿರುವದು.

—✻✻✻✻✻—

## ಭಜನಾವಲಿ

(೧) ಪತಿತಪಾವನ । ರಾಮ । ಪತಿತಪಾವನ ॥

(೨) ಹರಧನುಭಂಜನಸೀತಾರಾಮ । ಹನುಮತ್ಸೇವಿತಜಯ ಜಯ ರಾಮ ॥

(೩) ದಾಶರಥೆ ರಾಮ । ಜಯ ಜಯ । ದಾಶರಥೆ ರಾಮ ॥ ಪ ॥ ಪಾವನ ನಾಮಾ ಮೇಘಶ್ಯಾಮಾ ಮನ್ಮಥಶತಸಮಧಾಮಾ ॥

(೪) ದಶರಥನಂದನ ರಾಜಾರಾಮ । ದಶಮುಖಭಂಜನ ಸೀತಾರಾಮ ।

(೫) ರಾಮ ರಘೂತ್ತಮ ಸೀತಾನಾಯಕ । ದಶರಥನಂದನ ಸತ್ಸುಖದಾಯಕ ॥

**ಜಯ ಜಯ ರಘುವೀರಸಮರ್ಥ**



# ಚಿತ್ರಕೂಟವಾಸ

## ಪೀಠಿಕೆ—ಪಿತೃಭಕ್ತಿ

**ಮಧ್ಯಮಾವತಿ—ಅಟತಾಳ.**

ಮಾಡಿರಿ ಪಿತೃಭಕ್ತಿಯ । ಶ್ರೇಯಸ್ಸ ಪಡೆಯಲು ॥ ಪ ॥ ಮಾಡಿ ಭಕ್ತಿಯ ಸಹಿತಹಿತವೆಂ। ದಾಡದೇ ಸಮಬುದ್ಧಿಯಿಂದಲಿ ॥ ಅ. ಪ ॥ ದೊರೆತನ ಮೊದಲಾದವು । ಪಿತೃಭಕ್ತಿಯೊಂದಕೆ । ಸರಿಬಾರನೆಂದರಿತು । ಬಿಡುತವುಗಳನ್ನು ॥ ಭರದೊಳಡವಿಯನಾದರೂ ಸೇ। ರ್ದಿರದೆ ಮುನಿವೃತ್ತಿಯನು ನಡೆಸುತ । ಅರಿತು ತಂದೆಯು ಮನವ ನಡೆಸಲು । ಪರಮಮಂಗಲ ತಪ್ಪದೆಂದಿಗು ॥ ೧ ॥

**ಪ್ರಪಂಚದಲ್ಲಿ ಹೆಚ್ಚಿನ ತಿಳಿವಳಿಕೆಯುಳ್ಳವರೆನಿಸಿಕೊಂಡವರು ಕೂಡ ಲೌಕಿಕಭೋಗಗಳ ಮೇಲಿನ ಮೋಹದಿಂದ ಸ್ವಾರ್ಥಪರರಾಗುವರೇ ಹೊರತು ನಾಲ್ಕು ಜನಗಳಿಗೆ ಮೇಲುಪಙ್ತಿಯಾಗುವಂಥ ಧರ್ಮನೀತಿಗಳ ಆಚರಣೆಯ ಕಡೆಗೆ ಲಕ್ಷ್ಯಕೊಡದೆ ಇರುವದನ್ನು ಕಂಡು ಕನಿಕರದಿಂದ ನೀತಿಶಾಸ್ತ್ರಕಾರರು ಉಪದೇಶಿಸುವದೇನೆಂದರೆ—**

ವೃ॥ ಸ್ಥಿರವಲ್ಲಂ ಜೀವಿತಂ; ಭೋಗಮೊ ತರಲತರಂಗೋಪಮಂ; ಯೌವನಶ್ರೀ। ಭರಮೋ ಮೂರೇ ದಿನಂ; ಕಾದಲೆ ಚಲೆ; ತೆಗೆ ಸಂಸಾರಮೋ ಸಾರಮಲ್ಲಂ ॥ ತರಿನೆಂದಾರಯ್ದು ತತ್ಸ್ವಾರ್ಥವ ಬುಧರೆ, ಜನಾನುಗ್ರಹಕ್ಕಾತ್ಮಚಿಂತಾ । ಪರರಾಗಿಂ ಶ್ರೇಷ್ಠರೇಗೈದಪರಗನೆ ಜನರ್ ಶ್ರದ್ಧೆಯಿಂ ಮಾಳ್ಪರಲ್ತೆ ॥

—(ಭ.ವೈ)

**ಟಿ॥ ಕಾದಲೆ—ಹೆಂಡತಿ. ಚಲೆ—ಚಂಚಲಳು. ಸಾರಮಲ್ಲ + ಅಂತರಿಂ (ಎಲ್ಲವುಗಳಿಂದಲೂ)**

**ಹಾಗೆ ಆತ್ಮಚಿಂತಾಪರರಾಗಬೇಕೆಂಬ ಅರ್ಥವನ್ನೆ ಸಮರ್ಥರಾಮದಾಸರು ಉಪದೇಶಿಸಿರುವದೆಂತೆಂದರೆ—**

ಸಾಂ॥ ಶರಿರದ ಪೋಷಣೆ ಗೈದೊಡಮುದ ಕಾಲ। ನರಗಳಿಗೆಯೊಳೆ ನುಂಗುವನು ॥ ತರಣಿವಂಶಜಭಕ್ತಿಯನು ಹೊಂದಿ ಮನವೆ ನೀ। ತೊರೆಯೈ ಸಂಸಾರಚಿಂತೆಯನು ॥

—(ಮ.ಉ)

**ಹಾಗೆ ಮಾಡದೆ ಹೋದರೆ ಜನ್ಮವು ವ್ಯರ್ಥವಾಗುವದರಿಂದ ಅದು ತಮಗೆ ಸಾಧ್ಯವಾಗುವದಕ್ಕಾಗಿ ಭಗವದ್ಭಕ್ತರು ಭಗವಂತನನ್ನು ಬೇಡುವದೇನೆಂದರೆ—**

ಷ॥ ಮಣ್ಣು ಮಣ್ಣೊಳಗುದಿಸಲದರಲಿ। ಮಣ್ಣಬೊಂಬೆಗಳಾಗಿ ರಂಜಿಸಿ। ಮಣ್ಣಿನಾಹಾರದಲಿ ಜೀವವ ಹೊರೆದು ಉಪಚರಿಸಿ ॥ ಮಣ್ಣಿನಲಿ ಬಂಧಿಸಿದ ದೇಹವ । ಮಣ್ಣುಗೂಡಿಸಬೇಡ; ಜ್ಞಾನದ । ಕಣ್ಣದೃಷ್ಟಿಯನಿತ್ತು ರಕ್ಷಿಸು ನಮ್ಮನನವರತ ॥

—(ಹ.ಭ)

ಟಿ॥ ಮಣ್ಣು—ಗರ್ಭವನ್ನು ನಿಲ್ಲಿಸುವ ರೇತಸ್ಸು. ಮಣ್ಣೊಳಗೆ—ಪಂಚಭೂತಮಯವಾದ ಶರೀರದಲ್ಲಿ. ಮಣ್ಣ ಬೊಂಬೆಗಳು—ಪಂಚಭೂತಮಯವಾದ ಆಕೃತಿಗಳು. ಮಣ್ಣಿನಾಹಾರದಲಿ—ಪಂಚಭೂತಾತ್ಮಕವಾದ ಆಹಾರದಲ್ಲಿ. ಮಣ್ಣಿನಲಿ ಬಂಧಿಸಿದ—ಹೊಲಮನೆಗಳಲ್ಲಿಯೂ ಭೌತಿಕಶರೀರದಲ್ಲಿಯೂ ಅಭಿಮಾನವನ್ನಿಟ್ಟುಕೊಂಡಿರುವ.

ಏಕೆಂದರೆ—ಜ್ಞಾನವನ್ನು ಬಹುಜನರು ಹೊಗಳುತ್ತಾರೆ. ಉದಾಹರಣೆಗೆ—

• ತ್ರಿ॥ ಜ್ಞಾನದಿಂದಲೆ ಇಹವು; ಜ್ಞಾನದಿಂದಲೆ ಪರವು; । ಜ್ಞಾನವಿಲ್ಲದಲೆ ಸಕಲವು ತನಗಿದ್ದು । ಹಾನಿಕಾಣಯ್ಯ ಸರ್ವಜ್ಞ ॥ —(ಸ.ಪ)

ಜ್ಞಾನದ ಉತ್ಕೃಷ್ಟತೆಯನ್ನು ಕುರಿತು ಮತ್ತೊಬ್ಬ ಕವಿ ಹೇಳಿರುವದೇನೆಂದರೆ—

ವೃ॥ ಅವನ ಒದುರ್ಗಂಕೆ ತಾಂ ಬದುರ್ಗಕು; ಜನ್ಮವದೇ ಸಫಲಂ; ವಿಶಿಷ್ಟಲಾ । ಭವುಮದೆ; ಸರ್ವಸಿದ್ಧಿಗದು ಮೊತ್ತಮೊದಲ್ಸುವಿಚಾರಕೋಟಿಗೆ । ಲ್ಲಪರೊಳದೊಂದೆ ಕಟ್ಟಕಡೆ; ತನ್ನೊಳೆ ತನ್ನನೆ ತಾನೆ ಕಂಡು ಬಾ । ಹ್ಯವನುಳಿದಿರ್ದವಂಗೆ ಭವಪೆತ್ತಣದಿನ್ನ ಪರಾಜಿತೇಶ್ವರಾ ॥ —(ಅ.ಶ)

ಆ ಜ್ಞಾನವನ್ನು ಪಡೆಯುವದಕ್ಕೆ ನಾವು ಮಾಡಬೇಕಾದ್ದೇನೆಂದರೆ—

ಮುಖಾರಿ—ಅಟತಾಳ

ಚಿದ್ಗಗನದೆ ಚಿತ್ತದ ನಡೆಮಾಡವು। ಚಲಿಸುತಲಿದೆ ನೋಡಿ ॥ ಪ ॥ ಸದ್ಗತಿ ಪಡೆವರು ಸಮಯುವರಿತು ಶುಭ। ಸಾಧನೆಯೊಡಗೂಡಿ ॥ ಅ. ಪ ॥ ಅಡಿಗಡಿಗೆ ವಿವೇಕವನಭ್ಯಾಸಿಸಿ। ಕಡುವೈರಾಗ್ಯದೊಳು ॥ ತಡೆದು ಹೊರಗೆ ಹರಿದಾಡಗೊಡದೆ ಒಳ। ನಡೆಯಿರಿ ವೇಗದೊಳು ॥ ೧ ॥ ವ್ಯೈಗರೆಯುಪದೊಂದೇ ಗಳಿಗೆಯೊಳಿದು। ಬೇಗನೆ ಸೀವೇಳಿ ॥ ಈಗಲುಗಾಡಿತು ಹೋಗುವದಿದು ಸಮ । ನಾಗಿ ಎಳೆದು ಕೊಳ್ಳಿ ॥ ೨ ॥ ಹಿಂದಕೆ ಮುಂದಕೆ ಬಿಡದಂತೆರಡೂ ಸಂದಿಗೆ ಕೀಲಿಡಿರಿ ॥ ನಿಂದಿರು ತಿರೆಯಾನಂದದೆ ಹಿಗ್ಗದೆ। ಹೊಂದಿಸಿ ಹಿಡಿದಿಡಿರಿ ॥ ೩ ॥ ಎಚ್ಚರದಲಿ ಕುಳ್ಳಿರಿ ನಡೆಮಾಡದೆ । ಬಿಚ್ಚಿಕೊಳ್ಳದಂತೆ ॥ ಬಚ್ಚಿತವಾಗಿಯೆ ನಿಶ್ಚಲವಾಗಲು। ಸಚ್ಚಿತ್ಸುಖಮುಂತೆ ॥ ೪ ॥ ಲಯವಿಕ್ಷೇಪಕಷಾಯರಸೇಚ್ಛೆಯು। ನಯದೆ ಬಿಡಿಸಿಕೊಂಡು ॥ ಜಯಶಂಕರಪದವಿಯೊಳೇ ನಲಿಯಿರಿ। ಭಯವಿರದಿದ ಕಂಡು ॥ ೫ ॥ —(ಅ.ಗೀ)

ಟಿ॥ ನಡೆಮಾಡ—ವಿಮಾನ. ಹಿಂದಕೆ ಮುಂದಕೆ—ಮನಸ್ಸು ಹಿಂದಿರುಗಿ ಮಲಗುವದಕ್ಕೆ ಅಥವಾ ಮುಂದೆ ಹರಿಯುವದಕ್ಕೆ. ಮುಂತೆ—ಮುಂದೆ. ರಸೇಚ್ಛೆ—ಏಕಾಗ್ರತೆಯ ಆನಂದದಲ್ಲಿ ಬಯಕೆ.

ಇದರ ಸಾರಾಂಶವನ್ನೇ ಕವಿ ಚಮತ್ಕಾರವಾಗಿ ಹೇಳುವದೇನೆಂದರೆ—

ಶ್ಲೋ॥ ಆತ್ಮನೋ ಬನ್ಧನೇ ಹೇತುಂ ಚಿತ್ತಂ ಕ್ಷಿಣುಹಿ ಯತ್ನತಃ । ಚಿತ್ತಸ್ಯ ತಸ್ಯ ಕ್ಷಯತಃ ಕೇವಲಾ ಚಿತ್ಪ್ರಕಾಶತೇ ॥ —(ಸು.ಲಾ)

ಅ॥ ಆತ್ಮನಿಗೆ ಬಂಧದ ಕಾರಣವಾಗಿರುವಂಥ ಚಿತ್ತವನ್ನು ಪ್ರಯತ್ನಪೂರ್ವಕವಾಗಿ ಸೊರಗಿಸು. ಅದು ಸೊರಗಿದರೆ—ಎಂದರೆ ಒಂದು ತಕಾರ ನಾಶವಾದರೆ—ಅದಕ್ಕೆ ಆಧಾರವಾಗಿರುವ ಶುದ್ಧ ಚಿತ್ ತಾನೇ ಕಾಣುತ್ತದೆ. (ಚಿತ್ ಎಂದರೆ ಬ್ರಹ್ಮ)

ಆ ಬ್ರಹ್ಮಜ್ಞಾನವು 'ಯಥಾ ಮಾತೃಮಾನ್ಪಿತೃಮಾನಾಚಾರ್ಯವಾನ ಬ್ರೂಯಾತ್' ಎಂಬ ಬೃಹದಾರಣ್ಯಕಶ್ರುತಿಯಂತೆ ತಾಯಿ, ತಂದೆ, ಗುರು—ಇವರ ಶಿಕ್ಷಣೆಗೊಳಗಾದ ವರಿಗೆ ತಿಳಿಯುವದು. ಆದಕಾರಣ ಅದನ್ನಪೇಕ್ಷಿಸುವವರು 'ಪಿತೃದೇವೋ ಭವ' ಎಂಬ ಶ್ರುತಿಯಂತೆ ತಂದೆಯನ್ನು ದೇವರಂತೆ ಭಾವಿಸಬೇಕು.

ಶ್ಲೋ॥ ಪ್ರಾಪ್ಯಾಪಿ ಮಹತೀಂ ವೃದ್ಧಿಂ ವರ್ತೇತ ಪಿತುರಾಜ್ಞಯಾ।
ಪುತ್ರಸ್ಯ ಪಿತುರಾಜ್ಞಾ ಹಿ ಪರಮಂ ಭೂಷಣಂ ಸ್ಮೃತಮ್ ॥ (ಶು.ನೀ)

ಅ॥ ಎಷ್ಟು ಏಳಿಗೆಯನ್ನು ಪಡೆದರೂ ತಂದೆಯಪ್ಪಣೆಯಂತೆ ನಡೆಯಬೇಕು; ಮಗನಿಗೆ ತಂದೆಯಪ್ಪಣೆಯು ಹೆಚ್ಚಿನ ಅಲಂಕಾರವು.

ಆದ್ದರಿಂದ ಮನುಷ್ಯನು ಪಿತೃಭಕ್ತಿಯನ್ನು ಮಾಡಬೇಕು. ಅದರ ಫಲವಾಗಿ ದೈವಭಕ್ತಿಯು ಮುಂದೆ ಬರುವದು. ಆ ಭಕ್ತಿಯೊಂದು ಮೈಗೂಡಿದರೆ ಸಾಕು; ಮುಕ್ತಿಯಾಗಿಯೇ ಆಗುವದು.

ಶ್ಲೋ॥ ಆದಿಮಾ ಭಕ್ತಿರಿತ್ಯೇತತ್ಸರ್ವಸಜ್ಜನಸಮ್ಮತಮ್ । ಯದ್ಯನಾಶೋಚಿತಾ ಸೈವ ಮುಕ್ತಿರ್ಭವತಿ ನಿಶ್ಚಿತಮ್ ॥ —(ಸು.ಲಾ)

ಅ॥ (೧) ಭಕ್ತಿಯೆಂಬುವದು (ಆದಿಮಾ) ಶ್ರೇಷ್ಠವಾದದ್ದೆಂಬುದು ಎಲ್ಲಜನರಿಗೂ ಸಮ್ಮತವಾದದ್ದು. (ಯದಿ+ಅನಾಶೋಚಿತಾ) ಅದು ನಿಷ್ಕಾಮವಾದರೆ ಅದೇ ಮುಕ್ತಿಯಾಗುತ್ತದೆ. ನಿಶ್ಚಯ. ಅಥವಾ (೨) ಸರ್ವಸಜ್ಜನಸಮ್ಮತವಾದ ಭಕ್ತಿಯೆಂಬುವದು (ಆದಿಮಾ) ಮೊದಲ ಭಕಾರಕ್ಕೆ ಬದಲು ಮಕಾರವುಳ್ಳದ್ದಾಗಿ (ಯದಿ+ಅ+ನಾಶ+ಉ+ಚಿತಾ) ಅದರ ಅಕಾರವನ್ನು ಕಳೆದು ಉಕಾರವನ್ನು ಕೂಡಿಸಿದರೆ ಭಕ್ತಿಯೆಂಬುವದೇ ಮುಕ್ತಿಯಾಗುತ್ತದೆ.

ಆ ಭಕ್ತಿಯನ್ನು ಮಾಡುವದನ್ನು ಬಿಟ್ಟು ಶರೀರಾದಿಗಳನ್ನು ನಂಬುವದು ಹಾನಿಕರವೆಂದು ಭಗವದ್ಭಕ್ತರು ಹಾಡಿರುವದೇನೆಂದರೆ—

ಶಂಕರಾಭರಣ—ಅಟತಾಳ

ರಾಮರಾಮೆನ್ನಿರೊ। ನಮ್ಮ। ಸ್ವಾಮಿಯ ನಾಮವ ಮರೆಯದಿರೊ ॥ಪ॥ ತುಂಬಿದ ಪಟ್ಟಣಕೊಂಬತ್ತು ಬಾಗಿಲು । ಸಂಭ್ರಮದರಸುಗಳೈದು ಮಂದಿ ॥ ಡಂಭಕತನದಿಂದ ಕಾಯುವ ಜೀವವ। ನಂಬಿ ನೆಚ್ಚಿ ನೀವು ಕೆಡಬೇಡಿರೊ ॥ ೧ ॥ ನೆಲೆಯು ಇಲ್ಲದ ಕಾಯ। ಎಲುವಿನ ಹಂದರ । ಬಲಿದು ಸುತ್ತಿದ ಚರ್ಮದ ಹೊದಿಕೆ ॥ ಮಲಮೂತ್ರಂಗಳು। ಕೀವೂ ಕ್ರಿಮಿಗಳು। ಹೊಲಸುತೊಗಲ ಮೆಚ್ಚಿ ಕೆಡಬೇಡಿರೊ ॥ ೨ ॥ ಹರಬ್ರಹ್ಮಸುರರಿಂದ ವಂದಿತನಾಗಿಪ್ಪ। ಹರಿ ಸರ್ವೋತ್ತಮನೆಂದೆನ್ನಿರೋ ॥ ಪುರಂದರವಿಠಲನ ಚರಣವ ಭಜಿಸಿರೊ । ದುರಿತಭಯಗಳೆಲ್ಲ ಪರಿಹಾರವು ॥ ೩ ॥ —(ದಾ.)

ಇದರಂತೆ ದೇಹ ಮೊದಲಾದವುಗಳ ಅಭಿಮಾನವನ್ನು ಬಿಟ್ಟು ಭಗವದ್ಭಕ್ತಿಗೆ ಸಾಧನವಾದ ಪಿತೃಭಕ್ತಿಯನ್ನು ಲೋಕಕ್ಕೆ ತೋರಿಸಿದ ಶ್ರೀರಾಮನ ಚಿತ್ರಕೂಟವಾಸದ ಕಥೆಯು ಯಥಾಮತಿ ನಿರೂಪಣಮಾಡಲಾಗುತ್ತದೆ.

—*****—

# ಆಖ್ಯಾನ

-+***+-

ಶ್ರೀರಾಮಚಂದ್ರನೇ ಮೊದಲಾದವರ ಮದುವೆಯನ್ನು ಮಾಡಿಕೊಂಡು ಬಂದಮೇಲೆ ಒಂದು ದಿನ ತನ್ನ ಮುಪ್ಪನ್ನು ನೋಡಿಕೊಂಡ ದಶರಥನು ತೀವ್ರವೈರಾಗ್ಯವನ್ನು ಹೊಂದಿ ಸರ್ವವ್ಯವಹಾರ ವನ್ನೂ ತುಚ್ಛವಾಗಿ ತಿಳಿದು ಕೈಬಿಟ್ಟು—

ಕೀ॥ ರಾಮಚಂದ್ರನಿಗೆ ಪಟ್ಟವ ಕಟ್ಟಿ ವಿ। ರಾಮವ ಪಡೆಯಲು ದಶರಥನು॥ ಭೂಮಿಯೊಳೆಲ್ಲರ ಸಮ್ಮತಿಯಿಂದಲಿ। ನೇಮಿಸಿದನು ನಡೆಸುವೊಡದನು ॥

ಮಂತ್ರಿಗಳೆಲ್ಲರೂ ಅದರ ಉಪಕರಣಗಳನ್ನೊದಗಿಸುವದರಲ್ಲಿ ತೊಡಗಿದರು. ವಸಿಷ್ಠರು ರಾಮನ ಬಳಿಗೆ ಬಂದು ಹೇಳುತ್ತಾರೆ—

ಶ್ಲೋ॥ ರಾಜ್ಞಾ ದಶರಥೇನಾಹಂ ಪ್ರೇಷಿತೋಽಸ್ಮಿ ರಘೂದ್ವಹ । ತ್ವಾ-ಮಾಮನ್ತ್ರಯಿತುಂ ರಾಜ್ಯೇ ಶ್ವೋಽಭಿಷೇಕ್ಷ್ಯತಿ ರಾಘವ ॥ ಅದ್ಯ ತ್ವಂ ಸೀತಯಾ ಸಾರ್ಧಮುಪವಾಸಂ ಯಥಾವಿಧಿ । ಕೃತ್ವಾ ಶುಚಿರ್ಭೂಮಿಶಾಯೀ ಭವ ರಾಮ ಜಿತೇನ್ದ್ರಿಯಃ ॥ —(ಅ.ರಾ)

ಅ॥ ಹೆ, ರಾಮ, ದಶರಥನು ನಾಳೆ ನಿನಗೆ ಪಟ್ಟಾಭಿಷೇಕವನ್ನು ಮಾಡುತ್ತಾನೆ. ಅದನ್ನು ನಿನಗೆ ಹೇಳುವದಕ್ಕಾಗಿ ದಶರಥನು ನನ್ನನ್ನು ಕಳುಹಿಸಿದ್ದಾನೆ. ಇಂದು ನೀನು ಸೀತೆಯೊಡನೆ ಉಪವಾಸವಿದ್ದು ಶುಚಿಯಾಗಿ ಜಿತೇಂದ್ರಿಯನಾಗಿ ಭೂಮಿಯ ಮೇಲೆ ಮಲಗಬೇಕು.

ರಾಮಚಂದ್ರನ ಉತ್ತರ—

ಸಾ॥ ಗುರುಗಳೆ ದೇಶವ ತಿರುಗಿನೋಡಿದೆನು । ನೆರೆ ಕರ್ಮಾದಿ ಸುಖವಿಲ್ಲ ॥ ಪರಮಾತ್ಮಧ್ಯಾನದ ಹೊರತನು ಗೈ। ವರೆ ರುಚಿಸುವದಿಲ್ಲ ॥

ಅದಕ್ಕೆ ವಸಿಷ್ಠರ ಸಮಾಧಾನ—

ಷ॥ ಜನಪ ಕೇಳ್ಮಾಂಧಾತ ಭೂಮೀ। ಶನು ವಿರಕ್ತಿಯನೈದಿ ಹರಿದ । ರ್ಶನವ ಮಾಡಲು ಬಯಸಿ ಯಜ್ಞವ ಮಾಡೆ ಪೂರ್ವದಲಿ ॥ ಅನಿಮಿಷೇಂದ್ರನು ಬಂದು ಭೂಪ್ರಜೆ। ಯನು ಸಲಹುತಿಹ ನೃಪನು ಮಿಗೆ ಮು। ಕ್ತನು ದಿಟವಿದೆಂ ದರುಹಿ ಹೋದನು ತಥ್ಯವೀ ವಚನ ॥ —(ಕ.ಭಾರ)

ವಸಿಷ್ಠರು ಹೀಗೆ ರಾಮನನ್ನೊಪ್ಪಿಸಿ ಹೋಗುವದರಲ್ಲಿ ಪಟ್ಟಾಭಿಷೇಕದ ಸನ್ನಾಹ ನಡೆದಿದೆ.

ರ॥ ಆಯಿತಾ ಸಾಕೇತದಲಂಕಾರ। ಸೇರಿತು ಸಂಭಾರ ॥ ಪ ॥ ಪುರದೊಳೆಲ್ಲಿ ನೋಡಿದರೆ ಪತಾಕೆ। ಮೆರೆಯುತ್ತಿರ್ದವು ಗಗನವ ನೋಕೆ। ಚಿತ್ರವಿಚಿತ್ರದೊಳಿಹ ತೋರಣಗಳು । ಧಾತ್ರಿಯೊಳು ಮನೋಹರದೋರಣಗಳು । ಹೊಂದೊಡಿಗೆಗ ಳೊಂದಿದ ಕನ್ಯಕೆಯರ । ವೃಂದವು ಮನವನು ಸೆಳೆಯಲು ನೋಳ್ಪರ। ಚಿನ್ನ ರನ್ನದಾಭರಣದಿ ಶೋಭಿಸೆ । ಚೆನ್ನಹ ಷೋಡಶಗಜಗಳು ರಾಜಿಸೆ। ನಾಲ್ಕು ದಂತದೈರಾವತ ಮುಂದಿರೆ। ಶ್ರೀಕರತೀರ್ಥೋದಕಗಳ ತಂದಿರೆ। ಹುಲಿದೊಗಲು

ಗಳೊಂದೆಡೆಯೊಳಗೊಟ್ಟಿರೆ। ಬೆಳುಗೊಡೆಗುರೆ ಮುತ್ತುಗಳನು ಕಟ್ಟಿರೆ । ದಿವ್ಯ ಮಾಲ್ಯವಸ್ತ್ರಾದಿಗಳೊದಗಿರೆ। ದಿವ್ಯಾಭರಣಾವಳಿ ಬದಿಯೊಳಗಿರೆ । ಮುನಿಗಳೆಲ್ಲ ಕುಶಪಾಣಿಗಳಾಗಿರೆ । ಗಣಿಕಾತತಿ ಗಾಯನದೊಳು ಮುಳುಗಿರೆ । ನಾನಾವಿಧ ವಾದ್ಯವು ಭೋರ್ಗರೆದಿರೆ। ನಾನಾಯೋಧರು ಹೊರಗಡೆ ನೆರೆದಿರೆ । ದೇವಗೃಹಗಳೊಳು ಪೂಜೆಯು ನಡೆದಿರೆ। ಭೂವರತತಿ ಕಾಣಿಕೆಯೊಡನೈತರೆ ॥

ದಶರಥನ ಕಿರಿಯ ಹೆಂಡತಿಯಾದ ಕೈಕೇಯಿಯ ದಾಸಿಯಾದ ಮಂಥರೆಯು ಇದನ್ನೆಲ್ಲ ನೋಡಿ ಒಡತಿಗೆ ತಿಳಿಸಲು ಬಂದಾಗ ಅವರಿಬ್ಬರಿಗೂ ನಡೆದ ಸಂಭಾಷಣೆಯೇನೆಂದರೆ—

ಗೌಳ—ಆದಿತಾಳ

(ಮಂ) ಎಲೆ ಮೂಢಳೆ ಸೌಂದರ್ಯವುದವ ಬಿಡು । ಬಲುಭಯವಿಹುದೆ ನಿನಗೀಗ। ಕೈಕೆ ॥ (ಕೈ) ಒಲಿದಿರೆ ಪತಿ, ರಾಮನು ಮಗನಾಗಿರೆ। ಬಲುಭಯ ವುಂಟೆ? ಮಂದರೆ। ಪೇಳ್ ॥ ೧ ॥ (ಮಂ) ರಾಮಚಂದ್ರನಿಗೆ ಪಟ್ಟಗಟ್ಟುವನು। ನೇಮದಿಂದ ದೊರೆ ನಾಳೆ। ಕೈಕೆ ॥ (ಕೈ) ಆ ಮಹೋತ್ಸವಕ್ಕುಡುಗೆರೆ ನಿನಗಿದೆ। ಕಾಮಿಸಿ ಹೆದರಿದೆ ಯೇಕೆ? ॥ ಪೇಳ್ ॥ ೨ ॥ (ಮಂ) ರಾಮಚಂದ್ರನಿಗೆ ಪಟ್ಟ ಗಟ್ಟುವದು। ಕಾಮಿತವೆಂಬೆಯು ನೀನು?। ಕೈಕೆ ॥ (ಕೈ) ರಾಮನು ಕೌಸಲ್ಯೆಗೆ ಮಿಗಿಲೆನ್ನೊಳು ಪ್ರೇಮವ ತೋರುವದಿಲ್ಲವೆ? । ಪೇಳ್ ॥ ೩ ॥ (ಮಂ) ಮೂಢಳೆ ತಿಳಿಯದು ನಿನಗೀ ಯುಕ್ತಿಯು। ನಾಡೊಡೆಯನದೀ ಆಟ ॥ ಕೈಕೆ ॥ (ಕೈ) ನಾಡೊಡೆಯನು ಮೋಸವ ಮಾಡುವನೇ?। ಆಡಬಹುದೆ ಈ ಮಾತ? । ಪೇಳ್ ॥ ೪ ॥ (ಮಂ) ನಿನ್ನ ಮಗನನೀ ವೇಳೆಯೊಳಟ್ಟಿದ ಬಿನ್ನಣವರಿಯೆಯ ನೀನು? । ॥ ಕೈಕೆ ॥ (ಕೈ) ತನ್ನ ಮಾವನೆಡೆಗೈದಿದನಿರಲಿಂ.। ತಿನ್ನಿದರಿಂ ಭಯವೇನು? । ಪೇಳ್ ॥ ೫ ॥ (ಮಂ) ಇನ್ನು ನೀನು ಕೌಸಲ್ಯೆಯ ದಾಸಿಯು । ನಿನ್ನಣುಗನು ರಾಮದಾಸ। ಕೈಕೆ ॥ ಮಾನ್ಯತೆದೋರದೆ ಸವತಿಗೆ ಲೋಕದಿ । ಜೆನ್ನೆನಿಪುದು ಕೇಳ್ವಾವು । ಕೈಕೆ ॥ ೬ ॥

ಆಗ ಕೈಕೆ—

ದಂ॥ ಸತ್ಯವೇನೀ ಮಾತೀಗ ಮಾಡಲೇನು?। ಸತ್ತುಪೋಗಲ್ ಯುಕ್ತಿಯನು ಪೇಳು ನೀನು ॥ ಮತ್ತೆ ಪುತ್ರಂ ರಾಜೇಂದ್ರನಪ್ಪುದುಂಟೆ?। ಮುತ್ತಗಮನೇ ಪೇಳ್ನೀನೆ ತಕ್ಕ ಬಂಟೆ ॥

ಎನಲು ಮಂದರೆ—

ಕೀ॥ ಹಿಂದೆ ನೀನು ಪಡೆದೆರಡು ವರಂಗಳೊ । ಳೊಂದು ಭರತನಿಗೆ ರಾಜ್ಯವನು ॥ ಒಂದು ರಾಮನಿಗೆ ವನದ ವಾಸವನು। ತಂದು ಕೊಡಲಿ ತಳೆ ಕೋಪವನು ॥

ಎಂದು ಹೇಳಲು ಆಗ ಕೈಕೆ ಕೋಪಾಗಾರವನ್ನು ಪ್ರವೇಶಮಾಡಿ—

ಷ|| ಸಡಿಲಿಸಿದಳು ದುಕೂಲವನು, ಹೊಂ। ದೊಡವುಗಳ; ಮಲಿನಾಂಬರವನಳ । ವಡಿಸಿದಳು; ಬಿಚ್ಚಿದಳು ಸೌಗಂಧಿಕದ ಸಿರಿಮುಡಿಯ; || ಝುಡಿತೆಯಲಿ ನೆಲವಾಸಿನಲಿ ಸೈ।ಗೆಡೆದು ಸುಯ್ಯುತ ಶೂನ್ಯಹರುಷದ । ತೊಡಕಿನಲಿ ತಾಂಬೂಲವನು ತೊರೆದಿರ್ದಳಾ ಕೈಕೆ || —(ತೊ.ರಾ)

ಟಿ|| ಝುಡಿತೆಯಲಿ—ಅವಸರದಿಂದ. ನೆಲವಾಸಿನಲಿ—ನೆಲವನ್ನೆ ಹಾಸಿಗೆಯಾಗಿ ಮಾಡಿಕೊಂಡು. ಸೈಗೆಡೆದು—ನಿಟ್ಟುಸಿರಿಡುತ್ತ ಬಿದ್ದು.

ಈ ಸಂದರ್ಭದಲ್ಲಿ ನೆನಪಿಡಬೇಕಾದ ನೀತಿನಿಯಮವೇನೆಂದರೆ—

ಶ್ಲೋ|| ಧೀರೋಽತ್ಯನ್ತದಯಾನ್ವಿತೋಽಪಿ ಸುಗುಣಾಚಾರಾನ್ವಿತೋ ವಾಽಥವಾ । ನೀತಿಜ್ಞೋ ವಿಧಿವಾದದೇಶಿಕಪರೋ ವಿದ್ಯಾವಿವೇಕೋಽಥವಾ || ದುಷ್ಟಾನಾಮತಿಪಾಪಭಾವಿತಧಿಯಾಂ ಸಙ್ಗಂ ಸದಾ ಚೇದ್ಭಜೇ । ತ್ತದ್ಬುದ್ಧ್ಯಾ ಪರಿಭಾವಿತೋ ವ್ರಜತಿ ತತ್ಸಾಮ್ಯಂ ಕ್ರಮೇಣ ಸ್ಫುಟಮ್ || —(ಅ.ರಾ.)

ಅ|| ಧೀರನಾದರೂ ಬಹಳ ದಯಾಳುವಾದರೂ ಒಳ್ಳೇಗುಣಗಳಿಂದಲೂ ಆಚಾರದಿಂದಲೂ ಕೂಡಿದ್ದರೂ ಅಥವಾ ಅದಕ್ಕೆ ವಿರುದ್ಧವಾಗಿದ್ದರೂ ನೀತಿಯನ್ನು ತಿಳಿದವನಾಗಿದ್ದರೂ ವಿಧಿಗಳನ್ನೆಲ್ಲ ಇತರರಿಗೆ ತಿಳಿಸತಕ್ಕವನಾಗಿದ್ದರೂ ವಿದ್ಯೆಯಿಂದಲೂ ವಿವೇಕದಿಂದಲೂ ಕೂಡಿದ್ದರೂ ಅಥವಾ ಅವುಗಳ ಗಂಧವಿಲ್ಲದಿದ್ದರೂ ಬಹಳ ಪಾಪವನ್ನು ಯೋಚಿಸುವ ಬುದ್ಧಿಯುಳ್ಳ ದುಷ್ಟರೊಡನೆ ಯಾವಾಗಲೂ ಸಹವಾಸವನ್ನು ಮಾಡಿದರೆ ಅವನು ಅವರ ಬುದ್ಧಿಯ ಬೀಳುವಿಗೆ ಬೆರಗಾಗಿ ಮೆಲ್ಲಮೆಲ್ಲಗೆ ಅವರಂತೆಯೇ ಆಗಿಬಿಡುತ್ತಾನೆ.

ಅಷ್ಟರಲ್ಲಿ ದಶರಥನು ಬಂದು ಕೈಕೇಯಿಯನ್ನು ಮಾತಾಡಿಸುತ್ತಾನೆ—

ಹಿಂದುಸ್ಥಾನಿ ಕಾಪಿ—ಏಕತಾಳ

ಏನು ಕಾರಣವಿದು? । ಮಾನಿನೀಮಣಿ, ಪೇಳು || ದೀನತೆ ಏಕೆ ಎನ್ನ । ಪ್ರಾಣಸಂಜೀವಿನಿ || ಪ || ನೆಲವೆ ಹಾಸಿಗೆ ಏಕೆ? । ಮಲಿನವಸ್ತ್ರವಿದೇಕೆ? || ಪೊಳೆವಲಂಕಾರವ। ತೊಲಗಿಸಿರ್ದಪೆಯೇಕೆ? || ೧ || ಯಾರೇನ ಮಾಡಿದರು? । ಯಾರೇನನೆಂದರು? || ಯಾರೇನ ತಪ್ಪಿದರು?। ಯಾರಿಂದಲೀ ವ್ಯಥೆ? || ೨ || ಏನು ನಿನ್ನಭಿಮತ? । ನಾನದ ಗೈವೆನು || ಈ ನಿನ್ನವಸ್ಥೆಯ । ನಾ ನೋಡಲಾರೆನು || ೩ || ಯಾರನು ಶಿಕ್ಷಿಸಲಿ? । ಯಾರನು ರಕ್ಷಿಸಲಿ? || ಯಾರನುಪೇಕ್ಷಿಸಲಿ? । ನಾರೀಮಣಿಯೆ ಈಗ || ೪ || ರಾಮನ ಮೇಲಾಣೆ । ಕಾಮಿನಿ, ನಡೆಸುವೆ || ಕಾಮಿತವನು ಪೇಳು। ನೇಮವ ತಪ್ಪೆನು || ೫ ||

ಆಗ ಕೈಕೆ ಹೇಳುತ್ತಾಳೆ—

ಕಿ|| ಎರಡು ವರವ ನೀ ಕೊಟ್ಟಿಹೆ ಪೂರ್ವದಿ । ಭರತಗೊಂದರಿಂ ದೇಶವನು|| ಇರದೊಪ್ಪಿಸುತಿನ್ನೊಂದ್ದರಿಂದೆ ಕೊಡು। ನೆರೆ ರಾಮಗೆ ವನವಾಸವನು ||

ಷ|| ಬೆಳಕುಹರಿಯಲು ದಂಡಕಾವನ। ದಿಳೆಗೆ ತೆರಳಲಿ ರಾಮನಲ್ಲಿಯೆ। ತೊಳಲುತಲಿ ಮುನಿವೇಷದಲಿ ಹದಿನಾಲ್ಕುವತ್ಸರವು||ಕಳೆದು ಬಂದರೆ ಬರಲಿ ರಾಜ್ಯಕೆ;।

ಸಲೆ ವನದೊಳೇ ಇರಲಿ ಮೇಣೀ । ಗಳಿಗೆಯೊಳಗವ ಹೊರಪದಿರೆ ನಾ ಬಿಡುವೆ ಪ್ರಾಣಗಳ ॥

ಈ ನಿಷ್ಠುರದ ಮಾತಿನ ಪರಿಣಾಮವೇನಾಯಿತೆಂದರೆ—

ಶ್ಲೋ॥ ಶ್ರುತ್ವೈತದ್ದಾರುಣಂ ವಾಕ್ಯಂ ಕೈಕೇಯ್ಯಾ ರೋಮಹರ್ಷಣಮ್ । ನಿಪಪಾತ ಮಹೀಪಾಲೋ ವಜ್ರಾಹತ ಇವಾಚಲಃ ॥ (ಅ.ರಾ)

ಅ॥ ಕೈಕೇಯಿ ಹೇಳಿದ ಈ ಸಂತಾಪಕರವಾದ ಮಾತನ್ನು ಕೇಳಿ ದಶರಥನು ವಜ್ರದ ಪೆಟ್ಟಿನಿಂದ ಬೀಳುವ ಪರ್ವತದಂತೆ ಬಿದ್ದನು.

ಅವನು ಚೇತರಿಸಿಕೊಂಡು ಕೈಕೇಯಿಗೆ ಹೇಳುತ್ತಾನೆ—

ಹಿಂದೂಸ್ಥಾನಿ ಭೈರವಿ—ಅಟತಾಳ.

ಎಲೆ ಕೇಕಯನಂದಿನಿ, ಪೇಳಿದನು । ಸಲೆ ರಾಮನದೇನನು ಮಾಡಿದನು? ॥ ಪ ॥ ಸುಗುಣಾನ್ವಿತನೆಂದವನಂ ನೀನೆ । ಒಗೆಒಗೆಯೊಳು ನೀಂ ಹೊಗಳಿದ ಜಾಣೆ ॥ ೧ ॥ ಭರತಂ ದೊರೆಯಾಗಿರಲಿನ್ನೇನು; । ನೆರೆ ರಾಮನು ಇಲ್ಲಿರೆ ತಪ್ಪೇನು? ॥ ೨ ॥ ಅಲ್ಲದೊಡೀಗಲೆ ರಾಮನ ಬಡಲು । ನಿಲ್ಲದೆ ವನಕ್ಕೈದಲು ನಾ ಮೊದಲು ॥ ೩ ॥ ಇದಕನುಮತಿಸುತೆ ರಾಮನ ವನವಾ।ಸವ ವರವನು ತಿರುಗಿಸಿ ಕೊಡು ಮುದವ ॥ ೪ ॥

ಆಗ ಕೈಕೆ ಹೇಳುತ್ತಾಳೆ—

ಕಂ॥ ಆಡಿದ ನುಡಿಯಂ ನಡೆಸ।ಲ್ಬೇಡಿದ ವಿಪ್ರಂಗೆ ಕಣ್ಗಳಿತ್ತನಲರ್ಕಂ; ॥ ನೀಡಿದನೊಡಲಂ ಪಕ್ಕಿಗೆ । ನಾಡೊಡೆಯುಂ ಶೈಬ್ಯನಿಂತು ನೀನಾಡುವರೇ? ॥ —(ರಾ.ನಾ.)

ಅಥವಾ ನಾನಿನ್ನೇನು ಹೇಳಲಿ?

ಸಾ॥ ಆಡಿದ ಮಾತಿಗೆ ತಪ್ಪುವ ನೀನೋ।ಲಾಡುವೆ ನರಕದೆ ಬೇಗ ॥ ಮಾಡುತೆ ವಿಷಪಾನವ ನಿನ್ನಿಂ ಹೋ।ಗಾಡುವೆ ಜನ್ಮವ ನೀಗ ॥

ಶ್ಲೋ॥ ಇತ್ಯುಕ್ತಃ ಪ್ರಿಯಯಾ ದೀನೋ ಮಗ್ನೋ ದುಃಖಾರ್ಣವೇ ನೃಪಃ। ಮೂರ್ಛಿತಃ ಪತಿತೋ ಭೂಮೌ ವಿಸಂಜ್ಞೋ ಮೃತಕೋ ಯಥಾ ॥ —(ಅ.ರಾ.)

ಅ॥ ಹೆಂಡತಿಯು ಈ ಮಾತನ್ನು ಕೇಳಿ ದೀನನಾದ ದಶರಥನು ದುಃಖವೆಂಬ ಸಮುದ್ರದಲ್ಲಿ ಮುಳುಗಿ ಮೂರ್ಛಿತನಾಗಿ ಎಚ್ಚರವಿಲ್ಲದೆ ಸತ್ತವನಂತೆ ನೆಲದ ಮೇಲೆ ಬಿದ್ದನು.

ಬೆಳಗಾಗುತ್ತಲೆ ರಾಜನನ್ನು ಕಾಣಲು ಮಂತ್ರಿಯಾದ ಸುಮಂತ್ರನು ಬಂದು ಅಲ್ಲಿನ ಸ್ಥಿತಿಗೆ ಬೆರಗಾಗಿ ಕೇಳಿದಾಗ ಕೈಕೆ ಹೇಳಿದ್ದೇನೆಂದರೆ—

ದ್ವಿ॥ ಅರಸನಿರುಳೆಲ್ಲಾ 'ರಾಮ, ರಾಮ' ಎಂದು । ಕರೆಯುತಿರ್ದಂ ತಾಂ ಸುಮ್ಮನಿರ್ದನಿಂದು ॥ ಭರದಿ ಕರೆಯಿರಾಗಳ್ ರಾಮಚಂದ್ರನನ್ನು। ಪರಿಯು ತಿದ್ದಲ್ಕೀಗಪ್ಪುದೆಲ್ಲವನ್ನು ॥

ಈ ಮಾತನ್ನು ಕೇಳಿದ ಸುಮಂತ್ರನು ರಾಜಾಜ್ಞೆಯನ್ನು ನಿರೀಕ್ಷಿಸಲು ಅದನ್ನು ಕಂಡು ದಶರಥನು ಸುಮಂತ್ರನನ್ನು ಕುರಿತು—

ಷ॥ ಅಶುಭದಾಡುಂಬೊಲನು, ಕುಹಕದ । ವಿಸರ, ಚಿಂತೆಯ ಸಂತೆ, ದುಃಖದ।ವಸತಿ, ದುಗುಡದ ಬೀಡು, ದುಮ್ಮಾನದ ಜನಸ್ಥಾನ, ॥ ಅಸುಖ ದಾರವೆ, ಭೇದ ಪುದಿದಾ। ಯಸೆದ ಜಾಳಿಗೆ, ಜವನ ಮನೆ, ರಾಕ್ಕಸಿಯ ಮಠ ವಾಯ್ತಿಂದು ಭವನವಿದೆಂದನಾ ಭೂಪ ॥ —(ತೊ.ರಾ)

ಟಿ॥ ಆಡುಂಬೊಲನು—ಆಡುವ ಹೊಲ. ವಿಸರ—ಸಮೂಹ. ಆರವೆ—ಕೈತೋಟ. ಜಾಳಿಗೆ—ಬಲೆ

ಶ್ಲೋ॥ ಸುಮಂತ್ರ, ರಾಮಂ ದ್ರಕ್ಷ್ಯಾಮಿ ಶೀಘ್ರಮಾನಯ ಸುನ್ದರಮ್॥ —(ಅ.ರಾ)

ಅ॥ ಸುಮಂತ್ರ, ಸುಂದರನಾದ ರಾಮನನ್ನು ನೋಡಬೇಕು; ಬೇಗ ಕರೆದುಕೊಂಡುಬಾ.

ಎನಲು ಸುಮಂತ್ರನು ರಾಮನನ್ನು ಕರೆದುಕೊಂಡುಬಂದನು.

ಕೀ॥ ಮಗನು ಬಂದು ಪದಕೆರಗುತ್ತಲೆ ಭುಜ।ಯುಗಳವನಗಲಿಸಿ ನೃಪ ನಾಗ॥ ಬಿಗಿದಪ್ಪುವ ಮುನ್ನವೆ ದುಃಖದಿ ಭೂ।ಮಿಗೆ ಜಿದ್ದನು ಧೊಪ್ಪನೆ ಬೇಗ॥

ಆಗ ಸ್ತ್ರೀಯರು ಅಳಲಾರಂಭಿಸಿದರು. ಅದನ್ನು ಕೇಳಿ ವಸಿಷ್ಠರೂ ಬಂದರು. ರಾಮನು ಇದರ ಕಾರಣವೇನೆಂದು ಕೇಳಿದ್ದಕ್ಕೆ ಕೈಕೆ ಹೇಳುತ್ತಾಳೆ—

ಧನ್ಯಾಸಿ—ಆದಿತಾಳ

ನಿನ್ನಿಂದಲೆ ದೊರೆ ಬನ್ನಬಡುತಲಿಹು।ದನ್ನು ಪೇಳಲೇನು ॥ ಪ ॥ ಇನ್ನ ದನವನೇ ನಿನ್ನೊಳು ಹೇಳಲು। ತನ್ನೊಳು ತಾನೇ ಮುನ್ನ ನಾಚುತಿಹ ॥ಅ.ಪ॥ ಹಿಂದೆ ನೃಪನು ಕೊಟ್ಟಿರಡು ವರಂಗಳ। ನಿಂದು ನಾ ಕೇಳಿದೆನು ॥ ಒಂಧಕವೆನಿಸಿದ ವವು ನಿನ್ನಯ ಸಂ।ಬಂಧಿಗಳಾದುದರಿಂ ॥ ೧ ॥ ಆಡಿದನೊಂದನು ಮಾಡೆ ಹಿಂದೆ ಗೆವನು।ರೂಢಿಯೊಳಗೆ ನೃಪನು ॥ ಬೇಡಿಕೆಯದ ಕೈಗೂಡಿಸೆ ನಿನ್ನೊಡ।ನಾಡೆ ಹಿಂದೆಗೆವನು ॥ ೨ ॥

ಆಗ ರಾಮನ ಮಾತು —

ಶ್ಲೋ॥ ಭಕ್ಷಯೇಯಂ ವಿಷಂ ತೀಕ್ಷ್ಣಂ ಪತೇಯಮಪಿ ಚಾರ್ಣವೇ। ನಿಯುಕ್ತೋ ಗುರುಣಾ ಪಿತ್ರಾ ನೃಪೇಣ ಚ ಹಿತೇನ ಚ ॥ —(ಶ್ರೀ.ರಾ)

ಅ॥ ಗುರುವೂ ರಾಜನೂ ಹಿತನೂ ಆದ ತಂದೆಯ ಆಜ್ಞೆಯಂತೆ ತೀಕ್ಷ್ಣವಾದ ವಿಷವನ್ನಾದರೂ ಕುಡಿಯುತ್ತೇನೆ; ಸಮುದ್ರದಲ್ಲಾದರೂ ಬೀಳುತ್ತೇನೆ.

ಶ್ಲೋ॥ ಅನಾಜ್ಞಪ್ತೋಽಪಿ ಕುರುತೇ ಪಿತುಃ ಕಾರ್ಯಂ ಸ ಉತ್ತಮಃ। ಉಕ್ತಃ ಕರೋತಿ ಯಃ ಪುತ್ರಃ ಸ ಮಧ್ಯಮ ಉದಾಹೃತಃ। ಉಕ್ತೋಽಪಿ ಕುರುತೇ ನೈವ ಸ ಪುತ್ರೋ ಮಲ ಉಚ್ಯತೇ ॥ —(ಅ.ರಾ)

ಅ॥ ತಂದೆಯ ಕಾರ್ಯವನ್ನು ಹೇಳಿಸಿಕೊಳ್ಳದೆ ಮಾಡುವವನು ಉತ್ತಮನು; ಹೇಳಿಸಿಕೊಂಡು ಮಾಡುವವನು ಮಧ್ಯಮನು; ಹೇಳಿದರೂ ಮಾಡದವನು ಮಲವೇ ಸರಿ.

ಆದ್ದರಿಂದ ತಂದೆಯ ಅಭಿಪ್ರಾಯವೇನೆನ್ನಲು ಕೈಕೆ—

✓ ಕೀ॥ ಭರತಗೆ ದೊರೆತನವಾಗಲಿ ವನದೊಳ। ಗಿರು ನೀಂ ವತ್ಸರ ಹದಿನಾಲ್ಕು॥ ನರಪತಿಗೀಪರಿ ತೋರುವ ದುಗುಡವ। ಹರಿಸುವೊಡಿಷ್ಟಾಗಲು ಬೇಕು॥

ಎಂದದ್ದಕ್ಕೆ ರಾಮನು ತನ್ನ ಸಂತೋಷವನ್ನು ತೋರಿಸುತ್ತಾನೆ—

ಶ್ಲೋ॥ ವನಭುವಿ ತನುಮಾತ್ರತ್ರಾಣಮಾಜ್ಞಾಪಿತಂ ಮೇ । ಸಕಲಭುವನಭಾರಃ ಸ್ಥಾಪಿತೋ ವತ್ಸಮೂರ್ಧ್ನಿ॥ ತದಿಹ ಸುಕರತಾಯಾಮಾವಯೋಸ್ತರ್ಕಿತಾಯಾಮ್। ಮಯಿ ಪತತಿ ಗರೀಯಾನಮ್ಬ, ತೇ ಪಕ್ಷಪಾತಃ॥-(ರಾ.ಚಂ)

ಅ॥ ನನಗೆ ಅರಣ್ಯದಲ್ಲಿ ವಾಸಮಾತ್ರವನ್ನು ಆಜ್ಞಾಪಿಸಿದೆ. ಮಗುವಾದ ಭರತನ ತಲೆಯ ಮೇಲೆ ಜಗತ್ತಿನ ಭಾರವನ್ನೆಲ್ಲ ಇಟ್ಟೆ. ಇವೆರಡರ ತೂಕವನ್ನು ನೋಡಿದರೆ ಹೆ, ತಾಯಿ, ನಿನಗೆ ನನ್ನ ಮೇಲೆ ಹೆಚ್ಚು ಪಕ್ಷಪಾತವಿದೆ.

ಷ॥ ಭರತನಾಳಲಿ ರಾಜ್ಯವನು; ನೀವ್ । ನರಪತಿಯ ಚರಣಾರವಿಂದದ। ಪರಮಸೇವಾನಿರತರಾಗಿರಿ; ನಿಮ್ಮನುಜ್ಞೆಯಲಿ ॥ ಚರಿಸುವೆನು ವನವಾಸವನು; ಗೋ। ಚರಿಸುವೆನು ನೀವ್ನುಡಿದ ವರ್ಷದ । ಪರಿಗಣದ ಪರಿಯಂತವೆಂದನು ಕೈಕೆಗಾ ರಾಮ ॥ —(ತೊ.ರಾ)

ಕೈಕೇಯಿಗೆ ಇಷ್ಟು ಹೇಳಿ ರಾಮನು ತಂದೆಯನ್ನು ಕುರಿತು ಹೇಳುತ್ತಾನೆ—

ಶ್ಲೋ॥ ಪಿತಾ ಹಿ ದೈವತಂ ತಾತ, ದೇವತಾನಾಮಪಿ ಸ್ಮೃತಮ್ । ತಸ್ಮಾದ್ದೈವತಮಿತ್ಯೇವ ಕರಿಷ್ಯೇ ವಚನಂ ತವ ॥ —(ಶ್ರೀ.ರಾ)

ಅ॥ ದೇವತೆಗಳಿಗೂ ಕೂಡ ತಂದೆಯು ದೇವರೆಂದು ಸ್ಮೃತಿ ಇದೆ. ಆದ್ದರಿಂದ ದೇವರ ಆಜ್ಞೆಯೆಂದು ನಿನ್ನ ಮಾತನ್ನು ನಡೆಸುತ್ತೇನೆ.

ಎಂದು ಹೇಳಿದಾಗ ದಶರಥನು ಚೇತರಿಸಿಕೊಂಡು ರಾಮನಿಗೆ ಹೇಳುವ ಮಾತು—

ಶ್ಲೋ॥ ಸ್ತ್ರೀಜಿತಂ ಭ್ರಾನ್ತಹೃದಯಮುನ್ಮಾರ್ಗಪರಿವರ್ತಿನಮ್॥ ನಿಗೃಹ್ಯ ಮಾಂ ಗೃಹಾಣೇದಂ ರಾಜ್ಯಂ ಪಾಪಂ ನ ತದ್ಭವೇತ್ ॥ —(ಅ.ರಾ)

ಅ॥ ಹೆಂಗಸಿಗೆ ಸೋತು ಹುಚ್ಚನಾಗಿ ದಾರಿತಪ್ಪಿ ನಡೆಯುವ ನನ್ನನ್ನು ನಿಗ್ರಹಿಸಿ ಈ ರಾಜ್ಯವನ್ನು ತೆಗೆದುಕೊ; ಇದರಿಂದ ಪಾಪವಿಲ್ಲ.

ಎಂದು ದುಃಖಿಸಲು ರಾಮನು ಸಂತಯಿಸುತ್ತಾನೆ—

ಶ್ಲೋ॥ ಕಿಮತ್ರ ದುಃಖೇನ ವಿಭೋ, ರಾಜ್ಯಂ ಶಾಸತು ಮೇಽನುಜಃ ॥ ಅಹಂ ಪ್ರತಿಜ್ಞಾಂ ನಿಸ್ತೀರ್ಯ ಪುನರ್ಯಾಸ್ಯಾಮಿ ತೇ ಪುರಮ್ ॥ —(ಅ.ರಾ)

ಅ॥ ದೇವ, ಈಗ ದುಃಖದಿಂದೇನು ಫಲ? ನನ್ನ ತಮ್ಮನು ರಾಜ್ಯವನ್ನಾಳಲಿ; ನಾನು ನಿನ್ನ ಮಾತನ್ನು ನಡೆಸಿ ಮತ್ತೆ ನಿನ್ನ ಪಟ್ಟಣಕ್ಕೆ ಬರುತ್ತೇನೆ.

ಎಂದು ಹೇಳಿ ಕೌಸಲ್ಯೆಯ ಮನೆಗೆ ಹೊರಡಲು ದಶರಥನು ದುಃಖಿಸುತ್ತಾನೆ—

ನಾದರಾಮಕ್ರಿಯೆ—ರೂಪಕ

ರಾಮಚಂದ್ರ, ಹೋಗುವೆಯಾ? । ರಾಮಭದ್ರ, ಹೋಗುವೆಯು? ॥ ರಾಮ ರಾಜ, ಹೋಗುವೆಯು? । ರಾಮ, ರಾಮ, ಹೋಗುವೆಯ? ॥ ಪ ॥ ನನ್ನ ಬಿಟ್ಟು ಹೋಗುವೆಯು? । ಇನ್ನು ನನ್ನ ನೀಗುವೆಯು? ॥ ಬನ್ನವನ್ನು ಕೊಡುವೆಯು? । ಚೆಣ್ಣನೆ ನೀ ಪಿಡುವೆಯು? ॥ ೧ ॥ ಕಾಡಿನಲ್ಲಿ ನಡೆವೆಯೆಂತು? । ಕೇಡಿದೋ ನನಗೆ ಬಂತು ॥ ಖೋಡಿ ಕೈಕೆಯಿಚ್ಛೆಸಂತು । ನೋಡಲಾರೆ ನಿನ್ನನಿಂತು ॥ ೨ ॥

ಇತ್ತ ರಾಮನು ಕೌಸಲ್ಯೆಯ ಮನೆಗೆ ಬಂದಾಗ—

ಷ॥ ಮಗನ ಹಿತಕೆಂದಾಕೆ ನಿಜಯೋ । ಗದೊಳಿರಲು 'ರಾಮೋಹ'ವೆಂದಾ । ಮಗನು ವಂದಿಸಲೆಚ್ಚರಂಗೊಂಡಾಗ ಸಂಭ್ರಮದಿ ॥ ಮಗನೆ, ಹಸಿದಿಹೆಯೂಟ ಕೇಳಿನೆ । ಬಗೆಯ ಸಮಯವಿದಲ್ಲ ತಾಯೇ, । ವಿಗೆ ಹರಸು ವನವಾಸಕ್ಕೈದುವೆನೆಂದನಾ ರಾಮ ॥

ಟಿ॥ ರಾಮೋಹಂ—ನಾನು ರಾಮನು. ನಿಜಯೋಗದೊಳು—ತನ್ನ ಧ್ಯಾನದಲ್ಲಿ.

ಈ ಸೂತ್ರವಾಕ್ಯಕ್ಕೆ ಗಾಬರಿಗೊಂಡ ತಾಯ ಮುಂದೆ ರಾಮನು ನಡೆದ ಸಂಗತಿಯನ್ನೆಲ್ಲ ವಿವರಿಸಿದಾಗ ಆಕೆ ಹೇಳುತ್ತಾಳೆ—

ಕಾಂಬೋದಿ—ಅಟತಾಳ

ಕೇಳಬಾರದೆ ನೀ । ನನ್ನಯ ಮಾತ ॥ ಬಾಲನೆ ನನ್ನಯ । ಗೋಳನಾಲಿಸು ನೀ ॥ ಪ ॥ ನಿನ್ನ ನಾನಗಲಿ । ಇನ್ನಿರಲಾರೆನು ॥ ಎನ್ನೊಡನಾ ವನ । ವನ್ನು ಸೇರಿನ್ನು ॥ ೧ ॥ ದೊರೆತನವಿರಲಿ । ಭರತನಿಗಿನ್ನು ॥ ಪುರದೊಳು ನೀನಿರೆ । ನೆರೆ ಹಾನಿ ಯೇನು? ॥ ೨ ॥ ತರಳನೆ ನೀನಾ । ಅರಸಿ ಕೈಕೆಗೆ ॥ ವಿರಚಿಸಿದಪರಾಧ । ದಿರವ ನಾ ಕಾಣೆ ॥ ೩ ॥ ಪಿತನಂತೆ ಮಾತೆ । ಸುತರಿಗೆ ದೈವ ॥ ಸುತನೆ ನನ್ನಾಜ್ಞೆಯ । ಪತಿ ಕರಿಸುವದೈ ॥ ೪ ॥ ನನ್ನನು ವಿಾರಿ । ಇನ್ನು ನೀ ಪೋಗಲು ॥ ಮುನ್ನ ನಾ ಸಾಯುವೆ । ಚೆಣ್ಣನೆ ಇದು ನಿಜ ॥ ೫ ॥

ಆಗ ಲಕ್ಷ್ಮಣನು ಹೇಳುತ್ತಾನೆ—

✓ಕೀ॥ ಹೆಂಗುಸಿಗೊಳಗಾದುನ್ಮತ್ತನ ನಾ । ಭಂಗಿಸಿ ಭರತನ ಹಿಂದಿಡುವೆ ॥ ಮಂಗಳಾತ್ಮ, ನಮ್ಮತಿಸಭಿಷೇಕಕೆ । ಹಿಂಗದೆ ನಿನ್ನನು ಮುಂದಿಡುವೆ ॥

ಆಗ ರಾಮನು ತಮ್ಮನಿಗೆ ಹೇಳುವ ಸಮಾಧಾನ—

ಶಂಕರಾಭರಣ—ಅಟತಾಳ

ತರವಲ್ಲ । ಈ ಕೋಪವು । ತರವಲ್ಲ ॥ ಪ ॥ ತರವಲ್ಲವೀ ಕೋಪ । ಹಿರಿಯರ ಮೇಲೆ ನಿ ॥ ಘೋರವಾಡಲು ಘೋರ । ನರಕ ತಪ್ಪದು ತಮ್ಮ ॥ ಅ.ಪ ॥ ತೋರುತ್ತಲಿರುವ ಲೋಕಗಳು । ಈಗ । ಸೇರುವವೆಂಬ ರಾಜ್ಯಗಳು । ಇದ । ಸೇರಿ ಭೋಗಿಪ ದೇಹಾದಿಗಳು ॥ ಬರಿ । ತೋರಿಕೆ ಮಾತ್ರವಲ್ಲದೆ ಸತ್ಯವಾದರೆ । ಧೀರ

ನಿನ್ನಯ ಸಾಹಸವು ಸಾರ್ಥಕವಾಯ್ತು ॥೧॥ ಧನಧಾನ್ಯಭೋಗಭಾಗ್ಯಗಳು । ದೊಡ್ಡ । ಜನಪದ ರಾಜ್ಯಕೋಶಗಳು । ನೋಡೆ । ವನಿತಾದಿ ಸಕಲಬಂಧುಗಳು ॥ ಕೂಡೆ । ಕ್ಷಣಭಂಗುರವಲ್ಲದಣುಮಾತ್ರವಿಹುವಲ್ಲ । ಘನತರಸತ್ಯವೊಂದನೆ ಸಾಧಿಸಬೇಕು ॥ ೨ ॥ ಕೋಪದಿಂದಲಿ ಸಂತಾಪಗಳು । ಈ । ಕೋಪದಿಂ ಸರ್ವಬಂಧಗಳು । ದುಷ್ಟ । ಕೋಪದಿಂ ಧರ್ಮನಾಶಗಳು ॥ ತಮ್ಮ । ಕೋಪವೆ ಯಮನು, ವೈತರಣಿಯೆಂಬುದೆ ತೃಷ್ಣೆ । ಈಪರಿಯರಿತು ನಿಷ್ಕೋಪನಾಗಿರು ಕಂಡ್ಯ ॥ ೩ ॥ ಅನುದಿನ ಸ್ವಕುಲಧರ್ಮಗಳ । ಬಹು । ವಿನಯದಿ ಹಿರಿಯರಾಜ್ಞೆಗಳ । ವಿಶಾಲ । ದನುಸರಿಸುತಲೆ ಕರ್ಮಗಳ ॥ ಇಂತು । ಘನತರಕೀರ್ತಿಸದ್ಗತಿಯ ಸಾಧಿಸುತಿರ್ಪ । ಮನುಜಸುತ್ತಮನೆಂದು । ಜನರು ಪೇಳುವರಯ್ಯ ॥ ೪ ॥ —(ದಾ)

ಇದಾದ ಮೇಲೆ ತಮ್ಮ ವಂಶದವರು ಮಾತಿಗೆ ತಪ್ಪಿದವರೆಂಬ ಅಪವಾದಕ್ಕೆ ಅವಕಾಶ ಕೊಡಬಾರದೆಂದು ರಾಮನು ತಾಯಿಗೆ ಹೇಳಿದ್ದೇನೆಂದರೆ—

ರಾಗ—ತಾಳ

ಲೋಕಾಪವಾದಕ್ಕೆ ಅಂಜಿ ನಡೆವುದು ವಿವೇಕ ಕೇಳೆಚ್ಚರಿಕೆ ॥ ನಾಕೇಶನಾದರೂ ಬಿಡದಪವಾದ ಪರಾಕು ಕೇಳೆಚ್ಚರಿಕೆ ॥ —(ದಾ.)

ಆದ್ದರಿಂದ ನಾನು ವನಕ್ಕೆ ಹೊರಡುವದರಿಂದ ನೀನು ಪತಿಯ ಯೋಗಕ್ಷೇಮವನ್ನು ನೋಡಿಕೊಂಡಿರೆಂದು ರಾಮನು ತಾಯಿಗೆ ಹೇಳುತ್ತಾನೆ—

ಶ್ಲೋ॥ ನಾತನ್ತ್ರೀ ವಾದ್ಯತೇ ವೀಣಾ ನಾಚಕ್ರೋ ವರ್ತತೇ ರಥಃ । ನಾಪತಿಃ ಸುಖಮೇಧೇತ ಯಾ ಸ್ಯಾದಪಿ ಶತಾತ್ಮಜಾ ॥ —(ಶ್ರೀ.ರಾ)

ಅ॥ ತಂತ್ರಿ ಇಲ್ಲದೆ ವೀಣೆ ಶಬ್ದಮಾಡುವದಿಲ್ಲ. ಚಕ್ರವಿಲ್ಲದೆ ರಥವಿರುವದಿಲ್ಲ. ನೂರು ಮಕ್ಕಳುಳ್ಳವಳಾದರೂ ಪತಿಯನ್ನು ಬಿಟ್ಟು ಸುಖವಿಲ್ಲ.

ಶ್ಲೋ॥ ಭರ್ತೃಶುಶ್ರೂಷಯಾ ನಾರೀ ಲಭತೇ ಸ್ವರ್ಗಮುತ್ತಮಮ್ ॥ —(ಶ್ರೀ.ರಾ)

ಅ॥ ಗಂಡನ ಸೇವೆಯಿಂದ ಹೆಂಗಸು ಉತ್ತಮವಾದ ಸ್ವರ್ಗವನ್ನು ಪಡೆಯುತ್ತಾಳೆ.

ಇಷ್ಟು ಹೇಳಿದ ಮೇಲೆ ಕೌಸಲ್ಯೆ ಕಷ್ಟದಿಂದ ಸಮ್ಮತಿಸುತ್ತಾಳೆ—

ಶ್ಲೋ॥ ಶ್ರೇಯಸೇ ವೃದ್ಧಯೇ ತಾತ, ಪುನರಾಗಮನಾಯ ಚ । ಗಚ್ಛಸ್ವಾರಿಷ್ಟಮವ್ಯಗ್ರಃ ಪನ್ಥಾನಮಕುತೋಭಯಮ್ ॥ —(ಶ್ರೀ.ರಾ)

ಅ॥ ಮಗನೆ, ನಿನ್ನ ಶ್ರೇಯಸ್ಸಿಗಾಗಿ, ಅಭಿವೃದ್ಧಿಗಾಗಿ ಮತ್ತು ಸುಖದಿಂದ ಹಿಂದಿರುಗುವದಕ್ಕಾಗಿ ಸುಖವಾದ ದಾರಿಯಲ್ಲಿ ಸಮಾಧಾನಚಿತ್ತದಿಂದ ನಿರ್ಭಯವಾಗಿ ನಿನ್ನ ಪ್ರಯಾಣವು ಸಾಗಲಿ.

ರಾಮನು ಈ ಆಶೀರ್ವಾದವನ್ನು ಪಡೆದು ಹೊರಡುತ್ತಲೇ ಕೌಸಲ್ಯೆ ದುಃಖಿಸುತ್ತಾಳೆ—

ಸಾಂ॥ ಪಕ್ಕವಿಲ್ಲದ ಪಕ್ಕಿಯಂದದಿ ನನ್ನನು । ದೊಕ್ಕನೆ ದೂಡಿದೆ ಮಗನೆ ॥ ದಿಕ್ಕಾವುದು ಪೇಳೆನಗಿನ್ನು ನಂದನ । ಅಕ್ಕಟ ತಾಯನು ತೊರೆದೈ ॥ ೧ ॥ ಹಾ! ಸಜ್ಜನಜನಶೃಂಗಾರಹಾರನೆ । ಹಾ! ಸರ್ವಕಳೆಗಳ ನಿಧಿಯೆ ॥ ಹಾ! ಸವತಿಯ ಕಣ್ಗೆ ನೀ ಕಸವಾದೆ । ಹಾ! ಸರಸೀರುಹನಯನ ॥ —(ಕಾ.ಕ)

ಟಿ|| ದೊಕ್ಕನೆ—ಧೊಪ್ಪನೆ ಬೀಳುವಂತೆ.

ಅಲ್ಲಿಂದ ರಾಮನು ಸೀತೆಯ ಮನೆಗೆ ಬಂದಾಗ—

ಕೀ|| ಸೀತೆ ಕೇಳಿದಳು ರಾಜಚಿಹ್ನೆಯಿರ | ದೀತೆರಕೇಂ ಕಾರಣವೆಂದು || ಮಾತನೆಂದನಾ ರಘುಪತಿ ವನಕಾ | ಸೀ ತೆರದೊಳೆ ಪೋಗುವೆನೆಂದು ||

ಈ ಮಾತಿಗೆ ಗಾಬರಿಗೊಂಡ ಸೀತೆಗೆ ರಾಮನು ಹೇಳುತ್ತಾನೆ—

ಶ್ಲೋ|| ಸ ಮಾಂ ಪಿತಾ ಯಥಾ ಶಾಸ್ತಿ ಸತ್ಯಧರ್ಮಪಥೇ ಸ್ಥಿತಃ | ತಥಾ ವರ್ತಿತುಮಿಚ್ಛಾಮಿ ಸ ಹಿ ಧರ್ಮಸ್ಸನಾತನಃ || —(ಶ್ರೀ.ರಾ)

ಅ|| ಸತ್ಯಧರ್ಮದ ದಾರಿಯಲ್ಲಿರುವ ಆ ತಂದೆಯು ನನಗೆ ಅಜ್ಞಾಪಿಸಿದಂತೆ ನಾನು ನಡೆಯುವವನಾಗಿದ್ದೇನೆ. ಅದೇ ಸನಾತನಧರ್ಮ.

'ಆದ್ದರಿಂದ ನಾನು ಹೋಗಿಬರುತ್ತೇನೆ. ನೀನು ಇಲ್ಲಿ ಅತ್ತೆಮಾವಂದಿರನ್ನು ಸೇವೆಮಾಡಿಕೊಂಡಿ'ರೆನ್ನುತ್ತಲೇ ಅದಕ್ಕೆ ಸೀತೆ ಹೇಳುತ್ತಾಳೆ—

ಶ್ಲೋ|| ಸ್ವರ್ಗೇಽಪಿ ಚ ವಿನಾ ವಾಸೋ ಭವಿತಾ ಯದಿ ರಾಘವ | ತ್ವಯಾ ಮಮ ನರವ್ಯಾಘ್ರ, ನಾಹಂ ತಮಪಿ ರೋಚಯೇ || —(ಶ್ರೀರಾ)

ಅ|| ಹೆ, ಪುರುಷಶ್ರೇಷ್ಠ, ನಿನ್ನನ್ನಗಲಿದ ಸ್ವರ್ಗವಾದರೂ ನನಗೆ ರುಚಿಸುವದಿಲ್ಲ.

ಶ್ಲೋ|| ಪತಿಮಿಹ ಧನಿನಂ ವಾ ನಿರ್ಧನಂ ವಾ ಮನೋಜ್ಞೇ | ವಿಧಿವಿಹಿತನಿವಾಸಂ ಪತ್ತನೇ ವಾ ವನೇ ವಾ || ಶುಭಗುಣಮಗುಣಂ ವಾ ಸೌಮ್ಯರೂಪಂ ಕುರೂಪಮ್ | ಪರಮಪುರುಷಮೇನಂ ಮನ್ಯತೇ ಸೈವ ಸಾಧ್ವೀ || —(ರಾ.ಚಂ)

ಅ|| ಗಂಡನು ಹಣಗಾರನಾಗಿರಲಿ, ಬಡವನಾಗಿರಲಿ, ಸುಂದರವಾದ ಊರಿನಲ್ಲಿರಲಿ, ಕಾಡಿನಲ್ಲಿರಲಿ, ಗುಣವಂತನಾಗಲಿ, ಗುಣಹೀನನಾಗಲಿ, ಸುರೂಪಿಯಾಗಲಿ, ಕುರೂಪಿಯಾಗಲಿ, ಅವನನ್ನು ದೇವರೆಂದು ತಿಳಿಯುವವಳೇ ಸಾಧ್ವಿಯು.

ಎಂದು ಸೀತೆಯು ಹೇಳಿದ ಮೇಲೆ ಮತ್ತೆ ಅವರಿಬ್ಬರಿಗೂ ಮಾತು ನಡೆಯುತ್ತದೆ.—

ಸುರಟಿ—ರೂಪಕ

✓(ಸೀ) ಮೊದಲೆ ನಾನೆ ಹೊರಟಿಸಿಗೋ | ಸದಯರಾಘವ || ಹೃದಯ ವಲ್ಲಭೆಯನು ಬಿಡುವ | ದಿದುವೆ ಯೋಗ್ಯವೆ? || ೧ || (ರಾ) ಕಾಡೊಳಿಹವು ಹುಲಿ ಕರಡಿಗ | ಳಾಡಲೇನನು || ಕಾಡುವವವು ಬಹುವಿಧದೊಳು | ಕಾಡಬೇಡ ನೀಂ || ೨ || (ಸೀ) ನಾಥ ನೀನು ಜೊತೆಯುಳಿದ್ದ | ರೇತರಿಂ ಭಯ? || ಮಾತಿನಿಂದಲೇನು ಬರುವ ಮಾತೆ ನಿಶ್ಚಯ || ೩ || (ರಾ) ಊಟಉಡಿಗೆ ತೊಡಿಗೆಗೆ ಪಡು | ಪಾಟಲಪ್ಪುದು || ಕೋಟಲೆಯ ಮಾರ್ಗದಿ ನಿ | ನ್ನಾಟ ಸಲ್ಲದು || ೪ ||

ಅದಕ್ಕೆ ಸೀತೆಯ ಉತ್ತರ—

ಶ್ಲೋ|| ಅಹಹ ! ತವ ಪರಾಯುರ್ದೀರ್ಘಮಾಲೋಕ್ಯ ಕಾಮಮ್ | ಯುಗಳಮಪಿ ಚ ಬಾಹ್ವೋರಕ್ಷಿಯುಗ್ಮಂ ತಥೈವ || ಸುಮತಿರಪಿ ನ ಜಾನನ್

ರಾಮನಾಮಾಪಿ ದೀರ್ಘಮ್ । ವದ ಝಡಿತಿ ಕುತೋಽದಾದ್ದೀರ್ಘದರ್ಶೀ ಪಿತಾ ಮಾಮ್ ॥ —(ಸು)

ಅ॥ ನಿನ್ನ ದೀರ್ಘವಾದ ಚಿರಾಯುವನ್ನೂ ದೀರ್ಘವಾದ ಬಾಹುಗಳೆರಡನ್ನೂ ದೀರ್ಘವಾದ ಕಣ್ಣುಗಳೆರಡನ್ನೂ ನೋಡಿ ನಮ್ಮ ತಂದೆಯು ಬುದ್ಧಿಶಾಲಿಯಾದರೂ ನಿನ್ನ ರಾಮನೆಂಬ ಹೆಸರಿನ ದೀರ್ಘವನ್ನು ತಿಳಿಯದೆ ಒಡನೆ ನನ್ನನ್ನು ನಿನಗೆ ಏಕೆ ಕೊಟ್ಟಿದ್ದಾನೆ? (ರಾಮ ಶಬ್ದವನ್ನು ದೀರ್ಘಾಂತವಾಗಿ ಮಾಡಿದರೆ 'ರಾಮಾ' ಎಂದಾಗುತ್ತದೆ. ಆಗ ಸ್ತ್ರೀ ಎಂದರ್ಥ.)

ಹೀಗೆ ಸೀತೆಯು ತನ್ನನ್ನು ಹಿಂಬಾಲಿಸುವದಕ್ಕೆ ನಿಶ್ಚಯಮಾಡಿದ್ದನ್ನು ನೋಡಿ ರಾಮನು ಅವಳ ಅಪೇಕ್ಷೆಗೆ ಸಮ್ಮತಿಸುತ್ತಲಿ ಸೀತೆ ಭಾವಿಸಿದ್ದೇನೆಂದರೆ—

ಕಂ॥ ಪರಿಮಳಯುತಸುಮಮಾದಂ; । ವರತಂತ್ರೀಯುಕ್ತವೀಣೆಯಾದಂ; ಮತ್ತೀಂ ॥ ಹರಿಸಂದೊರೆಗೊಂಡುದು; ಏಂಗೆ । ಪರಿಣತಮಾದತ್ತು ನನ್ನ ಪೂರ್ವದ ಸುಕೃತಂ ॥ —(ಸೀ.ಸು.ನಾ)

ಟಿ॥ ದೊರೆಗೊಂಡುದು —ದೊರೆಯಿತು. ಪರಿಣತಮಾದತ್ತು—ಹಣ್ಣಾಯಿತು.

ಇದು ನಿಜವಾದ ಸಾಧ್ವೀತ್ವ. ಇದನ್ನು ತೋರಿಸುವದಕ್ಕೆ ಅವಕಾಶವು ದೊರೆತದ್ದೇ ಸೀತೆಯ ಸುಯೋಗವೆನ್ನಬೇಕು.

ಶ್ಲೋ॥ ಜಾನೀಯಾತ್ಸಜ್ಗರೇ ಭೃತ್ಯಾನ್ಬಾಂಧವಾನ್ವ್ಯಸನಾಗಮೇ । ಆಪತ್ಕಾಲೇಷು ಮಿತ್ರಾಣಿ ಭಾರ್ಯಾಂ ಚ ವಿಭವಕ್ಷಯೇ ॥ —(ಸು)

ಅ॥ ಸೇವಕನನ್ನು ಯುದ್ಧದಲ್ಲಿಯೂ ಬಾಂಧವರನ್ನು ವ್ಯಸನಕಾಲದಲ್ಲಿಯೂ ಮಿತ್ರರನ್ನು ಆಪತ್ಕಾಲದಲ್ಲಿಯೂ ಹೆಂಡತಿಯನ್ನು ಭಾಗ್ಯಹೋದ ಕಾಲದಲ್ಲಿಯೂ ತಿಳಿಯಬೇಕು.

ಹೀಗೆ ಸೀತೆಯ ಪ್ರಯಾಣವು ಗೊತ್ತಾದೊಡನೆಯೆ—

ಸಾ॥ ಸೀತೆಗೆ ಸಮ್ಮತಿಯಿತ್ತೊಡನೆಯೆ ವಿ । ಖ್ಯಾತಲಕ್ಷ್ಮಣನು ತಾನು ॥
ಪ್ರೀತಿಯಿಂದ ಹಿಂಬಾಲಿಸಲೊಪ್ಪಿಸಿ । ಮಾತ ಪಡೆದನಿನ್ನೇನು ॥

ಲಕ್ಷ್ಮಣನು ತನ್ನ ತಾಯಾದ ಸುಮಿತ್ರೆಯ ಬಳಿಗೆ ಹೋಗಿ ಅಪ್ಪಣೆಯನ್ನು ಬಯಸಿ ನಮಸ್ಕಾರ ಮಾಡಿದಾಗ ಸುಮಿತ್ರೆಯು ಪರಿಸ್ಥಿತಿಯನ್ನೆಲ್ಲ ನೋಡಿ ಮಗನನ್ನು ಅಗಲಲಾರದಿದ್ದರೂ ಸಮ್ಮತಿಸಿ ಆಶೀರ್ವದಿಸಿದ್ದೇನೆಂದರೆ—

ಶ್ಲೋ॥ ರಾಮಂ ದಶರಥಂ ವಿದ್ಧಿ ಮಾಂ ವಿದ್ಧಿ ಜನಕಾತ್ಮಜಾಮ್ । ಅಯೋಧ್ಯಾಮಟವೀಂ ವಿದ್ಧಿ ಗಚ್ಛ ತಾತ ಯಥಾಸುಖಮ್ ॥ —(ಶ್ರೀ.ರಾ)

ಅ॥ (೧) ರಾಮನನ್ನು ದಶರಥನೆಂದು (ತಂದೆಯೆಂದು) ಸೀತೆಯನ್ನು ನಾನೆಂದು (ತಾಯಿಯೆಂದು) ಅಡವಿಯನ್ನು ಅಯೋಧ್ಯೆ (ಭೋಗಸ್ಥಾನ)ಯೆಂದು ತಿಳಿ; ಸುಖವಾಗಿ ಹೋಗಿ ಬಾ. ಅಥವಾ (೨) ರಾಮನನ್ನು ವಿಷ್ಣುವೆಂದು (ದಶ—ಪಕ್ಷಿಯೆ, ರಥ—ರಥವಾಗಿ ಉಳ್ಳವನು) ಸೀತೆಯನ್ನು ಲಕ್ಷ್ಮಿಯೆಂದು (ಮಾ ಎಂದರೆ ಲಕ್ಷ್ಮಿ ಎಂದರ್ಥ) ಅಡವಿಯನ್ನು ವೈಕುಂಠವೆಂದು (ಅಯೋಧ್ಯಾ—ಜಯಿಸಲಸಾಧ್ಯವಾದ ವೈಕುಂಠ) ತಿಳಿ.

ಇಷ್ಟಾದ ಮೇಲೆ ಸೀತಾರಾಮಲಕ್ಷ್ಮಣರು ಕಾಲನಡಿಗೆಯಿಂದ ಬರುತ್ತಿರುವದನ್ನು ನೋಡಿ ಊರ ಜನರೆಲ್ಲ ದುಃಖಿಸುತ್ತಾರೆ—

ಮುಖಾರಿ—ಅಟತಾಳ

ಎಂತು ನೋಡುವೆವು ನಾವು । ಈ ನೋಟವ । ಸಂತಾಪಕಾರಕವು॥ಮಾರಕವು ಹಾ ! ಹಾ !! ॥ ಪ ॥ ಕಾಂತೆಯೊಬ್ಬಳ ತೃಪ್ತಿಗಾಗಿಯೆ । ಇಂತು ಮಗನನು ಕಾಡಿಗಟ್ಟಿರು ॥ ಪಂತಕನ ಪುರವಾಸಕಿಂತ ಪ । ನಾಂತವೇ ನಮಗೊಳಿತೆನಿಸುವಗು ॥ ಅ.ಪ. ॥ ತಾಯೆ ಆ ಕೈಕೇಯಿಯು? । ಲೋಕದ ಮಹಾ । ಮಾಯೆ ದುಷ್ಟ ಪಿಶಾಚಿಯು ॥ ರಾಯನಣುಗನ ಪಟ್ಟವೆನೆ ತಾ । ನಾಯತದ ವಿಘ್ನವನು ಹೂಡಿದ । ನಾಯ ಮುಖವನು ನೋಡಬಹುದೇ? । ಬಾಯ ಬಡಿವಧಿಕಾರಿಣಿಯಲೇ ॥ ೧ ॥ ಜನಕನ ಸುತೆಯೆನಿಸಿ । ಶ್ರೀರಾಮನ । ಮನದನ್ನಳೆಂದೆನಿಸಿ ॥ ಘನ ತರದ ವಾಹನಗಳಿರೆ ಕಾ । ಲಿನೊಳೆ ನಡೆವುದ ನೋಡಲವ್ಮೆವೆ? । ಜನುಮವಿದು ಕಡುಕಷ್ಟ ಹಾ! ಹಾ !! । ಕಣ್ಣುಮನಗಳಿವು ನೀವುವಹಹಾ ! ॥ ೨ ॥

ಸೀತಾರಾಮಲಕ್ಷ್ಮಣರು ಬಂದು ನಮಸ್ಕರಿಸುತ್ತಲೆ ಕೈಕೇಯಿಯು—

ಶ್ಲೋ॥ ಇತ್ಯುಕ್ತ್ವಾ ಸಹಸೋತ್ಥಾಯ ಚೀರಾಣಿ ಪ್ರದದೌ ಸ್ವಯಮ್ । ರಾಮಾಯ ಲಕ್ಷ್ಮಣಾಯಾಥ ಸೀತಾಯೈ ಚ ಪೃಥಕ್ ಪೃಥಕ್ ॥ —(ಅ.ರಾ)

ಅ॥ ಆಗಲೆಂದು ಹೇಳಿ ಬೇಗ ಎದ್ದು ರಾಮನಿಗೂ ಲಕ್ಷ್ಮಣನಿಗೂ ಸೀತೆಗೂ ಬೇರೆ ಬೇರೆ ನಾರುಬಟ್ಟೆಗಳನ್ನು ತಂದುಕೊಟ್ಟಳು.

ರಾಮನು ಅದನ್ನು ಸಮತ್ವಬುದ್ಧಿಯಿಂದ ಸ್ವೀಕರಿಸಿದ್ದೆಂತೆಂದರೆ—

ಶ್ಲೋ॥ ದ್ವಿಜಿಹ್ವಪೀಡಿತಾಶ್ಚಾಪಿ ವಿಕ್ರಿಯಾಂ ನೈವ ತನ್ವತೇ । ಪರತಾಪೋಪಶಮನೇ ಗುರವೋಽಗುರವೋ ಜನಾಃ ॥ —(ಸು.ಲಾ)

ಅ॥ (೧)(ಅಗುರವಃ) ಚಂದನದ ಮರಗಳು ಹಾವುಗಳಿಂದ ಪೀಡೆಯನ್ನುಪಡೆದರೂ ತಮ್ಮಲ್ಲಿ ವಿಕಾರವನ್ನು ಹೊಂದದೆ ಮತ್ತೊಬ್ಬರ ತಾಪವನ್ನು ಶಮನಮಾಡುವದರಲ್ಲಿ (ಗುರವಃ) ಕಡಿಮೆ ಮಾಡುವವದಿಲ್ಲ. ಇದರಂತೆ (೨) ಶ್ರೇಷ್ಠರಾದವರು ಖಲರಿಂದ ಪೀಡೆಯನ್ನು ಪಡೆದರೂ ತಮ್ಮಲ್ಲಿ ವಿಕಾರವನ್ನು ಹೊಂದದೆ ಮತ್ತೊಬ್ಬರ ತಾಪವನ್ನು ಶಮನ ಮಾಡುವದರಲ್ಲಿ ಚಪಲರಾಗಿರುತ್ತಾರೆ.

ಹೀಗೆ ರಾಮನು ತೋರಿಸಿದ ಸಮದೃಷ್ಟಿಯನ್ನು ಲಕ್ಷ್ಯದಲ್ಲಿಟ್ಟುಕೊಂಡೇ ಪೀಠಿಕೆಯಲ್ಲಿ "ಮಾಡಿ ಭಕ್ತಿಯಸಹಿತ ಹಿತವೆಂದಾಡದೇ ಸಮಬುದ್ಧಿಯಿಂದಲಿ" ಎಂದು ಹೇಳಿದ್ದು.

ದಿಂ॥ ನಾರುಡಿಗೆ ಬಗೆಯಂ ತಿಳಿಯೆ ಸೀತೆಯಾಗ । ಓರೆನೋಟಂ ನೋಡಲ್ಕೆ ರಾಮ ಬೇಗ ॥ ಸಾರಿ ಬಾಮುಡಿಸಲ್ ನೋಡಿ ಜನಗಳೆಲ್ಲ । ಭೂರಿದುಃಖಂಗೊಂಡುದಂ ದೇವ ಬಲ್ಲ ॥

ಆಗ ವಸಿಷ್ಠರು—

ಕೀ॥ ಎಲೆ ಕೈಕೆಯಿ, ನೀ ಕೇಳಿದೆ ರಾಮನು। ತೊಳಲಲೆಂದು ವನವಾಸ ದಲಿ ॥ ಗಳಿಲನೆ ಸೀತೆಗೆ ಕೊಡುವೆಯೆಂತು ವ। ಲ್ಕಲವನು ಕುಹಕಾವೇಶದಲಿ? ॥

ಎಂದು ತಡೆಯಲು ಆಗ ಸೀತೆಯು ತನ್ನ ಸಹಜವಾದ ವಸ್ತ್ರದೊಡನೆ ಹೊರಟಳು. ಆಗ—

ಕೀ॥ ರಥವನು ರಾಮಗೆ ತರಹೇಳಿದ ನರ। ಪತಿ ಸುೂಸರು ಹೊರಟುದ ಕಂಡು ॥ ಅತಿಸಂತಾಪದ ಫಲವಹ ಮೂರ್ಛಾ। ಸ್ಥಿತಿವಡೆದನು ದುಃಖವ ಕೊಂಡು ॥

ಆಗ ರಾಮನು ತಂದೆಗೆ ಸಮಾಧಾನಮಾಡುತ್ತಾನೆ—

ವೃ॥ ಅಣುಮಾತ್ರಂ ವ್ರತಮಲ್ಪಕಾಲಮಿರೆ ಮುನ್ನಂ ತತ್ಫಲಪ್ರಾಪ್ತಿಯಿಂ। ಪ್ರಣುತಕ್ಷ್ಮಾಪತಿಯಾದೆನಿನ್ನಧಿಕದಿಂ ಸಮ್ಯಗ್ವ್ರತಾಚಾರಲ॥ಕ್ಷಣಮುಂ ಶಾಶ್ವತವಾಂತು ದೇವಪದಮುಂ ಕೈವಲ್ಯಮುಂ ಕೊಳ್ವೆನೆಂ। ದೆಣಿಸುತ್ತುಚ್ಛಗಿಪಾತನೇ ಸುಖಿಯಲಾ! ರತ್ನಾಕರಾಧೀಶ್ವರಾ ॥ —(ರ.ಶ)

ಟಿ॥ ಪ್ರಣುತಕ್ಷ್ಮಾಪತಿ—ಪ್ರಸಿದ್ಧನಾದ ರಾಜ. ಆದೆನು + ಇನ್ನು + ಅಧಿಕದಿಂ.

ಹೀಗೆ ಹೇಳಿ ರಾಮನು ಹೊರಡುತ್ತಲೆ—

ಶ್ಲೋ॥ ಮುರಜಪಣವಮೇಘಘೋಷವ। ದ್ದಶರಥವೇಶ್ಮ ಬಭೂವ ಯತ್ಪುರಾ ॥ ವಿಲಪಿತಪರಿದೇವನಾಕುಲಮ್। ವ್ಯಸನಗತಂ ತದಭೂತ್ಸುದುಃಖಿತಃ॥ —(ಶ್ರೀ.ರಾ)

ಅ॥ ಮೊದಲು ಮಂಗಳವಾದ್ಯಗಳಿಂದ ಮೇಘಗರ್ಜನೆಯಂಥ ಶಬ್ದದಿಂದ ಕೂಡಿದ್ದ ದಶರಥನ ಮನೆಯು ವ್ಯಸನದಿಂದುಂಟಾದ ಗೋಳಿನ ಧ್ವನಿಯಿಂದ ತುಂಬಿ ಅತ್ಯಂತದುಃಖಕರವಾಯಿತು.

ಶ್ಲೋ॥ ಪ್ರಾರಬ್ಧಯಾತ್ರಸ್ಯ ರಘೂದ್ವಹಸ್ಯ। ಪ್ರಾಗೇವ ಸೀತಾ ರಥಮಾರುರೋಹ ॥ ಆಸೀಲರಥ್ಯಂ ರಥಮಾರುರುಕ್ಷೋ। ರಹ್ನಾಂ ಪ್ರಭೋರಗ್ರಸರೀ ಪ್ರಭೇವ ॥ — (ರಾ.ಚಂ)

ಅ॥ ರಾಮನು ಹೊರಟಾಗ ಸೀತೆಯು ಮೊದಲೇ—ಹರಿದ್ವರ್ಣದ ಕುದುರೆಗಳನ್ನು ಕಟ್ಟಿದ ರಥವನ್ನು ಸೂರ್ಯನಿಗಿಂತ ಮುಂಚೆ ಅವನ ಪ್ರಭೆ ಹತ್ತುವಂತೆ—ಹತ್ತಿದಳು.

ಆಗ ಜನರೆಲ್ಲರೂ ವ್ಯಸನಗೊಳ್ಳುತ್ತಾರೆ—

ಷ ॥ತಾತ ಮಕ್ಕಳ ಮಾರಿದೊಡೆ, ನಿಜ! ಮಾತೆ ವಿಷಮಿಕ್ಕಿದೊಡೆ, ನೃಪದು। ರ್ನೀತಿಯುಂ ಸರ್ವಸ್ವದಪಹಾರವನು ಮಾಡಿದೊಡೆ,॥ ಓತು ಬಿಡಿಸುವರುಂಟೆ? ಎಂಬೀ। ಮಾತು ನಿಜವಾಯಿತ್ತಲ್ಲಿ ಬದುಕುವ। ರೀತಿಗಿಂತಲರಣ್ಯವೇ ಲೇಸೆಂದುದು ಜನಸ್ತೋಮ ॥ —(ರಾ.ಕ.ಕು)

ಟಿ॥ ಓತು—ಪ್ರೀತಿಯಿಂದ.

ಈ ಪ್ರಕಾರ ಪಟ್ಟಣಿಗರೆಲ್ಲ ಹೊರಟ ಗದ್ದಲದಿಂದೇನಾಯಿತೆಂದರೆ—

ಶ್ಲೋ॥ ರಾಮಂ ನಿಜಾನ್ವಯಮಣಿಂ ದ್ಯುಮಣಿರ್ವನಾಸ್ತಮ್। ಗಚ್ಛನ್ತ

ಮೇನಮನುಜೇನ ಚ ಜಾಯಯಾ ಚ || ಆಲೋಕಯಾಮಿ ಕಥಮಿತ್ಯಧುನಾತ್ಮ ವಕ್ತ್ರಮಾಚ್ಛಾದಯತ್ಯವನಿಧೂಲಿಭಿರೇವ ನೂನಮ್ || —(ರಾ.ಚ)

ಅ|| ಸೂರ್ಯನು ತನ್ನ ವಂಶಕ್ಕೆ ಮಣಿಯಂತಿದ್ದ ಶ್ರೀರಾಮಚಂದ್ರನು ತಮ್ಮನೊಡನೆಯೂ ಪತ್ನಿಯೊಡನೆಯೂ ಅರಣ್ಯಕ್ಕೆ ಹೋಗುವದನ್ನು ನೋಡಲಾರೆನೆಂದು ಭೂಮಿಯ ಧೂಲಿಗಳಿಂದಲೇ ತನ್ನ ಮುಖವನ್ನು ಮುಚ್ಚಿಕೊಳ್ಳುತ್ತಾನೆ. (ಅಷ್ಟು ಧೂಳಿದ್ದಿತ್ತೆಂದರ್ಥ)

ಮತ್ತೇನಾಯಿತೆಂದರೆ—

ಶ್ಲೋ|| ಸೀತಾ ಪುರಾ ಗಗನಚಾರಿಭಿರಪ್ಯದೃಶ್ಯಾ | ಮಾಭೂದಿಯಂ ಸಕಲಮಾನವನೇತ್ರಪಾತ್ರಮ್ | ಇತ್ಯಾಕಲಯ್ಯ ನಿಯತಂ ನಿದಧೇ ವಿಧಾತಾ | ಬಾಷ್ಪೋದಯೇನ ನಯನಾನಿ ಶರೀರಭಾಜಾಮ್ || —(ರಾ.ಚಂ)

ಅ|| ಮೊದಲು ದೇವತೆಗಳಿಗೂ ಕೂಡ ಗೋಚರವಾಗದೆ ಇದ್ದ ಸೀತೆಯು ಮನುಷ್ಯರ ಕಣ್ಣಿಗೆಲ್ಲ ಕಾಣಬಾರದೆಂದು ಬ್ರಹ್ಮನು ಆ ಶರೀರಿಗಳ ಕಣ್ಣುಗಳನ್ನೆಲ್ಲ ತಪ್ಪದೆ ದುಃಖದ ನೀರಿನಿಂದ ತುಂಬಿದನು.

ಶ್ಲೋ|| ಅನವಾಪ್ತಾತಪತ್ರಸ್ಯ ರಶ್ಮಿಸನ್ತಾಪಿತಸ್ಯ ಚ | ಏಭಿಚ್ಛಾಯಾಂ ಕರಿಷ್ಯಾಮಃ ಸ್ವೈಃ ಛತ್ರೈಃ ವಾಜಪೇಯಿಕೈಃ || —(ಶ್ರೀ.ರಾ)

ಅ|| ಛತ್ರಪತಿಯಾಗದೆ ಬಿಸಿಲಿನ ಝಳಕ್ಕೊಳಗಾಗಿರುವ ರಾಮನಿಗೆ ದೀಕ್ಷಿತರು ತಮ್ಮ ವಾಜಪೇಯಯಾಗದ ಛತ್ರಿಗಳಿಂದ ನೆರಳನ್ನುಂಟುಮಾಡೋಣ(ವೆಂದು ಮಾಡಿದರು).

ಆಗ ದಶರಥನ ಹಂಬಲಿಕೆ—

ಪ|| ತೆರಳುತಿದೆ ಪುಣ್ಯೋಪರತ್ನಾ | ಭರಣವೆನ್ನ ಮನೋರಥದ ಸಿರಿ | ಸರಿವುತಿದೆ, ರಘುರಾಜವಂಶದ ಬಹಳ ಭಾಗ್ಯನಿಧಿ || ಪುರವ ಹೊರವಡುತಿದೆ, ಮದೀಯ | ಸ್ಫುರಿತ ಚಂದ್ರಮಕಲ್ಪಪಾದಪ | ಹರುಷ ನಿರ್ಜರಧೇನು ಏಡುತಿದೆ ತನ್ನನಕಟೆಂದ || —(ತೊ.ರಾ)

ಟಿ|| ಮದೀಯ.... ನಿರ್ಜರಧೇನು—ಶೋಭಾಯಮಾನವಾದ ನನ್ನ ಚಂದ್ರನೂ ಕಲ್ಪವೃಕ್ಷಪ್ರಾಯನೂ ಸಂತೋಷದ ಕಾಮಧೇನುವೂ (ಆದ ರಾಮನು ಹೋಗುತ್ತಾನೆಂದರ್ಥ)

ಶ್ಲೋ|| ತಿಷ್ಠೇತಿ ರಾಜಾ ಚುಕ್ರೋಶ ಯಾಹಿ ಯಾಹೀತಿ ರಾಘವಃ | ಸುಮನ್ತ್ರಸ್ಯ ಬಭೂವಾತ್ಮಾ ಚಕ್ರಯೋರಿವ ಚಾನ್ತರಾ || —(ಶ್ರೀ.ರಾ)

ಅ|| ನಿಲ್ಲುನಿಲ್ಲೆಂದು ರಾಜನು ಕೂಗುವನು. ಹೋಗು ಹೋಗೆಂದು ರಾಮನು ಹೇಳುವನು. ಇದರಿಂದ ಸುಮಂತ್ರನ ಮನಸ್ಸು ಎರಡು ಚಕ್ರದ ನಡುವೆ ಸಿಕ್ಕಿದಂತಾಯಿತು.

ಹೀಗೆ ರಾಮನು ತಂದೆಯನ್ನು ಸತ್ಯಪ್ರತಿಜ್ಞನನ್ನಾಗಿ ಮಾಡುವದಕ್ಕಾಗಿ ಹೊರಟದ್ದನ್ನು ಲಕ್ಷ್ಯಕ್ಕೆ ತಂದೇ ಪೀಠಿಕೆಯಲ್ಲಿ "ದೊರೆತನ ಪೋದಲಾದವು | ಪಿತೃಭಕ್ತಿಯೊಂದಕೆ | ಸರಿಬಾರದೆಂದರಿತು | ಏಡುತವುಗಳನ್ನು" ಎಂದು ಪೀಠಿಕೆಯಲ್ಲಿ ಹೇಳಿದ್ದು.

ಇತ್ತ ದಶರಥನ ಅವಸ್ಥೆಯೇನಾಯಿತೆಂದರೆ—

ಕೀ|| ಅರಸನಿಚ್ಛೆಯರಿತನುಚರರವನನು । ತೆರಳಿಸೆ ಕೌಸಲ್ಯೆಯ ಮನೆಗೆ||
ಪರಿಪರಿಯುಪಚಾರಗಳನು ಪಡೆಯುತ। ನೆರೆ ಮೂರ್ಛೆಯ ಪಡೆದನು ಕೊನೆಗೆ ||

ನಡುನಡುವೆ ಅವನು ಹಂಬಲಿಸಿದ್ದೇನೆಂದರೆ—

ಶ್ಲೋ || ಹೃದಯಾನ್ನಾಪಯಾತೋಽಸಿ ದಿಕ್ಷು ಸರ್ವಾಸು ದೃಶ್ಯಸೇ ।
ವತ್ಸ ರಾಮ ಗತೋಽಸೀತಿ ಸನ್ತಾಪಾನ್ನಾನುಮೀಯಸೇ ॥ —(ಶ್ರೀ.ರಾ)

ಅ|| ಮಗು, ರಾಮ, ನೀನು ನನ್ನ ಹೃದಯವನ್ನು ಬಿಟ್ಟು ಅಗಲಲಿಲ್ಲ. ಎತ್ತ ನೋಡಿದರೂ ನೀನೇ ಕಾಣುತ್ತಿ. ಆದರೆ ನನಗೆ ಒಳಗೆ ಆಗುತ್ತಿರುವ ಸಂತಾಪದಿಂದ ನೀನು ಹೋಗಿದ್ದೀಯೆಂದೂಹಿಸುತ್ತೇನೆ.

ಎಂದು ಅವನ ಗುಣವನ್ನು ನೆನೆಸಿಕೊಂಡದ್ದೇನೆಂದರೆ—

ಶ್ಲೋ || ಅಹೋ! ತಸ್ಯಾಭಿಷೇಕಾಯ ವಿಸೃಷ್ಟಸ್ಯ ವನಾಯ ಚ। ನ
ಮಯಾ ಲಕ್ಷಿತಸ್ತಸ್ಯ ಸ್ವಲ್ಪೋಽಪ್ಯಾಕಾರವಿಭ್ರಮಃ ॥ —(ಶ್ರೀ.ರಾ)

ಅ|| ಆಹಾ! ಪಟ್ಟಾಭಿಷೇಕವನ್ನು ಮಾಡುತ್ತೇನೆಂದರೂ ವನಕ್ಕೆ ಹೋಗೆಂದರೂ ಅವನ ಶರೀರದಲ್ಲಿ ಏನೂ ವಿಕಾರವಾಗಲಿಲ್ಲವಲ್ಲ!

ಹೀಗೆಂದು ಅವನು ಹಂಬಲಿಸಿಕೊಳ್ಳುತ್ತಿರಲು ಇತ್ತ ರಾಮನ ಪ್ರಯಾಣವು ಸಾಗಿದ್ದೆಂತೆಂದರೆ

ಕೀ|| ನಿಶಿಯ ಕಳೆದು ತಮಸಾತೀರದಿ ರವಿ। ಯೆಸೆವ ಮುನ್ನವಯೋಗ್ರಾಂತರವ||ಒಸೆದು ಹಿಡಿದು ಹಿಮ್ಮೆಟ್ಟಿಸಿದನು ಬಹು। ಘಸಣಿಗೊಂಡ ಜನಗಳ ಬರವ ||
|| ೧ || ಗಂಗೆಯ ದಾಟುತ ರಾಮಲಕ್ಷ್ಮಣರು । ಶೃಂಗವೇರಪುರದಲಿ ಗುಹನಿಂ ||
ಸಂಘಟಿಸೆ ವಟಕ್ಷೀರದ ಜಟೆಗೆ ಶು। ಭಾಂಗರಿಪ್ಪರಾ ಸ್ಥಿತಿಗಹನಂ || ೨ ||

ಮುಂದೆ ರಥಾರೂಢನಾಗಿ ಹೋಗುವದು ಯೋಗ್ಯವಲ್ಲವೆಂದು ರಾಮನು—

ದಿಂ|| ಕೈಕೆ ನಂಬಲ್ ಸೀಂ ತಿರುಗಿ ಹೋಗೆನುತ್ತೆ । ಆ ಕೃಪಾರತ್ನಾಕರನು ಪೇಳೆ ಮತ್ತೆ || ಜೋಕೆಯಿಂ ಬೀಳ್ಕೊಂಡಾ ಸುಮಿತ್ರನಾಗ । ಪ್ರಾಕೃತನವೋಲ್ಲುಃಖಿಸುತ ಬಂದ ಬೇಗ ||

ಕಾಲ ನಡಿಗೆಯಲ್ಲಿ ಅವರು ಅನುಸರಿಸಿದ ಪದ್ಧತಿಯೇನೆಂದರೆ—

ಸಾ|| ಮುಂಗಡೆ ಲಕ್ಷ್ಮಣ ಹಿಂಗಡೆ ಸೀತೆಯು । ಬೆಂಗಡೆ ರಾಮನು ಹೀಗೆ || ಹಿಂಗದೆ ನಡೆದರು ಇಂಗಿತದೆಚ್ಚರೊಳ್ । ಭಂಗವು ಬಾರದ ಹಾಗೆ ||

ಸೀತೆಯು ನಡೆಯುವಾಗ—

ಷ|| ಅಡಿಗಡಿಗೆ ನಿಲ್ಲುವಳು, ಕುಳ್ಳಿರು । ತಡಿಗಡಿಗೆ ಮುಯ್ಯುಳು, ಬಳಲಿ ಬಾ। ಯ್ಬಿಡುವಳೇಳುವಳಳುಕುವಳು, ಬಳುಕುವಳು, ಮೆಲ್ಲಡಿಯ || ಇಡಲರಿಯದಿನ್ನೆನಿತು ಕಾನನ। ದೆಡೆಯೆನುತ ಬೆಸಗೊಂಬಳೀ ಪರಿ। ನಡೆನಡೆದು ನಡೆಗೆಟ್ಟು ನೆಮ್ಮಿದಳಾತ್ಮವಲ್ಲಭನ —(ತೊ. ರಾ)

ಟಿ|| ಬೆಸಗೊಂಬಳು—ಕೇಳುವಳು. ನಡೆಗೆಟ್ಟು—ಕಾಲೇಳಲಾರದೆ. ನೆಮ್ಮಿದಳು—ಒರಗಿಕೊಂಡಳು.

ಇದರ ಪರಿಣಾಮವೇನಾಯಿತೆಂದರೆ—

ಶ್ಲೋ॥ ಸದ್ಯಃ ಪುರೀಪರಿಸರೇಽಪಿ ಶಿರೀಷಮೃದ್ವೀ । ಸೀತಾ ಜವಾತ್ತ್ರಿಚತುರಾಣಿ ಪದಾನಿ ಗತ್ವಾ ॥ ಗನ್ತವ್ಯಮಸ್ತಿ ಕಿಯದಿತ್ಯಸಕೃದ್ಬ್ರುವಾಣಾ । ರಾಮಾಶ್ರುಣಃ ಕೃತವತೀ ಪ್ರಥಮಾವತಾರಮ್ ॥ —(ಹ. ನಾ.)

ಅ॥ ಶಿರೀಷಕುಸುಮದಂತೆ ಕೋಮಲೆಯಾದ ಆ ಸೀತೆಯು ಬೇಗ ಬೇಗ ಮೂರು ನಾಲ್ಕು ಹೆಜ್ಜೆಗಳನ್ನಿಟ್ಟು ಇನ್ನೂ ಊರಹತ್ತಿರದಲ್ಲಿಯೇ ಇನ್ನೆಷ್ಟು ದೂರ ಹೋಗತಕ್ಕದ್ದಿರುವದೆಂದು ಕೇಳಿದ ಮಾತು ರಾಮನಿಗೆ ಮೊದಲನೆ ಕಣ್ಣೀರನ್ನು ಹಾಕಿಸಿತು.

ಹೀಗೆ ಅವರು ಬರುತ್ತ ಬರುತ್ತ ಕಂಡ ಭರದ್ವಾಜರಾಶ್ರಮವೆಂತಿತ್ತೆಂದರೆ—

ವೃ॥ ಪಸಿದ್ದೈತಂದುಣ್ಬುದಾ ಪೆಣ್ಬುಲಿಯ ಮೊಲೆಯನಲ್ಲಿರ್ದ ಸಾರಂಗ ಶಾಬಂ; । ದ್ವಿಶಿರಂ ತಾಯ್ವಕ್ಕಿ ಪಾಯ್ದೆಂಟಡಿಗೆ ಗುಟುಕನೊಲ್ದೂಡುಗುಂ; ದಂತಿಪೋತ ॥ ಪ್ರಸರಕ್ಕಂಗಾಲ್ಗಳೊಳ್ಮುಳ್ಮುರಿದೊಡುಗುರ್ಗಳಿಂ ತೀರ್ಚುಗುಂ ಸಿಂಹಪಾ । ದುಬ್ಬುಸಮಂ ಸರ್ಪಾರ್ಭಕಕ್ಕಾತಪದೆ ತೊಲಗಿಕುಂ ಬರ್ಹದಿಂ ಬರ್ಹಿವೃಂದಂ ॥ —(ರಾ.ವಿ)

ಟಿ॥ ಶಾಬಂ–ಮರಿ. ದ್ವಿಶಿರ–ಗಂಡಭೇರುಂಡ. ಎಂಟಡಿ–ಶರಭಮೃಗ.

ಭಾರದ್ವಾಜರು ಅವರಿಗೆಲ್ಲ ಆತಿಥ್ಯವನ್ನು ಮಾಡಿ ರಾಮನನ್ನು ಸ್ತೋತ್ರಮಾಡುತ್ತಾರೆ—

✓ ಚೂ॥ ಶ್ರೀರಾಮಚಂದ್ರ, ಜಗಕೆ ನೀನೊಬ್ಬನೇ ದೇವನೈ ರಾಘವೇಂದ್ರ, ಶರಣಾಗತರ ವಿಷಯದಲಿ ಕೃಪಾಸಾಂದ್ರ, ನಿನ್ನ ಚರಣಧೂಲಿಯನು ಬಯಸುವನು ದೇವೇಂದ್ರ । ನಿನ್ನ ದರ್ಶನದಿಂದ ಜನ್ಮಸಾರ್ಥಕ, ನಿನ್ನರಿಯದಿರವೇ ನಿರರ್ಥಕ । ಧರ್ಮೋದ್ಧರಣಕೇ ನಿನ್ನ ಅವತಾರ, ಕರ್ಮಪರಿಪಾಕವಾಗರೆ ನೀನು ಹತ್ತಿರವು ತೀರ, ಧರ್ಮರಹಿತರಿಗೆಲ್ಲ ನೀನು ಬಹು ದೂರ, ರೂಪದೊಳು ಮಾರ, ದಾನದೊಳುದಾರ, ರಣದೊಳಗೆ ಧೀರ, ಗುಣದೊಳಗೆ ಸಾರ, ಮೋಕ್ಷಾಂಗನೆಯ ಹಾರ, ಮಾಯಾವಿಹಾರ । ನೀನಿರ್ಪುದೇ ನಗರ, ನೀನಿಲ್ಲದೆಡೆಯೆ ಗರ, ನೀನೆನ್ನಗುರುವರೇಣ್ಯ, ಭಕ್ತಜನಶರಣ್ಯ, । ನಿನ್ನನುಗ್ರಹವೊಂದೆ ಸಾಕು, ನೀನೊಬ್ಬನಿರಲೆನಗೆ ಮತ್ತೇನು ಬೇಕು?

ಅಲ್ಲಿಂದ ಮುಂದೆ ಹೊರಟ ಸೀತಾರಾಮಲಕ್ಷ್ಮಣರು—

ಷ॥ ತುಂಗಸಾರ್ವರ್ತುಕವ । ನಂಗಳ, ಲತಾಮಂಟ । ಪಂಗಳ, ಸರಿತ್ಸರೋವರಕೋಟಿಯ, ॥ ರಂಗದ್ವಿಶಾಲಕೂ । ಟಂಗಳ ವಿಲಾಸದೆ ಮ । ಸಂಗೊಳಿಪ ಚಿತ್ರಕೂಟವ ಕಂಡರು ॥ —(ಕು.ರಾ)

ಅಲ್ಲಿಯ ಅರಣ್ಯವೆಂತಿತ್ತೆಂದರೆ—

ಷ॥ ಬೇರಿಂ ಮುನ್ನನೆ ಪಾಸಂ ಮಾಡಿದ । ನೀರಿಂ ತಮ್ಮೊಡಲೊಳ್ತೀವಿದ ಹಸಿ । ವಾರದೆ ಬಾಕುಳಿತನದಿಂ ಬಾಸ ಪೊರೆಯ ಬಂಧುರಮಪ್ಪ ॥ ವಾರಿಯ

ನೋವದೆ ತಮ್ಮಯ ಕೊನೆಯಿಂ । ಪೂರಿಸಿಯುಣಬೇಕೆನುತ ಪರಿವವೋಲ್ ।
ತಾರಾಪಥಮಂ ತವೆ ಚುಂಬಿಸಿದವು ತದ್ವನತರುಪಿತತಿ ॥ —(ಜ.ಕಾ)

**ಟಿ॥ ಹಸಿವಾರದೆ—ಹಸಿವುತೀರದೆ ಬಾಕುಳಿತನ—ಹೊಟ್ಟೆಬಾಕತನ. ಬಾನಪೊರೆಯ—ಆಕಾಶದ ಹತ್ತಿರದಲ್ಲಿರುವ.**

**ಅಲ್ಲಿ ಅವರಿಗೆ ಒದಗಿದ ಸೌಕರ್ಯವೇನೆಂದರೆ—**

ಕೀ॥ ಅಲ್ಲಿಯ ಋಷಿ ವಾಲ್ಮೀಕರು ರಾಮನ । ನೆಲ್ಲ ಬಗೆಯೊಳರ್ಚಿಸಿ ಮುಂದಣಿ ॥ ಒಳ್ಳೆಯ ಫಲಮೂಲಂಗಳನರ್ಪಿಸಿ । ನಿಲ್ಲದೆರಗಿದರು ಬಹುವಿಧದಿ ॥

**ಆಗ ರಾಮನು ಅವರನ್ನು ಕೇಳಿದ್ದೇನೆಂದರೆ—**

ಸಾ॥ ತಂದೆಯಾಜ್ಞೆಯಿಂ ಬಂದಿಹೆ ನಾನಾ । ನಂದದೊಳಿರೆ ವನದಲ್ಲಿ ॥ ಸುಂದರಿಯೊಡನೆಲ್ಲಿರಲಿ ಪೇಳು ಸುಖ । ವಿಂದಾವಸ್ಥಳ । ದಲ್ಲಿ? ॥

**ಅದಕ್ಕೆ ವಾಲ್ಮೀಕರ ಉತ್ತರ—**

**ಸುರಟಿ—ಆದಿತಾಳ**

ಇದೇ ಸ್ಥಲವು ವಿಹಿತ । ರಘುವರ । ಇದೇ ಸ್ಥಲವು ವಿಹಿತ ॥ ಪ ॥ ಇದೆಲ್ಲ ಲೋಕದಿ । ವುದಿದಿಹೆಯಾದರು । ಸುದತಿಯೊಡನೆ ಸೀ । ಮುದದಿಂದಿರುವೊಡೆ ॥ ಅ.ಪ ॥ ಚಿಂತೆಯುಳಿದು ಬಹು । ಶಾಂತಿಪಡೆದು ಸು ॥ ಸ್ವಾಂತರಪ್ಪರ ಹೃ । ದಂತರಾಲವೇ ॥ ೧ ॥ ಭ್ರಮೆಯ ಕಳೆದು ವಿ । ಶ್ರಮಿಸುತ ನಿನ್ನೊಳು ॥ ಸಮತೆಯ ಪಡೆದು । ತ್ತಮರ ಹೃದಯವೆ ॥ ೨ ॥ ನಿನ್ನ ಮಂತ್ರಜಪ । ವನ್ನೆ ಮಾಡಿನಿ ॥ ನ್ನನ್ನೆ ನೆನೆವ ಸಂ । ಪನ್ನನ ಚಿತ್ತವೆ ॥ ೩ ॥

**ಹೀಗೆಂದು ಹೇಳಿ ವಸಿಷ್ಠರು ಆಮೇಲೊಂದು ಸ್ಥಲವನ್ನು ತೋರಿಸಿದರು. ಆಗ—**

ಕೀ॥ ವರಮುನಿ ತೋರ್ದೆಡೆಯೊಳಗಾ ಲಕ್ಷ್ಮಣ । ವಿರಚಿಸಲೊಂದು ತಳಿರ್ಮನೆಯ ॥ ನೆಲಸಣುಗಿಯ ಕೂಡಿರುತಾ ರಾಮನು । ಮರೆತನಂದಯೋಧ್ಯೆಯ ಮನೆಯ ॥

**ಹೀಗೆ ರಾಮನು ವನವಾಸದಲ್ಲಿ ನಿಂತಿದ್ದನ್ನು ನೋಡಿಯೇ ಪೀಠಿಕೆಯಲ್ಲಿ 'ಭರದೊಳಡವಿಯನಾದರೂ ಸೇರ್ದಿರದೆ' ಎಂದು ಮುಂತಾಗಿ ವಿವರಿಸಿ ಪಿತೃಭಕ್ತಿಯನ್ನು ಮಾಡಹೇಳಿದ್ದು.**



# ಪಾದುಕಾಸ್ಥಾಪನೆ

## ಪೀಠಿಕೆ—ಬಂಧುಪ್ರೇಮ

ಕಲ್ಯಾಣಿ—ಆದಿತಾಳ

ಬಂಧುಪ್ರೇಮವನು । ನೀ ತೋರಿಸೋ । ಬಂಧುಪ್ರೇಮವನು ॥ ಪ ॥ ಬಂಧುಪ್ರೇಮವ । ನಿಂದು ನೀ ತೋರಿಸೆ ॥ ಎಂದೆಂದಿಗು ನಿನ್ನ । ಹೊಂದಿರುವುದು ಕೀರ್ತಿ ॥ ಅ.ಪ ॥ ಒಡಹುಟ್ಟಿದವರ । ಕೆಡಿಸಲು ಯೋಚಿಪ । ಕೆಡುಕರೆಲ್ಲರನ್ನು ॥ ಸಡಗರದಲಿ ನೀ । ನಡುಗಿಸುವವರೊಳು । ಬಿಡದಿರು ಧೈರ್ಯವ । ಸಡಗರದಿಂದಲಿ ॥ ೧ ॥ ಒಡಹುಟ್ಟಿದವರ । ಕೆಡುಕಿನಿಂದ ಬಹ । ಬೆಡಗು ಬೇಡವೆಂದು ॥ ಬಿಡಲು ಬೇಕು ನೀ । ಪೊಡವಿಯ ಭೋಗವ । ತಡೆಯದೆ ಸಮಸುಖ । ಪಡೆಯ ಬೇಕಾದರೆ ॥ ೨ ॥ ಹಿರಿಯನ ಕಂಡರೆ । ಗುರುವೆಂದಾತನ । ಚರಣಪೂಜೆಯನ್ನು ॥ ವಿರಚಿಸುತವನನು । ನೆರೆ ಅನುಸರಿಪುದೆ । ಧರೆಯೊಳು ಶ್ರೇಯ । ಸ್ಕರವೆಂದೆನಿಪುದು ॥ ೩ ॥

ಪ್ರಾಪಂಚಿಕರಾದ ಜನರು ಎಲ್ಲರಲ್ಲಿಯೂ ಪ್ರೇಮವನ್ನಿಡದೆ ತಮ್ಮ ಶರೀರಸಂಬಂಧಿಗಳ ಮೇಲೆ ಮಾತ್ರ ಬರೀ ಹುಟ್ಟುಗುಣವಾಗಿರುವ ಒಂದು ಬಗೆಯ ಕೀಳುಪ್ರೇಮದ ಆವೇಶದಲ್ಲಿಯೇ ಮುಳುಗಿರುವದನ್ನು ನೋಡಿ ವಿವೇಕಿಗಳು ಪಶ್ಚಾತ್ತಾಪಪಡುವದೇನೆಂದರೆ—

ವೃ॥ ತಾಯುಂ ತಂದೆಯು ನಾನೆಪಟ್ಟಳುತೆ, ನಾವಂ ಸತ್ತು, ಬೇರನ್ನರಾ ।
ಕಾಯುಂ ಬೊಕ್ಕುಗೆವಂ; ಬಳಿಕ್ಕವರುಮಂ ತಾಯ್ತಂದೆಯೆಂದಪ್ಪಿಕೊಂ ॥ ಡಾ!
ಯೆಂದಾಡುವನಿತ್ತಲಂದು ಪಡೆದರ್ಗೆಚ್ಚೈಸನಾತ್ಮಂಗಿದೇಂ । ಮಾಯಾಮೋಹ
ವೊ! ಪೇಳ್ವುದೇನನಕಟಾ!! ರತ್ನಾಕರಾಧೀಶ್ವರಾ ॥ —(ರ.ಶ)

ಟಿ॥ ಕಾಯಂ + ಪೊಕ್ಕು + ಒಗೆವಂ—ಹುಟ್ಟುವನು. ಅವರುಮಂ—ಅವರನ್ನೂ. ಆಯೆಂದಾಡುವಂ—ಆ! ಎಂದು ಆನಂದದಿಂದ ಆಡುವನು. ಅಂದು ಪಡೆದರ್ಗೆ—ಹಿಂದಿನ ಜನ್ಮದಲ್ಲಿ ಹೆತ್ತವರಿಗೆ.

ಈ ಮಾಯಾಪಾಶದಿಂದ ಎಚ್ಚತ್ತುಕೊಳ್ಳಿರೆಂದು ಜ್ಞಾನಿಗಳು ಉಪದೇಶಿಸುವದೆಂತೆಂದರೆ—

ಹುಸೇನಿ—ಆದಿತಾಳ

ಮಾಯಾಪಾಶದ ಬಂಧದೆ ಬರಿದೇ । ನೋಯದಿರೆಲವೋ ಮಾನವ ॥ ಪ ॥
ಮಾಯಾತೀತ ನೀನಾಗುವ ಪರವೋ । ಪಾಯವ ಮಾಡೆಲೋ ಮಾನವ ॥ ಅ.ಪ ॥
ಈ ಲೋಕದ ಪರಲೋಕದ ಸುಖದೊಳು । ಲೋಲನಾಗದಿರೋ ಮಾನವ ॥

ಮೇಲೆ ಮೇಲೆ ನೀನಿದರ ದೋಷಗಳ | ನಾಲೋಚಿಸುತಿರು ಮಾನಸ ||೧|| ರಾಗದ್ವೇಷದ ಸೆಳೆತಕೆ ಸಿಲುಕದೆ| ಜಾಗರೂಕನಿರೊ ಮಾನಸ || ನೀಗಿ ಮೋಹ ದಾವರಣವ ನಿಲ್ಲಿಸು | ಯೋಗವನರಸೋ ಮಾನಸ ||೨|| ಸ್ವೈಯೆನುತಡಿಯಿಡೆ ಮಾಯವಾಗುವವು| ಹೇಯವಿಷಯವಿವು ಮಾನಸ || ಥೀ ಯೆನ್ನುತ ಹಿಂದಿರು ಗಲು ಬೆನ್ನೊಳೆ | ನಾಯಂತೆ ಬಹವು ಮಾನಸ ||೩|| ಪಡೆದೊಡೆ ದುಃಖವು ಪಿಡಿದೊಡೆ ದುಃಖ ಕೈ|ಬಿಡಲುರೆ ದುಃಖವು ಮಾನಸ || ಕೆಡದಿರು ವಿಷಯದ ಗೊಡವೆಗೆ ಹೋಗೆ ಸಂ|ಗಡಿಪುದು ಸಂಕಟ ಮಾನಸ ||೪|| ಇಂದ್ರಜಾಲವೀ ಸರ್ವಪ್ರಪಂಚ; ನಿ | ಸ್ತಂದ್ರಿಯೊಳಿದ ತಿಳಿ ಮಾನಸ || ಇಂದ್ರಿಯಗಳ ಗೆಲು ಶಂಕರಗುರುವರ|ಸಾಂದ್ರಭಕುತಿಯೊಳೆ ಮಾನಸ ||೫|| —(ಅ.ಗೀ.)

ಟಿ|| ಬೆನ್ನೊಳೆ—ಹಿಂದೆಯೆ. ಉರೆ—ಹೆಚ್ಚಾದ. ಸಂಗಡಿಪುದು—ಉಂಟಾಗುವದು. ನಿಸ್ತಂದ್ರಿ—ನಿರಾಲಸ್ಯ.

ಈ ಮಾಯಾಪಾಶವೆಂಬುದು ಇವತ್ತು ನಿನ್ನೆಯದಲ್ಲ; ಮತ್ತೇನೆಂದರೆ—

ಶ್ಲೋ|| ಇಚ್ಛಾದ್ವೇಷಸಮುತ್ಥೇನ ದ್ವನ್ದ್ವಮೋಹೇನ ಭಾರತ, | ಸರ್ವಭೂತಾನಿ ಸಂಮೋಹಂ, ಸರ್ಗೇ ಯಾನ್ತಿ ಪರನ್ತಪ || —(ಭ.ಗೀ)

ಅ|| ಅರ್ಜುನ, ಎಲ್ಲಾ ಪ್ರಾಣಿಗಳೂ ಸೃಷ್ಟಿಕಾಲದಲ್ಲಿಯೇ ಬಯಕೆ, ಹಗೆತನ—ಇವುಳಿಂದ ಉಂಟಾದಂಥ ಸುಖದುಃಖಗಳಿಂದಾಗುವ ಮೋಹಕ್ಕೆ ಒಳಗಾಗಿರುತ್ತವೆ.

ನಮಗೆ ಈ ಮೋಹದಿಂದಾಗಿರುವ ಮುಸುಕು ಪರಮಾತ್ಮನನ್ನು ಕಣ್ಣಿಗೆ ಮರೆಮಾಡುವ ಮುಸುಕಾಗಿ ಪರಿಣಮಿಸಿ ಉಂಟುಮಾಡಿರುವ ನಷ್ಟವೇನೆಂದರೆ—

ಶ್ಲೋ|| ನಾಹಂ ಪ್ರಕಾಶಃ ಸರ್ವಸ್ಯ ಯೋಗಮಾಯಾಸಮಾವೃತಃ || —(ಭ.ಗೀ)

ಅ|| ಯೋಗಮಾಯೆಯ ಮುಸುಕಿನೊಳಗಿರುವವನಾಗಿ ನಾನು ಎಲ್ಲರಿಗೂ ಕಾಣಿಸಿಕೊಳ್ಳುವದಿಲ್ಲ.

ಎಂದು ಭಗವಂತನೇ ಹೇಳಿರುವಂತೆ ನಮಗೆ ದೇವರು ಕಾಣದಂತೆ ಆಗಿದೆ. ಆ ಮುಸುಕನ್ನು ಹೇಗೆ ಕಳೆದುಕೊಳ್ಳಬೇಕೆಂದರೆ—

ತ್ರಿ|| ಭ್ರಷ್ಟದೈವಕೆ ಬಾಯ ಬಿಟ್ಟಲ್ಲಿ ಫಲವಿಲ್ಲ | ಸೃಷ್ಟಿಗೀಶ್ವರನ ಭಜಿಸಿದರೆ ಮುಂದಕ್ಕೆ | ಇಷ್ಟಾರ್ಥವೀವ ಸರ್ವಜ್ಞ || —(ಸ.ಪ)

ಆ ಸೃಷ್ಟಿಗೀಶ್ವರನು ಯಾರೆಂದರೆ—

ಸಾಂ|| ಭವಕಿಂತು ಹೆದರುವೆಯೇಕೆ? ಧೈರ್ಯದಿ ನೀನು | ಭವಭೀತಿಯನು ಬಿಟ್ಟು ಬದುಕು || ರವಿವಂಶಮಣಿಯೆಮ್ಮ ಹಿಂದಿದ್ದರೆ ಯಮನ ಕೋ | ಪವ ಕಂಡು ತಾ ಸುಮ್ಮನಿಹನೆ ? || —(ಮ.ಉ)

ಆದ್ದರಿಂದ ಭಕ್ತರು ಆ ಶ್ರೀರಾಮಪರಮಾತ್ಮನನ್ನು ಪ್ರಾರ್ಥನೆ ಮಾಡುವದೆಂತೆಂದರೆ—

ಖರಹರಪ್ರಿಯ—ಆದಿತಾಳ

ಜನಕಜಾವರ ರಾಮ । ಕರುಣಾಸಾಗರ ॥ ಪ ॥ ಸುರವರನಿಂದ ಲೀ । ಪರಿಚರ್ಯೆಗೊಂಬ । ಸರಸಿಜನಯನ । ಪೊರೆ ನೀ ಎನ್ನ ॥ ಅ.ಪ ॥ ತಿಳಿಯೆ ನಾನು ಜಪವ ತಪವ । ತಿಳಿಯೆ ನಾನು ಪೂಜಾವಿಧವ । ತಿಳಿಯೆ ನಾನು ಸ್ತೋತ್ರವಾ । ರಾಮಚಂದ್ರ ॥ ತಿಳಿಯಲರಿಯೆ ವೇದಾರ್ಥವ । ತಿಳಿಯಲರಿಯೆ ತತ್ತ್ವದಿರವ । ತಿಳಿಯಲರಿಯೆ ಮಂತ್ರಾಕ್ಷರವ । ತಿಳಿಸೆನಗೆ ನಿನ್ನೆರಡಕ್ಷರವ ॥ ೧ ॥ ಗುರುಗಳ ಸೇವಿಸಲರಿಯೆ । ಪರಮಾರ್ಥವ ಸಾಧಿಸಲರಿಯೆ । ಸೆರಗನೊಡ್ಡುವೆನೊ ನಾನು । ರಾಮಚಂದ್ರ ॥ ಹರಿಹರಾತ್ಮಕನೆ ಸ್ವಾಮಿ । ಶರಣು ಬಂದ ನನ್ನ ಮೇಲೆ । ಕರುಣಾರಸವ ಸುರಿಸಿ ನಿನ್ನ । ಸ್ಮರಣೆ ಇತ್ತು ಕಾಪಾಡೆನ್ನ ॥ ೨ ॥ ವಿಷಯಂಗಳ ತೊರೆಯಲರಿಯೆ । ವಿಷಮದೃಷ್ಟಿ ಬಿಡುವದರಿಯೆ । ವಿಷಮನಯನಮಿತ್ರನೆ । ರಾಮಚಂದ್ರ ॥ ಅಸಮಮಹಿಮನಾದ ನಿನ್ನ । ವಶವ ಮಾಡಿಕೊಳ್ಳಲರಿಯೆ । ಬಿಸಜನಯನ ಭಾಗ್ಯವೇಷ । ಬೆಸಗೊಳ್ಳುವೆನೋ ಚಿದ್ವಿಶೇಷ ॥ ೩ ॥ —(ಭಕ್ತಿ.ಗೀ)

ಶ್ರೀರಾಮನ ಸಾಮರ್ಥ್ಯದ ವಿಷಯದಲ್ಲಿ ಕವಿ ಹೇಳುವದೇನೆಂದರೆ—

ಶ್ಲೋ॥ ಶ್ರೀರಾಮಾವಿರ್ಭಾವೋ । ಯತ್ರ ಸ ಇಹ ದೃಶ್ಯತೇ ಮಹತ್ತ್ವೇನ ॥ ಯದನೇಕತಾರಕತ್ವಂ । ಪುನರ್ವಸುತ್ವಂ ಚ ಸರ್ವಜನಸಿದ್ಧಮ್॥ —(ಸು.ಲಾ.)

ಅ॥ ಯಾರಲ್ಲಿ ಶ್ರೀರಾಮನ ಆವಿರ್ಭಾವವಾಗಿದೆಯೋ ಅವನು ಈ ಲೋಕದಲ್ಲಿ ದೊಡ್ಡವನಾಗಿ ಕಾಣುತ್ತಾನೆ. ಏಕೆಂದರೆ (೧) ಅವನು ಹುಟ್ಟಿದ ಪುನರ್ವಸುನಕ್ಷತ್ರವು ಅನೇಕ (ತಾರಕ) ನಕ್ಷತ್ರಗಳಿಂದ ಕೂಡಿದೆ ಮತ್ತು ತನ್ನಲ್ಲಿ ಹುಟ್ಟಿದವರಿಗೆ ಬೇಕಾದಷ್ಟು ಹಣವನ್ನು ಕೊಡುವಂಥದ್ದೆಂದೂ ಎಲ್ಲರಿಗೂ ಗೊತ್ತಿದೆ. ಇದರಿಂದ ಇಲ್ಲಿ ಇನ್ನೂ ಗ್ರಹಿಸಬೇಕಾದ ಅರ್ಥವೇನೆಂದರೆ— (೨) ರಾಮನ ಸಾಕ್ಷಾತ್ಕಾರವನ್ನು ಪಡೆದವರು ಅನೇಕ ದೀನರನ್ನುದ್ಧಾರ ಮಾಡುವವರಾಗುವದೂ ಮತ್ತೆ ಮತ್ತೆ ಬೇಕಾದಷ್ಟು ಹಣವನ್ನು ಕೊಡುವವರಾಗುವದೂ ಎಲ್ಲರಿಗೂ ಗೊತ್ತಿದೆ.

ಆದ್ದರಿಂದ ಅವನಿಗೆ ಶರಣುಹೋದರೆ ಉದ್ಧಾರವಾಗಿಯೇ ತೀರುವದು.

ಶ್ಲೋ॥ ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ॥ —(ಭ.ಗೀ)

ಅ॥ ನನಗೆ ಯಾರು ಶರಣು ಬರುತ್ತಾರೋ ಅವರು ನನ್ನ ಮಾಯೆಯನ್ನು ದಾಟುತ್ತಾರೆ.

ಆ ಮಾಯೆಯನ್ನು ದಾಟಿದವರ ಸ್ಥಿತಿ ಹೇಗಿರುವದೆಂದರೆ—

ವೃ॥ ಇಂಗಡಲೊಳ್ಮುಳುಂಗಿದವೊಲಿರ್ಪುದು; ಮೇಘಪಡಂಗಿದಚ್ಚವೆ । ಳ್ದಿಂಗಳ ಕಾಂತಿಯೊಳ್ಬೆರಸಿದಂತೆವೊಲಿರ್ಪುದು; ಸಿದ್ಧರಾಶಿಯೊಳ್ ॥ ಸಂಗತವಾದವೊಲ್ಮೆರೆವುದಾತ್ಮನೊಳಾತ್ಮನನಾತ್ಮನಿಂದೆ ಕಂ । ಡಂಗರಿಪಂದದಿಂ ನುಡಿಯಲೆನ್ನಳವೇ? ಅಪರಾಜಿತೇಶ್ವರಾ॥ —(ಅ.ಶ)

ಟಿ॥ ಇಂಗಡಲು—ಕ್ಷೀರಸಮುದ್ರ. ಸಂಗತವಾದವೋಲ್—ಕೂಡಿದ ಹಾಗೆ. ಆತ್ಮನೊಳ್+ಆತ್ಮನಂ+ಆತ್ಮನಿಂದೆ—ತನ್ನಲ್ಲಿ ತನ್ನನ್ನು ಮನಸ್ಸಿನಿಂದ.

ಈ ಆತ್ಮಜ್ಞಾನದ ಬಹಿರ್ಲಕ್ಷಣವಾಗಿ ಮನುಷ್ಯನಲ್ಲಿ ತೋರುವ ಧರ್ಮನೀತಿಗಳಲ್ಲಿ ಬಂಧುಪ್ರೇಮವು ಒಂದಾಗಿದೆ. ಭಗವಂತನ ಅನುಗ್ರಹವಾದರೆ ನಮ್ಮಲ್ಲಿ ಬಂಧುಪ್ರೇಮವು ನಮಗೆ ಅರಿವಿಲ್ಲದಂತೆ ಮೈಗೂಡುವದು. ಹೇಗೆಂದರೆ—

ತ್ರಿ॥ ಇಂಗಿನೊಳು ನಾತವನು, ತೆಂಗಿನೊಳಗೆಳೆನೀರ, । ಭೃಂಗಕೋಕಿಲೆಯ<br>
ಕಂಠದಿ ಗಾಯನವ । ತುಂಬಿದವರಾರು ? ಸರ್ವಜ್ಞ ॥ —(ಸ.ಪ)

ಆ ಬಂಧುಪ್ರೇಮದ ವಿಷಯದಲ್ಲಿ ಶ್ರೀರಾಮಚಂದ್ರನ ಅಭಿಪ್ರಾಯವಿಶೇಷವೇನೆಂದರೆ—

ಶ್ಲೋ॥ ದೇಶೇ ದೇಶೇ ಕಲತ್ರಾಣಿ, ದೇಶೇ ದೇಶೇ ಚ ಬಾಂಧವಾಃ । ತಂ ತು<br>
ದೇಶಂ ನ ಪಶ್ಯಾಮಿ ಯತ್ರ ಭ್ರಾತಾ ಸಹೋದರಃ ॥ —(ಶ್ರೀ.ರಾ)

ಅ॥ ಎಲ್ಲೆಲ್ಲಿಯೂ ಹೆಂಡಂದಿರು; ಎಲ್ಲೆಲ್ಲಿಯೂ ಬಾಂಧವರು; ಸಹೋದರನಾದ ತಮ್ಮನಿರುವ ದೇಶವನ್ನು ಮಾತ್ರ ನಾನು ಕಾಣೆ.

ಈ ಬಂಧುಪ್ರೇಮದ ವಿಷಯದಲ್ಲಿಯೇ ಧರ್ಮರಾಯನು ತನ್ನ ತಮ್ಮಂದಿರಿಲ್ಲದ ಸ್ವರ್ಗದ ಬಳಿಯಲ್ಲಿ ನಿಂತು ಹೇಳಿದ್ದೇನೆಂದರೆ—

ಶ್ಲೋ॥ ಕಿಂ ಮೇ ಭ್ರಾತೃವಿಹೀನಸ್ಯ ಸ್ವರ್ಗೇಣ ಸುರಸತ್ತಮ । ಯತ್ರ ತೇ<br>
ಮಮ ಸ ಸ್ವರ್ಗಃ ನಾಯಂ ಸ್ವರ್ಗೋ ಮತೋ ಮಮ ॥ —(ಸಂ.ಭಾರ)

ಅ॥ ಹೆ, ಇಂದ್ರನೆ, ತಮ್ಮಂದಿರಿಲ್ಲದ ಸ್ವರ್ಗದಿಂದ ನನಗೇನು? ಅವರೆಲ್ಲಿರುವರೋ ಅದೇ ನನಗೆ ಸ್ವರ್ಗ. ಇದು ನನಗೆ ಸ್ವರ್ಗವಲ್ಲ.

ಪುರಾಣಕಾಲಿಕರ ಮಾತಂತಿರಲಿ. ಒಬ್ಬ ಆಧುನಿಕರಾಜನು ಕೂಡ ಹೇಳಿರುವದೇನೆಂದರೆ—

ಕಂ॥ ಧರಣಿಯೊಳಗಣ್ಣತಮ್ಮಂ। ದಿರ ಭಾವಂ ಕಣ್ಗಳೆರಡರಂತಿರೆ ತೋರ್ಕುಂ॥<br>
ಇರದೊಂದು ಕಣ್ಗೆ ರುಜೆ ಬರೆ। ಪರಿಕಿಸುತಿನ್ನೊಂದು ಕಣ್ಣದೇಂ ಸಹಿಸುವದೇ॥<br>
—(ಕೃ.ಮ)

ಟಿ॥ ಇದು ಮೈಸೂರ ರಾಜಒಡೆಯರು ತಮ್ಮನುಗ್ರಹವನ್ನು ಬಯಸಿ ತಮ್ಮಣ್ಣನ ಕಣ್ಣುಗಳನ್ನು ಕೀಳಲೆಳಸಿದ್ದ ಸೇವಕನಿಗೆ ಹೇಳಿದ ಮಾತು.

ದೊಡ್ಡವರು ಹೇಳಿರುವ ಇಂಥ ಉಪದೇಶವನ್ನು ಸರ್ವರೀತಿಯಿಂದಲೂ ಅನುಕರಣಮಾಡುವದಕ್ಕೆ ಆಗದೆ ಇದ್ದರೂ—

ಶ್ಲೋ॥ ಅನುಗನ್ತುಂ ಸತಾಂ ವರ್ತ್ಮ ಕೃತ್ಸ್ನಂ ಯದಿ ನ ಶಕ್ಯತೇ ।<br>
ಸ್ವಲ್ಪಮಪ್ಯನುಗನ್ತವ್ಯಂ ಮಾರ್ಗಸ್ಥೋ ನಾವಸೀದತಿ ॥ —(ಸು.)

ಅ॥ ದೊಡ್ಡವರ ಮೇಲುಪಙ್ಕ್ತಿಯನ್ನು ಸಂಪೂರ್ಣವಾಗಿ ಅನುಕರಣಮಾಡುವದಕ್ಕೆ ಆಗದಿದ್ದರೆ ಸ್ವಲ್ಪವನ್ನಾದರೂ ಅನುಸರಿಸಬೇಕು. ದಾರಿಯಲ್ಲಿರುವವನು ಕೆಡುವದಿಲ್ಲ.

ಆದ್ದರಿಂದಲೇ ಪೂರ್ವಿಕರು "ಬಂಧುಪ್ರೇಮವನು ನೀ ತೋರಿಸೋ" ಎಂದುಪದೇಶಿಸಿರುವರು. ಈ ಬಂಧುಪ್ರೇಮಕ್ಕೆ ಉದಾಹರಣೆಯಾಗಿ ಪಾದುಕಾಸ್ಥಾಪನೆಯ ಆಖ್ಯಾನವು ನಿರೂಪಣಮಾಡಲಾಗುವದು.





# ಆಖ್ಯಾನ

ಶ್ರೀರಾಮನು ಅತ್ತ ಚಿತ್ರಕೂಟಕ್ಕೆ ಹೋಗುವಷ್ಟರಲ್ಲಿ ಇತ್ತ ಸುಮಂತ್ರನು ದಶರಥನ ಬಳಿಗೆ ಬಂದನು. ಮತ್ತು—

ಕೀ॥ ಬಂದು ಸುಮಂತ್ರನು ರಾಘವನಾಜ್ಞೆಯು । ನಂದು ತನ್ನ ಶಿರದೊಳು ತಳೆದು ॥ ದಂದುಗದಿಂ ದಶರಥಗೆರಗಿದನಿಗೊ! । ಮಂದಭಾಗ್ಯನೆಂದಳವಳಿದು ॥

ಸುಮಂತ್ರನು ರಾಮಲಕ್ಷ್ಮಣರನ್ನು ಕಾಡಿನಲ್ಲಿ ಬಿಟ್ಟು ಬಂದದ್ದನ್ನು ನೋಡಿ ಎಲ್ಲರೂ ದುಃಖಿಸುತ್ತಿರಲು ದಶರಥನು ಅವನನ್ನು ಮಾತಾಡಿಸುತ್ತಾನೆ—

ಆನಂದಭೈರವಿ—ಅಟತಾಳ.

ಎಲ್ಲಿ ಬಿಟ್ಟೆಯೋ ಎನ್ನ ಸುತರ । ಪ್ರಾಣಹಿತರ ॥ ಪ ॥ ಬಹು । ಕಲ್ಲುಮನದಿ ಸೀತೆಯನ್ನೂ ಸುಮಂತ್ರ ॥ಅ.ಪ॥ ಕಾಡೊಳೆಂತಿರುವರೋ । ಬಳಲುವರೋ । ಬಹು । ಮೂಢನಾದ ನನ್ನಿಂದೆಂತಳಲುವರೋ? ॥ ರೂಢಿಯೊಳೇನ ತಿನ್ನುವರೋ । ಎನ್ನುವರೋ । ಮಾ । ತಾಡಲಿನ್ನೇನೆನಗೇನ ಹೇಳಿದರೋ? ॥ ೧ ॥ ಬಿಟ್ಟೆ ನೀನೆಂತವರನ್ನು । ಪೇಳೊ ಇನ್ನು । ಇದು । ಕಟ್ಟಕಡೆಗೆ ತರುವದು ದುಃಖವನ್ನು ॥ ಸುಟ್ಟೆನೋ ನಾ ವಂಶವನ್ನು । ಕೀರ್ತಿಯನ್ನು । ಮುಂದೆ । ಬಿಟ್ಟೆದೋರದು ಪೇಳೋ ಗೆಯ್ಮೆನೇನನ್ನು? ॥ ೨ ॥ ಉಂಡರೇನನು ಪೇಳೋ ಅಲ್ಲಿ । ವನದಲ್ಲಿ । ಮುಕ್ಕ । ಳಂಡಲೆಯುತ ತಾವು ಮಲಗಿದರೆಲ್ಲಿ? ॥ ಭಂಡನಾದೆನೋ ಜಗದಲ್ಲಿ । ಜನರಲ್ಲಿ । ನಾನು । ಕಂಡೆನೋ ಕಾಣಬಾರದುದನು ಇಲ್ಲಿ ॥ ೩ ॥

ಅದಕ್ಕೆ ಸುಮಂತ್ರನ ಉತ್ತರ—

ಸಾ॥ ಸುರನದಿಯೆಡೆಯೊಳು ಜಟೆಯನು ಧರಿಸಿದ । ತರಳರು ಸೀತೆಯ ಗೂಡಿ ॥ ತೆರಳಿದರೈ ವನಕವಧಿಯು ಮುಗಿಯಲು । ಬರುವ ಭರವಸ ನೀಡಿ ॥

ಈ ಮಾತನ್ನು ಕೇಳುತ್ತಲೇ ದುಃಖಾತಿಶಯದಿಂದ—

ವ॥ ಎನುತ ಬಹಿರಂಗದ ಮನಸ್ಸಂ । ಜನಿತಮಾಯಾಪ್ರಪಂಚವ । ನೊನೆದು ನಿರ್ಮಳಸಚ್ಚಿದಾನಂದಸ್ವರೂಪಕದ ॥ ನೆನೆಸುತಯೋಗಜ್ಞಾನತತ್ತ್ವದ । ನೆನಹಿನಲಿ ನಿಜದೈಕ್ಯತರಭಾ । ವನೆಯುಲಿಟ್ಟನು ನಿಜಕಳೇವರವನು ಮಹೀಪಾಲ ॥

—(ತೊ.ರಾ)

ಟಿ॥ ಎನುತ—ಯೌವನಕಾಲದಲ್ಲಿ ತಾನು ಬೇಟೆಗೆ ಹೋಗಿದ್ದಾಗ ಅರ್ಧರಾತ್ರಿಯಲ್ಲಿ ಮುದುಕರಾದ ತಂದೆತಾಯಿಗಳಿಗೆ ನೀರನ್ನು ತೆಗೆದುಕೊಂಡು ಹೋಗಲು ಒಬ್ಬ ಮುನಿಪುತ್ರನು ನೀರಲ್ಲಿ ಗಡಿಗೆಯನ್ನು ಮುಳುಗಿಸಿದಾಗ ಆ ಶಬ್ದವನ್ನು ಕೇಳಿ ಅದನ್ನು ಆನೆಯದೆಂದು ತಿಳಿದು ತನಗೆ ತಿಳಿದಿದ್ದ ಶಬ್ದವೇಧಿವಿದ್ಯೆಯಿಂದ ಅವನನ್ನು ಕೊಂದದ್ದರಿಂದ ಅವನ ತಂದೆಯಾದ ತಾಂಡವನೆಂಬ ವೈಶ್ಯಮುನಿಯು ಪುತ್ರಶೋಕದಿಂದ ಪ್ರಾಣವನ್ನು ಬಿಡೆಂದು ನನಗೆ ಶಾಪವನ್ನು ಕೊಟ್ಟಿದ್ದನೆಂದು ಹೇಳುತ್ತ. ಒನೆದು—ಬರೀ ತೋರಿಕೆಯದೆಂದು ಲಯಚಿಂತನೆಯನ್ನು ಮಾಡಿ. ಕಳೇವರ—ಶರೀರ.

ಇದನ್ನು ಚಂಪೂಕಾರರು ವರ್ಣಿಸಿರುವದೇನೆಂದರೆ—

ವೃ॥ ನಾಕ್ರಾಂತ್ವಸ್ತ್ರಿದಿವಃ ಪರೈಸ್ಸುಮನಸಾಂ ಕಾನ್ತಾ ನ ಬನ್ದೀಕೃತಾ । ನಾಕೀರ್ಣಂ ಪುರುಹೂತಶಾಸನಧರೈಸ್ಸಾಕೇತಬಾಹ್ಯಾಙ್ಗಣಮ್ ॥ ನಾದಿಷ್ಟಾಸ್ಸಚಿವಾಶ್ಚ ಭೂತಲಪರಿತ್ರಾಣಾಯ ಯದ್ಯಪ್ಯಸೌ । ನಾಕಂ ಶೋಕವಶಾದಗಾದ್ದಶರಥೋ ನಾಸ್ಥಾಂ ವಹನ್ವಾಹನೇ ॥ —(ರಾ.ಚಂ.)

ಅ॥ ಸ್ವರ್ಗಕ್ಕೆ ಶತ್ರುಗಳು ಮುತ್ತಿಗೆಯನ್ನು ಹಾಕಿಲ್ಲ; ದೇವಸ್ತ್ರೀಯರನ್ನು ಸೆರೆಯಿಟ್ಟಿಲ್ಲ; ಅಯೋಧ್ಯಾಪಟ್ಟಣದ ಹೊರಗೆ ಇಂದ್ರನಾಜ್ಞೆಯನ್ನು ಪಡೆದು ಕರೆಯಬಂದಿರುವವರು ತುಂಬಿಲ್ಲ; ಭೂಮಂಡಲದ ಆಳುವಿಕೆಯ ವಿಷಯಕ್ಕೆ ಮಂತ್ರಿಗಳಿಗಪ್ಪಣೆಯನ್ನು ಮಾಡಿಲ್ಲ; ಆದರೂ ದಶರಥನು ದುಃಖಾತಿಶಯದಿಂದ ಯಾವದೊಂದು ವಾಹನವನ್ನು ಕೂಡ ಅಪೇಕ್ಷಿಸದೆ ಸ್ವರ್ಗವನ್ನು ಕುರಿತು ತೆರಳಿದನು.

ಆಮೇಲೇನಾಯಿತೆಂದರೆ—

ದಿಂ॥ ಅಳುವ ಹೆಂಗಳನಾ ಪ್ರಜೆಗಳೆಲ್ಲರನ್ನು । ತಿಳುಹಿ ತೈಲಕಟಾಹದೊಳು ರಾಜನನ್ನು ॥ ಗಳಿಲಸಿಟ್ಟಾಗಳ್ ಕರೆಯೆ ಭರತನನ್ನು । ಕಳುಹಿದಂ ಮುನಿ ತಾ ಜಿಡದೆ ದೂತರನ್ನು ॥

ದೂತರು ಬಂದೊಡನೆ ಶತ್ರುಘ್ನನನ್ನು ಕರೆದುಕೊಂಡು ಹೊರಟ ಭರತನು ಬರುತ್ತ ದಾರಿಯಲ್ಲಿ—

ಶ್ಲೋ॥ ನಗರಂ ಭ್ರಷ್ಟಲಕ್ಷ್ಮೀಕಂ ಜನಸಮ್ಬಾಧವರ್ಜಿತಮ್ । ಉತ್ಸವೈಶ್ಚ ಪರಿತ್ಯಕ್ತಂ ದೃಷ್ಟ್ವಾ ಚಿನ್ತಾಪರೋಽಭವತ್ ॥ —(ಅ.ರಾ)

ಅ॥ ಕಾಂತಿಗೆಟ್ಟು ಜನರ ಓಡಾಟವಿಲ್ಲದೆ ಯಾವ ಉತ್ಸವವೂ ಇಲ್ಲದೆ ಇರುವ ಅಯೋಧ್ಯೆಯನ್ನು ನೋಡಿ ಭರತನು ಚಿಂತೆಯನ್ನು ತಾಳಿದನು.

ಹೀಗೆ ಗಾಬರಿಗೊಂಡು ಬಂದು ಒಡನೆ—

ಕಿಂ॥ ಭರತನಂದು ಕೈಕೆಯ ಪದಕೆರಗುತೆ । ಇರುವನೆಲ್ಲಿ ಪಿತನೆಂದೆನಲು ॥ ತೆರಳಿದ ರಾಮನ ನೆನೆಯುತ ದಿವಕೆನೆ । ಭರತಗೆ ಬಂದುದು ಪಿರಿದಳಲು ॥

ಆಗ ಕೈಕೆ ಮಗನನ್ನು ಸಮಾಧಾನಗೊಳಿಸುತ್ತಾಳೆ—

ಹಿಂದೂಸ್ಥಾನಿಕಾಪಿ—ರೂಪಕ

ಅಳುವದಕಿದು ಸಮಯವಲ್ಲ । ಕೇಳು ಮಗನೆ ಹೇಳುವೆ ॥ ಪ ॥ ಕೇಳು ಮಗನೆ ಹೇಳುವೆ । ನೀ । ಭೂಮಿಯನ್ನೆ ಆಳುವೆ ॥ಅ.ಪ॥ ಹಿರಿಯ ಮಗಗೆ ಧರೆಯನಿತ್ತು । ಮೆರೆಯಲೆಂದು ರಾಜನಿರಲು ॥ ಭರದಿ ದೊರೆಯೆ ನಿನಗೆ ರಾಜ್ಯ । ವಿರಚಿಸಿರ್ಪೆ ನಿನ್ನ ಹಿತವ ॥೧॥ ಇರಲು ರಾಮನಿಲ್ಲಿ ನಿನಗೆ । ಅರಿಯೆ ಶತ್ರುವಪ್ಪನೆಂದು ॥ ಅರಿತವನನು ವನವಾಸಕೆ । ತೆರಳಿಸಿಹೆನು ಹೇ, ಬಾಲ ॥ ೨ ॥ ಮುನ್ನ ಕೊಟ್ಟ ವರಗಳೆರಡ । ನಿನ್ನು ಕೇಳಲೊಪ್ಪಿಯವುಗ । ಳನ್ನು ಹೇಳಿ ನೃಪನು ದುಃಖ । ವನ್ನು

ತಳೆದನಾಡಲೇನು ॥ ೩ ॥ ಅಣ್ಣನೊಡನೆ ಪೋದನಾ । ಚಿಣ್ಣನಾದ ಲಕ್ಷ್ಮಣನು॥ ಬಿನ್ನಣದಿಂ ಸೀತೆ ಗಂಡ । ನನ್ನು ಬಿಡದೆ ಹೊರಟಳಾಗ ॥ ೪ ॥ ಅವರು ಪುರವ ಬಿಟ್ಟು ಹೊರಡೆ । ಅವನಿಯೊಡೆಯ ದುಃಖದಿಂದ ॥ ದಿವಕ್ಕೈದಿದನ್ನೈ ಹಾ! ರಾ । ಘವಲಕ್ಷ್ಮಣಸೀತೆಯೆನುತ ॥ ೫ ॥

ಇದನ್ನು ಕೇಳುತ್ತಲೆ ಭರತನು ಹೇಳುತ್ತಾನೆ—

ಕೀ॥ ಪಾಪಿ, ಘೋರೆ, ನೀನಣ್ಣನ ಕೊಂದಿಹೆ; । ಪಾಪಿ ನಾನು ನಿನ್ನಯ ಮಗನು; ॥ ಈಪರಿಯನು ಸಹಿಸದ ನಾನಿನ್ನಯ । ರೂಪನಳಿಪೆನಗ್ನಿಯೊಳಿದನು ॥

ಆಮೇಲೇನಾಯಿತೆಂದರೆ—

ಷ॥ ಕೇಳಿದನು ಸುತವಿರಹದವನೀ । ಪಾಲಮರಣವನಧಿಕಶೋಕ । ಜ್ವಾಲೆ ಧಳ್ಳಿಸಿತಗ್ರಜನ್ಮವಿಯೋಗದಿಂದವನು ॥ ಆಲಿಯಲಿ ಕಿಡಿಗೆದರಿ ಜನನಿಯ । ಮೇಲೆ ಮುಳಿದಳಿವಿಂಗೆ ಜಡಿದನು । ಬಾಳ ಬಳಿಕ ವಸಿಷ್ಠ ಕಂಡಡಹಾಯ್ದನಾಯುಧಕೆ ॥
—(ತೊ.ರಾ.)

ಟಿ॥ ಅಗ್ರಜನ್ಮವಿಯೋಗದಿಂದ—ಅಣ್ಣನ ಅಗಲಿಕೆಯಿಂದ.. ಅಳಿವಿಂಗೆ—ಕೊಲ್ಲಬೇಕೆಂದು. ಬಾಳ—ಕತ್ತಿಯನ್ನು. ಅಡಹಾಯ್ದನು—ಅಡ್ಡಬಂದನು.

ಶ್ಲೋ॥ ಜನನೀತಿವಿಹೀನಾ ಮೇ ಜನನೀತಿ ಸ ಧರ್ಮವಿತ್ । ನಿರಗಾನ್ನಿರ-ಯಾಗ್ವೀರೋ ನಿರಯಾದಿವ ನಾನುಜಃ ॥ —(ರಾ.ಚಂ)

ಟೀ॥ (ಜನ+ನೀತಿ+ವಿಹೀನಾ, ಮೇ ಜನನೀ+ಇತಿ) ನನ್ನ ತಾಯಿಯು ಜನಸಾಮಾನ್ಯವಾದ ನೀತಿ ಇಲ್ಲದವಳೆಂದು ಧರ್ಮಜ್ಞನಾದ ಆ ಭರತನು ತಮ್ಮನಿಂದ ಕೂಡಿ (ನಿರಯಾತ್+ಇವ) ನರಕದಿಂದ ಹೊರಬೀಳುವಂತೆ (ನಿಲಯಾತ್) ಕೈಕೆಯ ಮನೆಯಿಂದ (ನಿರಗಾತ್) ಹೊರಬಿದ್ದನು.

ಈ ನಡೆವಳಿಕೆಯನ್ನು ಲಕ್ಷ್ಯದಲ್ಲಿಟ್ಟುಕೊಂಡೇ ಭಗವದ್ಭಕ್ತರು 'ಒಡಹುಟ್ಟಿದವರ ಕೆಡಿಸಲು ಯೋಚಿಸ' ಎಂಬ ನುಡಿಯನ್ನು ಪೀಠಿಕೆಯಲ್ಲಿ ಹೇಳಿದ್ದು.

ಶ್ಲೋ॥ ಮಿತ್ರಸ್ವಜನಬಂಧೂನಾಂ ಬುದ್ಧೇರ್ಧೈರ್ಯಸ್ಯ ಚಾತ್ಮನಃ । ಆಪನ್ನಿಕಷಪಾಷಾಣೇ ನರೋ ಜಾನಾತಿ ಸಾರತಾಮ್ ॥ —(ಸು.)

ಅ॥ ತನ್ನ ಗೆಳೆಯರು, ಸಂಬಂಧಿಗಳು, ಬಂಧುಗಳು, ಬುದ್ಧಿ, ಧೈರ್ಯ— ಇವುಗಳ ಸಾರವನ್ನು ಮನುಷ್ಯನು ಆಪತ್ತೆಂಬ ಒರೆಗಲ್ಲಿನಿಂದ ತಿಳಿಯುತ್ತಾನೆ.

ರಾಮನು ವನವಾಸಕ್ಕೆ ಹೋಗಿರುವಾಗ ಭರತನು ತಾಯ ಮುಂದೆ ರಾಮನ ವಿಷಯಕವಾದ ತನ್ನ ಸಹೋದರತ್ವದ ತಿರುಳನ್ನು ಚೆನ್ನಾಗಿ ತೋರಿಸಿ ಕೌಸಲ್ಯೆಯ ಮನೆಗೆ ಬಂದನು.

ಸಾ॥ ಭರತನ ಕಾಣುತ ಕೌಸಲ್ಯೆಯು ಸು । ಯ್ಯಗರೆದಳು ದುಃಖವ ತಾಳಿ ॥ ಭರತನು ಮಾತೆಗೆ ವಂದಿಸಿದನು ನೀ । ಪೊರೆ ತನ್ನನೆನುತ ಹೇಳಿ ॥

ಅವಳು ಹೇಳಿದ್ದೇನೆಂದರೆ—

✓ ಗೀತೆ—ರೂಪಕ

ಏಳು ಭರತ ನೀಂ ಪೇಳಲೇನ ನಾಂ। ಬಾಳುಗೆಡಿಸಿದ ಕಾಳುಬುದ್ಧಿಯ ॥ ಬಾಳನನ್ನ ನಾಂ ಕಾಡಿಗಟ್ಟುತ । ಬಾಳಲೆಂತು ನಾ ಧಾರಿಣಿಯೊಳು ॥ ೧ ॥ ನೀನು ನಗರದೊಳಿಲ್ಲದಾಗ ನಾಂ। ಹೀನಗತಿಯನು ಪಡೆದೆನೀ ಪರಿ ॥ ಹಾನಿಯನ್ನು ನಾ ತಡೆಯಲಾರದೆ। ದೀನಳಾಗಿಹೆ ಪ್ರಾಣಹೋಗದೆ ॥ ೨ ॥

ಆಗ ಭರತನು ಹೇಳಿದ್ದು—

ಷ॥ ತಾಯೆ, ರಾಜ್ಯವನಾಳುವ ರಘು। ರಾಯನಾತನ ಡಿಂಗರಿಗ ನಾಂ;। ನ್ಯಾಯತಪ್ಪುವನಲ್ಲ; ನಿಮ್ಮಡಿಯಾಣೆ ಸತ್ಯವಿದು; ॥ ಕಾಯುವಾನನವಾಕ್ಯ ಕರ್ಮದೊ। ಳಾ ಯುಕುತಿಯನೆ ನೆನೆದೆನಾದೊಡೆ। ದಾಯದಿಂ ಗೋವಿಪ್ರಹತ್ಯಾದೋಷ ತನಗೆಂದ ॥ —(ರಾ.ಕ.ಕು)

ಟಿ॥ ಡಿಂಗರಿಗ—ಸೇವಕ. ಆ ಯುಕುತಿಯಂ —ಕ್ಷುದ್ರವಾದ ಯುಕ್ತಿಯನ್ನು (ರಾಮನ ರಾಜ್ಯವನ್ನಪಹರಿಸಬೇಕೆಂಬಭಿಪ್ರಾಯವನ್ನು)

ಹೀಗೆ ಕೌಸಲ್ಯೆಯನ್ನು ಸಮಾಧಾನ ಮಾಡಿದ ಮೇಲೆ—

ದಿಂ॥ ಗುರುವಸಿಷ್ಠರೇಳ್ದಿರವನರಿತು ತಾನು । ಭರದೊಳಾ ಪಿತನೂರ್ಧ್ವಕ್ರಿಯಾದಿಯನ್ನು ॥ ಧರಣಿ ಮೆಚ್ಚಲ್ಕಲ್ಲಾನಧರ್ಮವನ್ನು । ಭರತನಾಗಳ್ಗೈದಿರ್ದನೆಲ್ಲವನ್ನು ॥

ಆಮೇಲೆ—

✓ ಕೀ॥ ಅರಸಾಗೆನೆ ಗುರು, ರಾಮನನೇ ತಾ। ನರಸನ ಮಾಡುವೆನೆನೆ ಭರತ॥ ಮೆರೆವುತ್ಸಾಹದಿ ಪೊರಟನು ರಾಮನ। ಕರೆಯಲವನ ನೆನೆಯುತ ನಿರುತ ॥

ಭರತನು ಈ ರೀತಿಯಲ್ಲಿ ತಾನು ಪಟ್ಟಗಟ್ಟಿಕೊಳ್ಳದೆ ಹೊರಬಿದ್ದದ್ದನ್ನು ನೋಡಿಯೇ ಪೀಠಿಕೆಯಲ್ಲಿ "ಒಡಹುಟ್ಟಿದವರ ಕೆಡುಕಿನಿಂದ ಬಹ" ಎಂಬ ನುಡಿಯ ಉಪದೇಶವು ಹೊರಟಿರುವದು. ಈ ಪ್ರಯಾಣದಲ್ಲಿ—

ಷ॥ ಕೇಳಿಗೊಳುತಾ ಭರತನಧಿಕಕ್ಕೈ। ಪಾಳುವನು ಕಾಬುಜ್ಜುಗದ ಪರಿ। ಪಾಳಿಯಿಂದೈದಿದನು ಶೃಂಗೀಶ್ವರನ ಪುರವರವ ॥ ಪಾಳೆಯವನಿದ ಕಾಣುತಾ ಗುಹ । ನಾಳುಕುದುರೆಯ ಕೂಡಿ ಗಮನದ । ಜಾಳ ಯಾವದೊ ತಿಳಿಯಬೇಕೆಂದಲ್ಲಿಗೈತಂದ ॥ —(ತೊ.ರಾ)

ಟಿ॥ ಕೇಳಿಗೊಳುತ—ಆಟದಲ್ಲಿರುವಷ್ಟು ಉತ್ಸಾಹವನ್ನು ಹೊಂದುತ್ತ. ಪರಿಪಾಳಿ—ಮುಂದುವರಿಯುವಿಕೆ. ಜಾಳ—ರಹಸ್ಯವು.

ಒಂದೆರಡು ಮಾತುಗಳಿಂದಲೇ ಭರತನ ಪ್ರೇಮಾತಿಶಯಕ್ಕೆ ಮೆಚ್ಚಿ ಅವನನ್ನು ಸತ್ಕರಿಸಿ ರಾಮನ ಯೋಗಕ್ಷೇಮವನ್ನು ಹೇಳುತ್ತ ಅಲ್ಲಿ ಸೀತಾರಾಮರು ಮಲಗಿದ್ದ ಸ್ಥಲವನ್ನು ಗುಹನು ತೋರಿಸುತ್ತಲೆ ಭರತನ ದುಃಖ—

ನಾದರಾಮಕ್ರಿಯೆ—ಆದಿತಾಳ.

ನೋಡಲೆಂತಿದ ನಾನು । ಆಡಲೀಗಿದಕೇನು?॥ ನಾಡಿನ ಕಣ್ಣಿಗೆ । ಕೇಡಿಗ ನಾನಾದೆ ॥ಪ॥ ರಘುವಂಶದರಸಗೆ । ಮಗೆ ಗುಣಯುತನಿಗೆ ॥ ಬಗೆಯಲೀ ಪರಿಯಾದ । ಹಗರಣವುಚಿತವೆ? ॥ ೧ ॥ ವರಹಂಸತಲ್ಪದೆ । ಮೆರವ ದೇಹವಿದಿಲ್ಲೀ ॥ ಪರಿ ತರು ಮೂಲದಿ । ಉರುಳುವದಾಯಿತೇ? ॥ ೨ ॥ ಭಲರೆ ಲಕ್ಷ್ಮಣ, ನೀನು । ಕುಲಪುತ್ರನಣ್ಣನ ॥ ಕೆಲದೊಳೆ ಇರ್ದು ಭೂ । ತಲದಿ ಪಾವನನಾದೆ ॥ ೩ ॥

ಎಂದು ಸ್ವಲ್ಪ ಹೊತ್ತು ಗೋಳಾಡಿ ಮುಂದೆ—

ಸಾ॥ ಬರುತ ಭರದ್ವಾಜರ ಕಂಡೆರಗಲು । ಭರತನ ಮನವನು ನೋಡಿ॥ ಪರಮೋತ್ಸಾಹದಿ ಸತ್ಕರಿಸಿದರಾ । ಪರಿಯನು ನೆರೆ ಕೊಂಡಾಡಿ ॥

ಭರದ್ವಾಜರು ಸೇನೆಯೊಡಗೂಡಿದ ಭರತನಿಗೆ ಯಥಾಯೋಗ್ಯವಾಗಿ ಉತ್ಕೃಷ್ಟಭೋಜನಾದಿ ಸತ್ಕಾರಗಳನ್ನು ಮಾಡಿದರು. ಉತ್ಕೃಷ್ಟಭೋಜನದ ವಿಷಯದಲ್ಲಿ ಕವಿಗಳು ಹೇಳಿರುವದೇನೆಂದರೆ—

ಶ್ಲೋ॥ ತನುಗ್ರಾಸೇ ಸ ಏವ ಸ್ಯಾದಸುಗ್ರಾಸೇಽಪಿ ಸ ಸ್ಮೃತಃ । ತಸ್ಮಾತ್ಸರ್ವಪ್ರಯತ್ನೇನ ಭವೇನ್ನಿತ್ಯಂ ಸುಭೋಜನಃ ॥ —(ಸು.ಲಾ)

ಅ॥ ತನುಗ್ರಾಸವಾದರೆ ಎಂದರೆ ಊಟವು ಸ್ವಲ್ಪವೇ ಆದರೆ ತನುಗ್ರಾಸವೇ ಆಗುವದು ಎಂದರೆ ಶರೀರವೇ ಸೊರಗಿ ಹೋಗುವದು. ಅ+ಸುಗ್ರಾಸವಾದರೂ ಎಂದರೆ ಒಳ್ಳೆ ಊಟವಲ್ಲದೆ ಹೋದರೂ ಅಸು+ಗ್ರಾಸವಾಗುವದು ಎಂದರೆ ಪ್ರಾಣವೇ ಹೋಗುವದು. ಆದ್ದರಿಂದ ಸರ್ವ ಪ್ರಯತ್ನದಿಂದಲೂ ನಿತ್ಯವೂ ಸುಭೋಜನವಿರಬೇಕು.

ಆ ಸುಭೋಜನಕ್ಕೆ ನಿದರ್ಶನವಾಗಿ ಭರದ್ವಾಜರು ತಮ್ಮ ಯೋಗಸಿದ್ಧಿಯಿಂದ ಮಾಡಿದ್ದ ವ್ಯವಸ್ಥೆಯೇನೆಂದರೆ—

ರ॥ ಮಾಡಿದರಾತಿಥ್ಯವ ಬಲುಬೇಗ । ಭರತನ ಪರಿವಾರಕೆ ॥ ಪ ॥ ಮಾಡಿದ ರಾತಿಥ್ಯವ ಬೇಗದೊಳೆ । ಮೂಡಿ ಮುಳುಗಲೆಲ್ಲರು ಭೋಗದೊಳೆ । ನಾಡರಿಯದ ತೆರದರಮನೆ ತೋರಲು । ಆಡುವೊಡರಿಯದ ಸುಪ್ರಭೆ ಬೀರಲು । ತುರಗಶಾಲೆಗಳು ಗಜಶಾಲೆಗಳು । ವರವರಥಶಾಲೆಗಳೆಂಬಿವುಗಳು । ಪರಿಪರಿ ಚಿತ್ರವಿಚಿತ್ರದಿ ಶೋಭಿಸೆ । ಪರಮಾನಂದಾಸ್ಪದದಿ ವಿರಾಜಿಸೆ । ಅಪರಪರುಚಿತದ ಮನೆಗಳ ಸಾಲು । ಅವನಿಯ ಭೂಷಣವೆನಿಸಿರೆ ಮೇಲು । ಬಿಸುನೀರಿನ ತಣ್ಣೀರಿನ ಬೇರೆ । ಬಸೆಯುವ ಕಾರಂಜಿಗಳುರೆ ತೋರೆ । ಪರಿಪರಿ ಧೌತವಸನಗಳನೆಲ್ಲ । ನೆರಿಹಿಡಿದಿಡೆ ಪೇಳುವದೇಂ ಸೊಲ್ಲ । ಹಾಲುನೊಸರು ತುಪ್ಪದ ಬಾವಿಗಳು । ಕೀಲು ತಿರುಗಿಸಲು ಸುರಿವ ನದಿಗಳು । ಪಚ್ಚದ ಮಣೆಗಳು ಸಾಲಾಗಿರಲು । ಸಜ್ಜಿನೆ ಚಿನ್ನದ ತಟ್ಟೆಯು ಬರಲು । ಬಗೆಬಗೆ ಭೋಜ್ಯಂಗಳು ಭಕ್ಷ್ಯಂಗಳು । ಸೊಗಸು ವಿಹಾರಿ ರಾಜಿಸೆ ತಟ್ಟೆಯೊಳು । ಅದರ ಸುವಾಸನೆ ಹರಿದಿರಲೆಲ್ಲ । ಪದುಳದಡಿಗೆಗಳನಾವನು ಬಲ್ಲ । ಪರಿಮಳಮಾಲ್ಯಾದಿಗಳನಿಬರಿಗೆ । ವರ ಕರ್ಪುರ ತಾಂಬೂಲದ ಸರಿಗೆ । ಮೆರೆವಪ್ಸರನಾಟ್ಯದ ಸವಿ

ವಿಹಾರೆ। ನೆರೆ ಗಂಧರ್ವರ ಗಾನವು ತೋರೆ। ಜನರಲ್ಲದೆ ಗಜತುರಗಾದಿಗಳು। ತಣಿ ಪಂತಾಹಾರವಿಶೇಷಗಳು ॥

ಇದರ ಮೇಲೆ ಭರತನು ಭರದ್ವಾಜರಿಂದ ರಾಮನಿರುವ ಸ್ಥಾನವನ್ನರಿತು ಆ ಆಶ್ರಮದಿಂದ ಮುಂದೆ ಬರುವಾಗ ಚಿತ್ರಕೂಟಪರ್ವತವು ಕಾಣಬಂದದ್ದೆಂತೆಂದರೆ—

ಕಂ॥ ಉರಗಸರದಿಪಿಜಲೋಕಗ । ಳುರುಮಣಿಗಳನ್ನೈದೆ ತಂದು ಕರಗಿಸಿ ವಿಧಿ ತಾಂ ॥ ಕರುವಿಟ್ಟರೆದಿಟ್ಟನೊ ಎನೆ । ಕರಮೆಸೆದುದು ಚಾರುಚಿತ್ರಕೂಟ ಮಹೀಧ್ರಂ ॥ —(ಹ.ರಾ)

ಟಿ॥ ಲೋಕಗಳ+ಉರುಮಣಿಗಳ. ಕರುವಿಟ್ಟರೆದಿಟ್ಟನೊ—ಎರಕಹೊಯ್ದು ಹಾಕಿದ್ದಾನೊ.

ಕಂ॥ ಹರನೊಲ್ ಹರಿಯೊಲ್ ವಿಧಿಯೊಲ್ । ಸುರವರನೊಲ್ ಸೋಮ ಧಾರಿ, ವನಮಾಲಿ, ಮನೋ ॥ ಹರಹಂಸಶೋಭಿ, ವಜ್ರಸ್ಫುರಿತಂ ತಾನೆಂದು ರಂಜಿಸಿತಾ ಶೈಲಂ ॥ —(ಹ.ರಾ)

ಟಿ॥ ಆ ಪರ್ವತವು ಹರನೋಲ್ ಸೋಮಧಾರಿ—ಹರನು ಚಂದ್ರನನ್ನು ಧರಿಸಿದವನು; ಪರ್ವತವು ಸೋಮಲತೆಯುಳ್ಳದ್ದು. ಹರಿಯೊಲ್ ವನಮಾಲಿ—ಹರಿಯು ತುಲಸಿಯ ಹಾರವನ್ನು ಹಾಕಿರುವನು; ಪರ್ವತವು ಮಾಲಾಕಾರವಾದ ವನಗಳುಳ್ಳದ್ದು. ವಿಧಿಯೋಲ್ ಹಂಸಶೋಭಿ—ಬ್ರಹ್ಮನು ತನ್ನ ವಾಹನವಾದ ಹಂಸದಿಂದ ಶೋಭಿಸುವನು; ಪರ್ವತವು ಪರಮಹಂಸಸಂನ್ಯಾಸಿಗಳಿಂದ ಕೂಡಿರುವದು. ಸುರವರನೊಲ್ ವಜ್ರಸ್ಫುರಿತಂ—ಇಂದ್ರನು ವಜ್ರಾಯುಧದಿಂದ ಕೂಡಿರುವನು; ಪರ್ವತವು ವಜ್ರಗಳಿಂದ ಕೂಡಿರುವದು.

✓ ಕೀ॥ ಆ ಗಿರಿಯೆಡೆಯೊಳು ಮುನಿಗಳ ಹೋಮದ । ನಾಗಸಕಪರುಪ ಧೂಮವನು ॥ ಆಗ ಕಂಡು ಸೇನೆಯ ನಿಲ್ಲಿಸಿ ತಾ। ಬೇಗ ಕೊಂಡಕಾಲ್ನಡಿಗೆಯನು॥

ಸ್ವಲ್ಪದೂರ ನಡೆಯುವದರೊಳಗೇ—

ಶ್ಲೋ॥ ದದರ್ಶ ದೂರಾದತಿಭಾಸುರಂ ಶುಭಮ್ । ರಾಮಸ್ಯ ಗೇಹಂ ಮುನಿವೃಂದಸೇವಿತಮ್ ॥ ವೃಕ್ಷಾಗ್ರಸಂಲಗ್ನಸುವಲ್ಕಲಾಜಿನಮ್ । ರಾಮಾಭಿ-ರಾಮಂ ಭರತಃ ಸಹಾನುಜಃ ॥ —(ಅ.ರಾ)

ತಾ॥ ಶತ್ರುಘ್ನಸಮೇತನಾದ ಭರತನು ಬಹಳ ಮನೋಹರವಾಗಿಯೂ ಮಂಗಲಕರವಾಗಿಯೂ ಅನೇಕ ಋಷಿಗಳನ್ನೊಳಗೊಂಡಿರುವದಾಗಿಯೂ ಮರದ ಮೇಲೆ ಕೃಷ್ಣಾಜಿನಗಳನ್ನೂ ನಾರುಬಟ್ಟೆಗಳನ್ನೂ ಉಳ್ಳದ್ದಾಗಿಯೂ ಇರುವ ರಾಮನ ಮನೆಯನ್ನು ದೂರದಿಂದಲೆ ಕಂಡನು.

ಇಷ್ಟರಲ್ಲಿ—

✓ ಕೀ॥ ಜನದ ಸದ್ದಿದೇನೆನೆ ರಾಮನು ಲ। ಕ್ಷ್ಮಣನಾ ಗಿರಿಯನು ಹತ್ತಿಳಿದು॥ ಕ್ಷಣದಿ ಪೇಳಿದನು ಭರತನು ತಾ ಹಗೆ। ತನದಿ ಬರುವನೆಂದೇ ತಿಳಿದು ॥

ಲಕ್ಷ್ಮಣನು ಬಂದು ಹೇಳಿದ್ದೇನೆಂದರೆ—

ಷ॥ ಅಗಲದಕೇಸೀತ ವೈರೋ। ದ್ಯೋಗಪರಿಗೊಡರಿಸಿದನಾದೊಡೆ। ಕಾಗೆ ಹದ್ದಿಗೆ ಹರಹುವೆನು ಕಡಿದೀ ಚತುರ್ಬಲವ ॥ ಮೇಗೆ ಬರಲಪಕೀರ್ತಿಯದಕೇ।

ನೀಗಳೆಣಿಕೆಯೆನುತ್ತ ಕರುಣಾ। ಸಾಗರನ ಬಳಿಗೈದಿ ಬಿನ್ನಹವಮಾಡಿದನು ಹದನ॥
—(ತೊ.ರಾ)

ಟಿ॥ ಒಡರಿಸಿದನಾದೊಡೆ—ಯತ್ನಮಾಡಿದವನಾದರೆ. ಎಣಿಕೆ—ವಿಚಾರ.

ಅದಕ್ಕೆ ರಾಮನ ಉತ್ತರ—

✓ ಸಾ॥ ತಿಳಿಯಬೇಡ ನೀ ಭರತನನಾಪರಿ । ಇಳಿಯಲಿ ನಿನ್ನಯ ಕೋಪ ॥ ಕುಲದೀಪಕನಹ ತಮ್ಮನ ನೋಡದೊ। ಡಳಿವುದು ನಿನ್ನಯ ತಾಪ ॥

ಇಷ್ಟು ಹೇಳುತ್ತಿರುವಾಗ ಭರತನು ಹತ್ತಿರಕ್ಕೆ ಬರುತ್ತಿದ್ದಾನೆ—

ಶ್ಲೋ॥ ಸ ತತ್ರ ವಜ್ರಾಂಕುಶವಾರಿಜಾಂಚಿತ । ಧ್ವಜಾದಿಚಿಹ್ನಾನಿ ಪದಾನಿ ಸರ್ವತಃ ॥ ದದರ್ಶ ರಾಮಸ್ಯ ಭುವೋಽತಿಮಂಗಲಾನ್ಯಚೇಷ್ಟಯತ್ಪಾದ ರಜಸ್ಸು ಸಾನುಜಃ ॥
—(ಅ.ರಾ)

ಟಿ॥ ತಮ್ಮನೊಡನಿರುವ ಭರತನು ರಾಮನಿರುವ ಪ್ರದೇಶದ ಮುಂಗಡೆಯ ಧೂಲಿಯಲ್ಲಿ ಕೇವಲ ಮಂಗಲಕರವಾದಂಥ ವಜ್ರ, ಅಂಕುಶ, ಕಮಲ, ಧ್ವಜ— ಮೊದಲಾದ ಚಿಹ್ನೆಗಳಿಂದ ಕೂಡಿದ ರಾಮಪಾದಗಳನ್ನು ಕಂಡನು.

ಆಗ ಅವನು ಅಣ್ಣನನ್ನು ನೆನೆಸಿಕೊಂಡದ್ದೆಂತೆಂದರೆ—

✓ ಚಾ॥ ದೇವದೇವನೆ, ಮುನಿಯ ಪತ್ನಿಯ ಶಾಪವನು ಕಳೆದಿರ್ಪನೆ,। ಭಾವಿಸುತ ಬಂದವರ ಮೇಲೆ ಕೃಪಾವಲೋಕನಗೆಯ್ವನೆ, ॥ ಆ ಪಿನಾಕಹರಧನುವ ಮುರಿದು ಮಹಾವಿಭವವನು ತಾಳ್ದನೇ, । ಪಾವನನೆ ನಮಿಸುವೆನು ಭೃಗುಜನ ಭಾವವನು ತಿದ್ದಿರುವನೇ ॥

ಇಷ್ಟು ಹೇಳುತ್ತ ಮುಂದೆ ಬಂದು ಅಣ್ಣನ ಪಾದದ ಮೇಲೆ ಹಣೆಯನ್ನಿಡುತ್ತಲೆ ಅವನ ಸ್ಥಿತಿಯೇನಾಯಿತೆಂದರೆ—

ಶ್ಲೋ॥ ಆರ್ಯೇತ್ಯೇವಾಥ ಸಂಕ್ರುಶ್ಯ ವ್ಯಾಹರ್ತುಂ ನಾಶಕತ್ತದಾ ॥
—(ಶ್ರೀ.ರಾ)

ಟಿ॥ ಆರ್ಯನೇ ಎಂದು ಅಳುತ್ತ ಮುಂದೆ ಮಾತಾಡುವದಕ್ಕೆ ಅವನಿಂದ ಆಗಲಿಲ್ಲ.

ಆಗ ರಾಮನು—

✓ ಕೀ॥ ಭರತನನಪ್ಪುತೆ ತಾಯಿಯರನು ಕಂ। ಡೆರಗಿ ತಂದೆಯ ವಿಚಾರಿಸಲು ॥ ಸುರನಗರಿಗೆ ದಶರಥ ಪೋದುದನವ। ರರುಹೆ ರಾಮನಿಗೆ ಬಂತಳಲು ॥

ಅವನು ದುಃಖಿಸಿದ್ದು—

ತೋಡಿ—ಆದಿತಾಳ

ಎಲ್ಲಿಗೈದಿದೆ? ಹಾ ತಾತ ನೀನು ॥ ಪ ॥ ಇಲ್ಲಿ ನಿನ್ನವರ ನಮ್ಮನೆಲ್ಲ ಬಿಟ್ಟು ॥ ಅ.ಪ ॥ ನಿನ್ನ ದರ್ಶನದಾಶೆಯಿಲ್ಲದೆ । ಬಣ್ಣಗೆಟ್ಟಿನೊ ನನ್ನುತಾಂಗನೆ ॥ ಚಿಣ್ಣರನ್ನು ನೀ ನಾರಿಗೊಪ್ಪಿಸಿದೆ । ಕಣ್ಣುಮರೆಯಾಗಿ ಏನು ಕಾರಣದಿ ॥ ೧ ॥ ಎಮ್ಮ ಮೇಲಣ ಪ್ರೀತಿಯಿಂದ ನೀನು । ನುಮ್ಮನಿಂತು ಪ್ರಾಣತ್ಯಾಗ ಮಾಡಿದೆಯ? ॥

ಎಮ್ಮ ಪ್ರಾಣವೂ ಹೋಗಲೊಲ್ಲದೇಕೋ? । ಒಮ್ಮೆ ನಿನ್ನ ವಿರಹವನ್ನು ಸಹಿಸ ದೀಗ ॥ ೨ ॥ ತಂದೆ ನಿನ್ನ ಆಜ್ಞೆಯನ್ನು ನಡೆಸಿ ನಾವು । ಒಂದುದನ್ನು ನೀನು ಕಾಣದಾದೆಯ? ॥ ಇಂದು ನೀನು ಧನ್ಯ; ನಿನ್ನ ಮಾತಿಗೆ । ಕುಂದು ಬಾರ ದಂತೆ ಕಾಪಾಡಿಕೊಂಡೆ ॥ ೩ ॥

ಕಂ॥ ಜನಕಾ, ನಿಜಗುಣತೋಷಿತ । ಜನಕಾವನಿಪಾಲ, ದೇವಪತಿರಿಪು ಭಯುಸಂ ॥ ಜನಕಾ, ಕೋಸಲಜನರಂ । ಜನ, ಕಾಲಾಧೀನನಾದೆ ನೀನೆಂತಕಟಾ!॥

—(ರಾ.ನಾ)

ಆಮೇಲೆ ಎಲ್ಲರೂ ಗಂಗೆಯಲ್ಲಿ ಸ್ನಾನವನ್ನು ಮಾಡಿ ನೀರುಬಿಟ್ಟರು. ರಾಮನು—

ಶ್ಲೋ॥ ಐಙ್ಗುದಂ ಬದರೀಮಿಶ್ರಂ ಪಿಣ್ಯಾಕಂ ದರ್ಭಸಂಸ್ತರೇ । ನ್ಯಸ್ಯ ರಾಮಃ ಸುದುಃಖಾರ್ತೋ ರುದನ್ವಚನಮಬ್ರವೀತ್ ॥ ಇದಂ ಭುಙ್ಕ್ಷ್ವ ಮಹಾರಾಜ, ಪ್ರೀತೋ ಯದಶನಾ ವಯಮ್ । ಯದನ್ನೋ ಪುರುಷೋ ಭವತಿ ತದನ್ನಾಸ್ತಸ್ಯ ದೇವತಾಃ ॥

—(ಶ್ರೀ.ರಾ)

ಅ॥ ಇಂಗಳದ ಬೀಜದ ಹಿಟ್ಟಿನಲ್ಲಿ ಬೋರೇಹಣ್ಣನ್ನು ಸೇರಿಸಿ ಪಿಂಡವನ್ನು ಮಾಡಿ ದರ್ಭೆಯ ಮೇಲಿಟ್ಟು ರಾಮನು ಬಹಳ ದುಃಖದಿಂದ ಅಳುತ್ತ "ಹೆ, ಮಹಾರಾಜ, ಇದನ್ನು ತಿನ್ನು; ಈಗ ಈ ಅನ್ನದಿಂದ ನಾವು ಪ್ರೀತರಾಗಿದ್ದೇವೆ. ಮನುಷ್ಯನು ಯಾವ ಅನ್ನವನ್ನು ತಿನ್ನುತ್ತಾನೋ ಅವನ ದೇವತೆಗಳಿಗೂ ಅದೇ ಅನ್ನ" ಎಂದು ಹೇಳಿದನು.

ಹೀಗೆಂದು ತರ್ಪಣವನ್ನು ಕೊಟ್ಟ ರಾಮನು ಬಂದು ವಿಶ್ರಮಿಸಿಕೊಂಡು ಭರತನನ್ನು ಕುರಿತು ಬಂದ ಕಾರ್ಯವೇನೆನ್ನಲು ಭರತನು ಹೇಳುತ್ತಾನೆ—

ಶುದ್ಧಸಾವೇರಿ—ರೂಪಕ.

ಅಡಿಗೆ ಬಿದ್ದು ಕೇಳ್ವೆ ನಾನು । ನಡೆಸಿ ಕೊಡಲು ಬೇಕು ನೀನು ॥ ಪ ॥ ಬಿಡದೆ ರಾಜ್ಯಭಾರವನ್ನು । ಪಡೆದು ರಕ್ಷಿಸೆಮ್ಮನ್ನು ॥ ಅ.ಪ ॥ ಹಿರಿಯ ಮಗನು ನೋಡೆ ನೀನು । ಧರಣಿಯನಾಳಲು ತಕ್ಕವನು ॥ ಕಿರಿಯರಿಗದು ಶೋಭಿಸದು । ನೆರೆ ವಿಚಾರಮಾಡು ನೀನು ॥ ೧ ॥ ಕ್ಷತ್ರಿಯರಿಗೆ ರಾಜ್ಯಭಾರ । ಸೂತ್ರವೇ ಸ್ವಧ ರ್ಮವಹುದು ॥ ಮತ್ತೇನೀ ವನವಾಸವಿ । ದುತ್ತಮವೆಂದೆನಿಪುದಲ್ಲ ॥೨॥ ತಾಯ ದುಷ್ಟಕೃತ್ಯವನ್ನು । ಹೇಯವೆಂದು ತಿಳಿಯುತೆನ್ನ ॥ ಕಾಯಬೇಕು ನೀನೀಗ । ರಾಯನಾಗಿ ರಾಜ್ಯಕೆ ಬೇಗ ॥ ೩ ॥

ಅದೇ ಸಮಯದಲ್ಲಿ ಮತ್ತೇನಾಯಿತೆಂದರೆ—

ಷ॥ ಬಂದು ಕೈಕಾದೇವಿ ಕಂಬನಿ । ಯಿಂದ ಮನದನುತಾಪಶಿಖಿಯಲಿ । ಬೆಂದು ಬಳಿಕೀ ಮಾತ ನುಡಿದಳು ಚಿತ್ತಶುದ್ಧಿಯಲಿ ॥ ಹಿಂದೆ ನೆನೆದಪಕೃತವ ನೆರೆ ಮರೆ । ದಿಂದು ಪಾಲಿಸು ಧರೆಯ ಕೇಳೆಲೆ । ಕಂದಯೆನುತಪ್ಪಿದಳು ಶಿರವನು ರಾಘವೇಶ್ವರನ ॥

—(ತೊ.ರಾ)

ಆಗ ತಾಯಿಯನ್ನು ಸಂತಯಿಸಿ ರಾಮನು ಭರತನಿಗೆ ಹೇಳುತ್ತಾನೆ—

ಶಂಕರಾಭರಣ—ಅಟತಾಳ

ಸರಿಯುಲ್ಲ ತಮ್ಮ । ನೀನೀಗ ಕೇಳ್ವುದು ॥ ಪ ॥ ನೆರೆಪಿತನಾಜ್ಞೆಗೆ । ಎರಡನು ಬಗೆವುದು ॥ ಅ.ಪ ॥ ಹಿರಿಯನಾಗಿಹ ನಾನು । ಪರಪಿತನಿಂಗಿತ । ಪರಿತೀ ಅರಣ್ಯದೊ । ಳಿರುತಿಹೆನು ॥ ಕಿರಿಯನಾಗಿಹ ನೀನು । ದೊರೆಯಾಗೆ ತಂದೆಯು । ಪರಮ ಸತ್ಯವ್ರತ । ಪರಿಪೂರ್ಣವಪ್ಪುದು ॥ ೧ ॥ ತಂದೆಯ ಪ್ಪಣೆಯನ್ನು । ಇಂದು ನೀನೆನ್ನಂತೆ । ಸಂದೇಹಗೊಳ್ಳದಾ । ಸಂದದಿ ನಡೆಸಲು ॥ ಕುಂದು ಪೊರ್ದದು ಎಮ್ಮ । ತಂದೆಗೆ ಲೋಕದಿ । ಎಂದೆಂದಿಗೂ ಕೀರ್ತಿ । ಬಂದು ಶೋಭಿಸುವದು ॥ ೨ ॥ ದೊರೆಯು ದೆಂದಿಗು ಈ । ಪರಿ ಪಿತೃಸೇವೆಯು । ತರಳನೆ ಇದನೀ । ಸರಿತೀಗ ನಡೆವುದು ॥ ತೊರೆ ಯಲೀ ಸಮಯವ । ದೊರೆಯುವದಪಕೀರ್ತಿ । ಪರಿಹಾಸ್ಯಕೇ ನಾವು । ಗುರಿಯಾಗಿ ಕೆಡುವೆವು ॥ ೩ ॥

ಅದಕ್ಕೆ ಭರತನ ಮಾತು—

ಶ್ಲೋ॥ ಯದ್ದ್ರವ್ಯಂ ಬಾಂಧವಾನಾಂ ವಾ ಮಿತ್ರಾಣಾಂ ವಾ ಕ್ಷಯೇ ಭವೇತ್ । ನಾಹಂ ತತ್ಪ್ರತಿಗೃಹ್ಣೀಯಾಂ ಭಕ್ಷ್ಯಾನ್ವಿಷಕೃತಾನಿವ ॥—(ಶ್ರೀ.ರಾ)

ಅ॥ ಬಾಂಧವರಿಗಾಗಲಿ ಮಿತ್ರರಿಗಾಗಲಿ ಹಾನಿಯಾಗಿ ದೊರೆಯುವ ಸಂಪತ್ತನ್ನು—ವಿಷಗೂಡಿದ ಭಕ್ಷ್ಯಗಳಂತೆ—ನಾನು ಗ್ರಹಿಸಲಾರೆನು.

ಅದಕ್ಕೆ ರಾಮನ ಉತ್ತರ—

ಶ್ಲೋ॥ ಚತುರ್ದಶಸಮಾಃ ಸೌಮ್ಯ, ದಣ್ಡಕಾರಣ್ಯಮಾಶ್ರಿತಃ ॥ ಉಪಭೋಕ್ಷ್ಯೇ ತ್ವಹಂ ದತ್ತಂ ಭಾಗಂ ಪಿತ್ರಾ ಮಹಾತ್ಮನಾ ॥ —(ಶ್ರೀ.ರಾ)

ಅ॥ ಎಲೈ ಸೌಮ್ಯನೆ, ಮಹಾತ್ಮನಾದ ತಂದೆಯು ನನ್ನ ಭಾಗಕ್ಕೆ ಕೊಟ್ಟಿರುವ ದಂಡಕಾರಣ್ಯವನ್ನಾಶ್ರಯಿಸಿ ಹದಿನಾಲ್ಕು ವರ್ಷ ಉಪಭೋಗ ಮಾಡುತ್ತೇನೆ.

ಆಮೇಲೆ ಅವರ ಸಂವಾದವು ಮುಂದುವರಿದದ್ದೆಂತೆಂದರೆ—

✓ ಕೀ॥ (ಭ) ಮುದುಕನಾದ ಕಾಮುಕನ ಮಾತಿನಿಂ । ಪದುಳವೆಂದಿಗಪ್ಪುದೊ ಅಣ್ಣಾ? ॥ (ರಾ) ಮುದುಕನೆಂದು ಕಾಮುಕನೆಂದವನನು । ಸದರವೇನೊ ಬಿಡು ಪದು ತಮ್ಮ? ॥ ೧ ॥ (ಭ) ನಾನೇ ವನವಾಸವನಾಚರಿಪೆನು ನೀನೇ ರಾಜ್ಯವ ಕೊಳ್ಳಣ್ಣಾ ॥ (ರಾ) ಈ ನಿಯಮವ ಬದಲಾಯಿಸೆ ಮಾತಿಗೆ । ಹಾನಿಯುಲ್ಲವೇನೋ ತಮ್ಮ? ॥ ೨ ॥

ಕೊನೆಗೆ ಭರತನ ಮಾತು—

ಶ್ಲೋ॥ ಅಹಮಪ್ಯಾಗಮಿಷ್ಯಾಮಿ ಸೇವೇ ತ್ವಾಂ ಲಕ್ಷ್ಮಣೋ ಯಥಾ । ನೋ ಚೇತ್ಪ್ರಾಯೋಪವೇಶೇನ ತ್ಯಜಾಮ್ಯೇತತ್ಕಲೇವರಮ್ ॥ —(ಅ.ರಾ)

ಅ॥ ನಾನೂ ಬಂದು ಲಕ್ಷ್ಮಣನಂತೆ ಸೇವೆಮಾಡುತ್ತೇನೆ. ಇಲ್ಲದಿದ್ದರೆ ಪ್ರಾಯೋಪವೇಶದಿಂದ ಶರೀರತ್ಯಾಗ ಮಾಡುತ್ತೇನೆ.

ಟಿ|| ಪ್ರಾಯೋಪವೇಶ—ಸಾಯುವವರೆಗೂ ಹಠದಿಂದ ಉಪವಾಸಮಾಡುವಿಕೆ.

ಎಂದು ಭರತನು ಪ್ರಾಯೋಪವೇಶದೀಕ್ಷೆಯನ್ನು ವಹಿಸಲು—

ಸಾ|| ಗುರುವಸಿಷ್ಠರಿಗೆ ಸೂಚಿಸೆ ರಾಮನು। ಸರಭಸದಿಂದಪರಾಗ || ಕರೆದೊಯ್ದು ರಹಸ್ಯದೊಳಗರುಹಿದರು। ಭರತಗೆ ಯುಕ್ತಿಯ ಬೇಗ ||

ಅದರಿಂದ ಸಮಾಧಾನಗೊಂಡ ಭರತನು ಬಂದು—

ಷ|| ಗೋಪುರದ ಭಾರವನು ಗಾರೆಯ। ರೂಪುದೋರಿದ ಪ್ರತಿಮೆಯಂದದಿ। ಈ ಪರಿಯ ಸಂಸಾರಭಾರವ ನಾವು ತಾಳುವುದು; || ತಾ ಪರಾಕ್ರಮಿಯೆಂದು ಮನುಜನು। ಕಾಪಥವನೈದುವನು; ವಿಶ್ವ। ವ್ಯಾಪಕನು ಸೀನಹುದು ರಕ್ಷಿಸು ನಮ್ಮನನವರತ || (ಹ.ಭ)

ಆದ್ದರಿಂದ—

ಶ್ಲೋ|| ಪಾದುಕೇ ದೇಹಿ ರಾಜೇನ್ದ್ರ ರಾಜ್ಯಾಯ ತವ ಪೂಜಿತೇ || ತಯೋಃ ಸೇವಾಂ ಕರೋಮ್ಯೇವ ಯಾವದಾಗಮನಂ ತವ || —(ಅ.ರಾ)

ಅ|| ಹೆ, ದೇವ, ರಾಜ್ಯಕ್ಕಾಗಿ ಪೂಜ್ಯವಾದ ನಿನ್ನ ಪಾದುಕೆಗಳನ್ನು ಕೊಡಬೇಕು. ನೀನು ಬರುವವರೆಗೂ ಅವುಗಳ ಸೇವೆಯನ್ನು ಮಾಡುತ್ತೇನೆ.

ಎಂದು ರಾಮನಿಂದ ಪಾದುಕೆಗಳನ್ನು ಪಡೆದುಕೊಂಡು ಇನ್ನೂ ಹೇಳುತ್ತಾನೆ—

ಶ್ಲೋ|| ನವಪಞ್ಚಸಮಾನ್ತೇ ತು ಪ್ರಥಮೇ ದಿವಸೇ ಯದಿ। ನಾಗಮಿಷ್ಯಸಿ ಚೇದ್ರಾಮ, ಪ್ರವಿಶಾಮಿ ಮಹಾನಲಮ್ || —(ಅ.ರಾ)

ಅ|| ಹೆ, ರಾಮ, ಹದಿನಾಲ್ಕು ವರ್ಷಗಳು ಮುಗಿದ ಮೊದಲನೆ ದಿನವೇ ನೀನು ಬರದೆ ಇದ್ದರೆ ನಾನು ಅಗ್ನಿಯಲ್ಲಿ ಬಿದ್ದು ಪ್ರಾಣವನ್ನು ಬಿಡುತ್ತೇನೆ.

ಹೀಗೆಲ್ಲ ಮಾತುಕಥೆಗಳು ನಡೆದ ಮೇಲೆ ಭರತನು ಪಾದುಕೆಯನ್ನು ತಲೆಯಲ್ಲಿ ಧರಿಸಿ ರಾಮಪಾದಗಳನ್ನು ಸ್ಮರಿಸುತ್ತ ಅಯೋಧ್ಯೆಯ ಕಡೆಗೆ ತಿರುಗಲು ಇತ್ತ ಒಂದು ದಿನ ರಾಮನು ವನವಿಹಾರವನ್ನು ಮಾಡಿ ವಿಶ್ರಮಿಸಿಕೊಂಡಿರುವಾಗ—

ಸಾ|| ಮುನಿಪತಿಯಾದತ್ರಿಯ ವಚನದೊಳಿಂ। ದ್ರನ ಸುತನಾದ ಜಯಂತ|| ಘನಕಾಕಾಕೃತಿಯಿಳಿಯಲೆಂದು ನಾ। ರ್ದನು ಸೀತೆಯ ಬಳಿಯಂ ತಾ ||

ಷ|| ಸಾರುತಿರೆ ಪದಸೊಂಕಿಗಾ ಸತಿ। ಕ್ರೂರವಾಯಸಕಂಜಿ ಪತಿಯ ಶ। ರೀರವನು ಬಿಗಿದಪ್ಪುತಾಚರಿಸಿದಳು ಭೀತಿಯಲಿ || ವೀರ, ಕೇಳ್ವಾಯಸದ ಪದನಖ। ಧಾರೆ ಭುಜದಲಿ ಬೀಳೆ ಬಳಿಕಸು। ರಾರಿ ಕೋಪಿಸುತಿಟ್ಟನಾ ಖಳನನು ತೃಣಾಸ್ತ್ರದಲಿ || (ತೊ.ರಾ)

ಟಿ|| ಆಚರಿಸಿದಳು—ಆಯೆಂದು ಕೂಗಿಕೊಂಡಳು. ಬಳಿಕ+ಅಸುರಾರಿ.

ಆಮೇಲೇನಾಯಿತೆಂದರೆ—

ದಿಂ|| ಬಿಡದೆ ಬೆಂಬತ್ತಿರ್ದಸ್ತ್ರಬಾಧೆಯನ್ನು। ತಡೆಯದಾ ಕಾಕಂ ಹುಡುಕಿ ಕಾವವರನ್ನು || ಕಡೆಗೆ ದೇವೇಂದ್ರಂ ಪೇಳೆ ರಾಮನನ್ನು। ಕಡೆಯ ಹಾಯ್ದೆಂದಂ ತನ್ನ ದುಃಖವನ್ನು ||

**ಆಗ ಅನುಗ್ರಹಬುದ್ಧಿಯಿಂದ ರಾಮನು ಅವನನ್ನು ಪಾರುಮಾಡಿದ್ದೆಂತೆಂದರೆ—**

ಷ॥ ಶರವಿದಮೋಘ; ಮರೆಯೊ। ಕ್ಕರಸು ಸಲಹುವ ಬಿರುದು ಸಂದಿಹು। ದೆರಡುಗುಣ ಸಮಗೀಧರಿತ್ರಿಯೊಳೆಂದು ರಘುನಾಥ ॥ ಸರಳಿಗೊಂಡವನಕ್ಷಿಯನುಕೊಂ। ಡೆರಡುಕಡೆಗೊಂದಾಲಿಯನು ವಿ। ಸ್ತರಿಸಿ ಕರುಣದಲಾ ಜಯಂತನ ಕಾಯಿದನು ರಾಮ ॥ —(ತೊ.ರಾ)

**ಆಗ ಸ್ವಸ್ವರೂಪವನ್ನು ಪಡೆದ ಜಯಂತನು ಸ್ತೋತ್ರಮಾಡಿದ್ದು—**

✓ ಚೂ॥ ಶರಣು ಶರಣಾಗತರ ಸಂರಕ್ಷಕ, ಜನನಮರಣಾದಿಸಂಸಾರವಿಷಭಕ್ಷಕ, ಯಮನಿಯಮಾಸನಪ್ರಾಣಾಯಾಮಾದಿಸರ್ವಸಾಧನಾಪೇಕ್ಷಕ, ಭಕ್ತಜನಾಪರಾಧೋಪೇಕ್ಷಕ, ಆಸುರೀಸಂಪದ್ವಿಶಿಷ್ಟಜನಶಿಕ್ಷಕ, ಚತುರ್ದಶಭುವನಸೃಷ್ಟಿಸ್ಥಿತಿಸಂಹಾರಕರ್ಮೇಕ್ಷಕ। ಅನಾಥಸಙ್ಘಾತನಾಥ, ಚತುರ್ಮುಖಬ್ರಹ್ಮತಾತ, ಸಂಕಲ್ಪಮಾತ್ರನಿರ್ಮಿತಾಖಿಲಾಂಡಕೋಟಿಬ್ರಹ್ಮಾಂಡಜಾತ, ಗುಣಗಣಾತೀತ, ಸರ್ವೇಷ್ಟದಾತ, ಸಜ್ಜನಪ್ರೀತ, ಭವಜಲಧಿಪೋತ, ದೇವಾದಿದೇವನಾಗಿಪ್ರಖ್ಯಾತ, ಖ್ಯಾತ। ತಿರುಗಿದೆನು ಬಹಳ ಲೋಕಂಗಳನ್ನು, ನೊಂದೆನು ಕಾಣದೇ ರಕ್ಷಿಸುವರನ್ನು, ಕರಗಿದೆನು ಸುರಿಸಿ ಕಣ್ಣುಗಳ ನೀರನ್ನು, ಎರಗಿದೆನು ನಂಬಿ ನಿನ್ನಯ ಪಾದವನ್ನು, ಮರುಗುವೆನು ಮರೆತುದಕೆ ನಾನು ನಿನ್ನನ್ನು। ತಾಯಿ ಮಕ್ಕಳ ಬಿಡಲು ಕಾಯುವವರಾರು?, ಬಾಯಿಬಿಡುವೆನು ಪೊರೆಯೆ ನೀನಲ್ಲದಾರು?, ತೋಯಜಾಕ್ಷನೆ ದಯದಿ ಕೇಳೆನ್ನ ದೂರು, ಮಾಯಾಧಿಪತಿ ಯೆನಗೆ ಕರುಣೆಯನು ತೋರು, ಬೇಯುವೆನಿನ್ನದೆ ಬೇಡಿಕೆಗನುಗ್ರಹವ ತೋರು, ಕೈಸೇರು.

**ಇತ್ತ ಕಾಕಾಸುರನು ಶಾಪದಿಂದ ಬಿಡುಗಡೆಯನ್ನು ಹೊಂದಿ ತನ್ನ ಸ್ಥಾನಕ್ಕೆ ಹೋದ ಮೇಲೆ—**

**ಅತ್ತ ಭರತನು—**

ಷ॥ ಎಂದು ಬೀಳ್ಕೊಂಡಖಿಲಸೇನಾ। ವೃಂದಸಹಿತಾ ಭರತನೃಪನೈತಂದು ನಗರವ ಹೊಗದೆ ನಂದಿಗ್ರಾಮದಲಿ ಬಳಿಕ ॥ ಇಂದಿರೇಶನ ತೊರವೆಯರಸನ। ನಂದ ನಿಜಭಕುತಿಯಲಿ ಪರಮಾ। ನಂದರಸಮಯನಾಗಿ ಪಾಲಿಸಿದನು ಧರಾತಲವ ॥ —(ತೊ.ರಾ)

**ಹೀಗೆ ಭರತನು ಅಣ್ಣನ ಪಾದುಕೆಗಳನ್ನು ದೇವರಂತೆ ಭಾವಿಸಿ ನಡೆಯುತ್ತಿದ್ದನೆಂಬುದನ್ನು ಲಕ್ಷ್ಯದಲ್ಲಿಟ್ಟುಕೊಂಡೇ "ಹಿರಿಯನ ಕಂಡರೆ ದೇವರೆಂದಾತನ" ಎಂಬ ನುಡಿಯ ಉಪದೇಶವು ಹೊರಟಿರುವುದು.**



*

# ಜಟಾಯುಮೋಕ್ಷ

## ಪೀಠಿಕೆ—ಮೈತ್ರಿಯಭಿಮಾನ

**ದೇಶೀತೋಡಿ—ಅಟತಾಳ**

ಮೈತ್ರಿಯಭಿಮಾನವನು ತೋರಿಸು । ಧಾತ್ರಿ ಮೆಚ್ಚಲು ನಿನ್ನನು ॥ ಪ ॥ ಪಾತ್ರನಹೆ; ಕಾಣಿಪನು ಲೋಕದ । ಸೂತ್ರಧಾರನು ತನ್ನನು ॥ ಅ.ಪ ॥ ಗೆಳೆಯತನವದು ಬೆಳೆಯಲೊಬ್ಬನೊ । ಳಿಳೆಯೊಳಾತನ ಕುಲಜನೆ ॥ ಸಲಹಿ ಸಂತಸಪಡುವೆನೆಂದೇ । ತಳೆಯುತಿರು ಒಲುಚಲನನೆ ॥ ೧ ॥ ಸಖನು ತನ್ನವನಾದಕಾರಣ । ಸಖನ ಪರಿವಾರದೊಳು ತಾ ॥ ಪ್ರಕಟಿಸುತ ಪ್ರಾಣಾಧಿಕತ್ವವ । ಸಕುಟಿಲತ್ವವ ತೋರುತ ॥ ೨ ॥

**ಲೋಕದಲ್ಲಿ ಜನರು ಪ್ರಾಪಂಚಿಕವಸ್ತುಗಳ ಬೆಂಬಲವೇ ತಮ್ಮ ಆಗುಹೋಗುಗಳಿಗೆ ಕಾರಣವೆಂದು ತಿಳಿಯುತ್ತಾರಲ್ಲ! ಈ ವಸ್ತುಗಳಲ್ಲಿ ಹುರುಳಿಲ್ಲವೆಂಬರ್ಥವನ್ನು ಪೂರ್ವದ ಕವಿಗಳು ನೆನಪುಗೊಟ್ಟಿರುವದೇನೆಂದರೆ—**

ಕಂ॥ ಉಡಿಸಿಯುಮೂಡಿಯುಮೊಳ್ಳಿತು । ನೆಡೆಯುಡುಗದೆ ಸಲಿಸಿ ಪಲವು ಕಾಲಂ ಪುದುವಾ ॥ ಳ್ದೊಡಲಾತ್ಮನೊಡನೆ ಪೋಗದೆ । ಕಡೆಗಣಿಸುವದೆಂದೊಡುಳಿದರಂ ನಂಬುವದೇಂ? ॥ —(ಆ.ಪು)

**ಟಿ॥ ಎಡೆಯುಡುಗದೆ—ಎಡೆಬಿಡದೆ. ಸಲಿಸಿ—ತೃಪ್ತಿಪಡಿಸಿ. ಪುದುವಾಳ್ದ—ಜೊತೆಯಲ್ಲಿ ಸುಖವಾಗಿಟ್ಟಿದ್ದ. ಕಡೆಗಣಿಸುವದು—ಉಪೇಕ್ಷೆಮಾಡುವದು.**

**ಪಾಪ! ಶರೀರವೇನು ಮಾಡೀತು? ಮೃತ್ಯುವೆಂಬುದು ಅದಕ್ಕೆ ಬೆನ್ನುಹತ್ತಿಯೇ ಇರುತ್ತದೆ. ಹೇಗೆಂದರೆ—**

ಶ್ಲೋ॥ ಸಹೈವ ಮೃತ್ಯುರ್ವಸತಿ; ಸಹಮೃತ್ಯುರ್ನಿಷೀದತಿ; । ಗತ್ವಾ ಸುದೀರ್ಘಮಧ್ವಾನಂ ಸಹಮೃತ್ಯುರ್ನಿವರ್ತತೇ ॥ —(ಶ್ರೀ.ರಾ)

**ಅ॥ ಮೃತ್ಯು ತನ್ನ ಜೊತೆಯಲ್ಲಿಯೇ ಇರುತ್ತದೆ; ತನ್ನ ಜೊತೆಯಲ್ಲಿಯೇ ಕೂತುಕೊಳ್ಳುತ್ತದೆ; ಬಹುದೂರ ನಡೆದು ಹಿಂದಿರುಗುವಾಗಲೂ ತನ್ನ ಹಿಂದೆಯೇ ಬರುತ್ತದೆ.**

**ಈ ಅರ್ಥವನ್ನು ಗೀತೆಯೂ ಹೇಳುತ್ತದೆ. ನೋಡಿರಿ—**

**ಶ್ಲೋ॥ ಜಾತಸ್ಯ ಹಿ ಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯ ಚ ॥ —(ಭ.ಗೀ)**

**ಅ॥ ಹುಟ್ಟಿದವನಿಗೆ ಸಾವು ತಪ್ಪದು; ಸತ್ತವನಿಗೆ ಹುಟ್ಟು ತಪ್ಪದು.**

**ಆದ್ದರಿಂದ ನಾವು ಎಚ್ಚರಿಕೆಯನ್ನು ತೆಗೆದುಕೊಳ್ಳಬೇಕಾದದ್ದೇನೆಂದರೆ—**

ಶ್ಲೋ॥ ಪ್ರತ್ಯಹಂ ಪ್ರತ್ಯವೇಕ್ಷೇತ ನರಶ್ಚರಿತಮಾತ್ಮನಃ । ಕಿನ್ನು ಮೇ ಪಶುಭಿಸ್ತುಲ್ಯಂ ಕಿನ್ನು ಸತ್ಪುರುಷೈರಿತಿ ॥ —(ಸು.)

ಅ॥ ಪ್ರತಿದಿನವೂ ಮನುಷ್ಯನು ತನ್ನ ನಡೆವಳಿಕೆಗಳನ್ನೆಲ್ಲ ಸಮಾಲೋಚನೆಗೆ ತಂದು ಕೊಂಡು ನಾನೇನು ಪಶುಗಳಿಗೆ ಸಮಾನನಾಗಿದೇನೆಯೊ ಅಥವಾ ಸತ್ಪುರುಷರಿಗೆ ಸಮಾನನಾಗಿದೇನೆಯೊ ಎಂಬುದನ್ನು ನೋಡಿಕೊಳ್ಳಬೇಕು.

ತಾನು ಸತ್ಪುರುಷರಿಗೆ ಸಮಾನನಾಗಬೇಕಾಗಿದ್ದರೆ ಸತ್ಪುರುಷರ ಅನುಗ್ರಹಕ್ಕೆ ಪಾತ್ರನಾಗಬೇಕು. ಅವರು ನಮ್ಮನ್ನು ತಿದ್ದುವದಕ್ಕೆ ಸಿದ್ಧರಾಗಿ ಹೇಳುವದೇನೆಂದರೆ—

ಶಂಕರಾಭರಣ ನೋಟು—ತ್ರಿಶ್ರ ಏಕತಾಳ

ಬನ್ನಿ ಬನ್ನಿರೆಲ್ಲರು । ಬನ್ನ ಏಪುದ ಬಲ್ಲರು ॥ ಪ ॥ ಬನ್ನಿ ಬನ್ನಿ ಭವದ ಬೇಗೆ । ಯನ್ನು ತಾಳಲಾರದವರು ॥ ಅ.ಪ ॥ ಹುಟ್ಟಿ ಹೊಂದಿ ಹುಟ್ಟಿ ಹೊಂದಿ । ಕೆಟ್ಟ ನಾಯಿ ನರಿಯು ಹಂದಿ ॥ ಹೊಟ್ಟೆಗಾಗಿ ಸುತ್ತುವಂತೆ । ಕೆಟ್ಟು ತಿರುಗಲೊಲ್ಲದವರು ॥ ೧ ॥ ಸೋಮಯಾಗವನ್ನು ದುಡಿದು । ಸೋಮಲೋಕವನ್ನು ಪಡೆದು ॥ ಭೂಮಿಗಿಳಿದು ಮತ್ತೆ ನಿಯಮ । ದಾಮದೆಳೆತಕೆಳಸದವರು ॥ ೨ ॥ ದೇವಯಾನ ದಿಂದ ಬ್ರಹ್ಮ । ದೇವಲೋಕದಲ್ಲಿ ತಮ್ಮ ॥ ತಾವ ಸೇರಿ ಸೊಗವಪಡೆವ । ಬೇವಸ ವನು ಬೇಡದವರು ॥ ೩ ॥ ಕನ್ನಡಿಯೊಳು ತೋರ್ಪ ಗಂಟು । ತನ್ನದೆಂಬುದೆಲ್ಲಿ ಯುಂಟು? ॥ ಕುನ್ನಿಯಂತೆ ಭಾವನೆಗಳ । ನಿನ್ನು ವಾಡೆನೆನ್ನುವವರು ॥ ೪ ॥ ನಿತ್ಯಶುದ್ಧಬುದ್ಧಮುಕ್ತ । ಸತ್ಯರೂಪತರ್ಕಯುಕ್ತ ॥ ಸತ್ಯವೇದಾಂತ ಶಂಕ । ರೋಕ್ತಿಯಿಂದ ಭಜಿಸುವವರು ॥ ೫ ॥ —(ಅ.ಗೀ)

ಟಿ॥ ಹೊಂದಿ—ಸತ್ತು. ಸೋಮಲೋಕ—ಪಿತೃಲೋಕ. ಬೇವಸ—ಬೇಸರ. ಸತ್ಯರೂಪ—ಸತ್ಯವಾದ ರೂಪವನ್ನು. ವೇದಾಂತಶಂಕರೋಕ್ತಿ—ಉಪನಿಷತ್ತುಗಳ ಸುಖಕರವಾದ ನುಡಿ.

ಹೀಗೆ ಉಪದೇಶಮಾಡುವ ಸಜ್ಜನರು ಎಂತಿರುವರೆಂದರೆ—

ವೃ॥ ನೋಡುವ, ನೋಡಿ ಲಾಲಿಸುವ, ಲಾಲಿಸುತಾತ್ಮಸುಖಕ್ಕೆ ವಿಸ್ಮಯಂ । ಮಾಡುವ, ಮಾಡಿ ಮೆಚ್ಚುವ, ನಿಜಾತ್ಮನೊಳಾಗಳೆ ಮೆಚ್ಚುತೈಕ್ಯದಿಂ । ಕೂಡುವ, ಕೂಡಿ ಮೈಮರೆದು ತನ್ಮಯನಾಗುತೆ ತಾನೆ ತನ್ನೊಳೋ । ಲಾಡುವ ಯೋಗಿಯೇ ಅಮೃತಭಾಗಿಯಲಾ! ಅಪರಾಜಿತೇಶ್ವರಾ —(ಅ.ಶ)

ಅವರ "ನೋಡುವ ನೋಡಿಲಾಲಿಸುವ" ಎಂಬ ಮಾತಿನಂತೆ ಮನಸ್ಸನ್ನು ಪರಮಾತ್ಮಾಕಾರವಾಗಿ ಮಾಡಿ ಅದನ್ನೇ ಧ್ಯಾನಮಾಡುವ ಉದ್ಯೋಗವು ಸಾಧಕನಿಗೆ ಸಾಯುವ ಕಾಲದಲ್ಲಿ ಕೂಡ ಇರಬೇಕಾಗುವದು. ಏಕೆಂದರೆ—

ಶ್ಲೋ॥ ಅನ್ತಕಾಲೇ ಚ ಮಾಮೇವ ಸ್ಮರನ್ಮುಕ್ತ್ವಾ ಕಲೇವರಮ್ । ಯಃ ಪ್ರಯಾತಿ ತ್ಯಜನ್ದೇಹಂ ಸ ಯಾತಿ ಪರಮಾಂ ಗತಿಮ್ ॥ —(ಭ.ಗೀ)

ಅ॥ ಸಾಯುವ ಕಾಲದಲ್ಲಿ ಕೂಡ ಪರಮಾತ್ಮನನ್ನೇ ಧ್ಯಾನಿಸುತ್ತ ಶರೀರವನ್ನು ಬಿಟ್ಟು ಹೋದವರು ಉತ್ತಮಗತಿಯನ್ನು ಪಡೆಯುತ್ತಾರೆ.

ಸಾಯುವ ಕಾಲದಲ್ಲಿ ಆ ಸ್ಮರಣೆ ಬರಬೇಕಾದರೆ ಮನುಷ್ಯನು ಯಾವಾಗಲೂ ಅದರಲ್ಲಿಯೇ ತತ್ಪರನಾಗಿರಬೇಕಾಗುತ್ತದೆ. ಹಾಗಿದ್ದರೇ ಪಾಪನಾಶ—

ಶ್ಲೋ॥ ಪಠತೋ ನಾಸ್ತಿ ದುರ್ಭಿಕ್ಷ್ಯಂ ಜಪತೋ ನಾಸ್ತಿ ಪಾತಕಮ್ ।
ಮೌನಿನಃ ಕಲಹೋ ನಾಸ್ತಿ ನ ಭಯಂ ಚಾಸ್ತಿ ಜಾಗ್ರತಃ ॥ —(ಸು)

ಅ॥ ಓದುವವನಿಗೆ ಮೂರ್ಖತ್ವವಿಲ್ಲ; ಜಪಿಸುವವನಿಗೆ ಪಾತಕವಿಲ್ಲ; ಮೌನವಾಗಿರುವವನಿಗೆ ಜಗಳವಿಲ್ಲ; ಎಚ್ಚರವಾಗಿರುವವನಿಗೆ ಭಯವಿಲ್ಲ.

ಯಾವ ದೇವರ ನಾಮವನ್ನು ಜಪಿಸಬೇಕೆಂಬುದಕ್ಕೆ ಸಮರ್ಥ ರಾಮದಾಸರು ಉಪದೇಶಿಸಿರುವದೇನೆಂದರೆ—

ಸಾಂ॥ ಪರಿಪರಿಯತ್ನದೊಳಿದ ಮಾಡು ನೀಂ ರಘು। ವರನ ನಿಸ್ಸ್ವಪನಾಗಿ ಮಾಡು ॥ ಶರಣರಕ್ಷಕನೆಂಬ ಬಿರುದಿರ್ಪ ದೇವನೊ। ಳಿರು ರಾಘವನೊಳೀಗ ಮನವೆ ॥ —(ಮ.ಉ)

ಇದೇ ಅರ್ಥವನ್ನೇ ಒಬ್ಬ ಕವಿಯು ಹೇಳಿರುವದೇನೆಂದರೆ—

ಶ್ಲೋ॥ ಯಾತಾಯಾತೈಃ ಸುಬಹುಭಿಃ ಶ್ರಾನ್ತೋಽಸಿ ಯದಿ ಹೇ ಸಖೇ।
ಏಕಂ ಕುರು ಘನಚ್ಛಾಯಂ ಸೀತಾರಾಮಪದಂ ಭಜ ॥ —(ಸು.ಲಾ)

ಅ॥ (೧) (ಯಾತಾಯಾತೈಃ) ಅತ್ತಿತ್ತ ತಿರುಗಾಡಿ ಬಳಲಿದ್ದರೆ ಒಂದು ಕೆಲಸವನ್ನು ಮಾಡು. ಅದೇನೆಂದರೆ— (ಘನಚ್ಛಾಯಂ) ದಟ್ಟವಾದ ನೆರಳಿರುವಂಥ (ಸೀತ+ಆರಾಮ+ಪದಂ) ತಣ್ಣಗಿರುವ ವಿಶ್ರಾಂತಿಸ್ಥಾನದ ಕಡೆಗೆ ಹೋಗು. (೨) (ಯಾತಾಯಾತೈಃ)ಹುಟ್ಟುಸಾವುಗಳಿಂದ ಸುತ್ತಿ ನೀನು ಬಳಲಿದ್ದರೆ ಒಂದು ಕೆಲಸವನ್ನು ಮಾಡು. ಅದೇನೆಂದರೆ—(ಘನಚ್ಛಾಯಂ) ಮೇಘದ ಬಣ್ಣವುಳ್ಳಂಥ (ಸೀತಾ+ರಾಮ+ಪದಂ) ಸೀತಾರಾಮನ ಪಾದಕಮಲಗಳನ್ನು ಉಪಾಸನೆಮಾಡು.

ಈ ಉಪದೇಶವು ಜನಗಳಿಗೆ ನಾಗದೆ ಇರುವದಕ್ಕೆ ಉಂಟಾಗಿರುವ ಪ್ರತಿಬಂಧಕವೇನೆಂದರೆ—

ಶ್ಲೋ॥ ಸಂಸಾರಿಣಾಮಿಹಾಮೃತ । ಲಾಭೋಽಮೃತಮಧ್ಯವರ್ತಿನಾಮಪಿ ನ ॥ ಮೀನಾನಾಮಿವ ತತ್ರಾ। ಪ್ಯಬ್ಜಿಹ್ಮಮುಖತ್ವೈವ ಜಾಯತೇ ವಿಘ್ನಃ ॥ —(ಸು.ಲಾ)

ಅ॥ (೧) ಮೀನುಗಳಿಗೆ (ಅಮೃತಮಧ್ಯವರ್ತಿನಾಮಪಿ) ನೀರಿನಲ್ಲಿಯೇ ಇದ್ದರೂ ಕೂಡ (ನ ಅಮೃತಲಾಭಃ) ನೀರು ದೊರೆಯುವದಿಲ್ಲ. ಏಕೆಂದರೆ ಅವು ಕೆಳಮುಖವಾಗಿರುವದೇ ಅವಕ್ಕೆ ವಿಘ್ನವಾಗುತ್ತದೆ. (ಇದರಂತೆ) (೨) ಸಂಸಾರಿಗಳಾದ ಜನರಿಗೆ (ಅಮೃತಮಧ್ಯವರ್ತಿನಾಮಪಿ) ಅವರು ಪರಬ್ರಹ್ಮದಲ್ಲಿಯೇ ಇದ್ದರೂ ಕೂಡ ಅವರಿಗೆ(ನ ಅಮೃತಲಾಭಃ) ಮೋಕ್ಷವಿಲ್ಲ. ಏಕೆಂದರೆ ಅವರು ಒಳಮುಖರಾಗದಿರುವದೇ ಅವರಿಗೆ ವಿಘ್ನವಾಗುತ್ತದೆ.

ಅಂತರ್ಮುಖಿಯು ಶ್ರೀರಾಮಚಂದ್ರನನ್ನು ಪ್ರಾರ್ಥಿಸುವದೆಂತೆಂದರೆ—

ರೇಗುಪ್ತಿ—ಅಟತಾಳ

ಇದು ನಿನಗುಚಿತವೆ। ಎನ್ನ ಕಾಡಿಸುವದು। ಸದಯನೆ ರಾಮಚಂದ್ರ ॥ಪ॥
ಇದು ನಿನಗುಚಿತವೆ। ಮುದದಿ ದೀನನ ನೋಡಿ। ಪದಗಳ ತೋರಿಸುತ। ಆದರಿಸ
ದಿಹುದು ॥ ಅ.ಪ ॥ ಪಾಪಿಯೆಂದೆನ್ನಯ। ಪಾಪಪನೆಣಿಸುತ। ಕೋಪವ ತೋರು
ವೆಯ? ॥ ಪಾಪಿ ನಾನಾದರೆ ಶ್ರೀಪತಿಯೇ ನೀನು। ಪಾಪಹಾರಕನಲ್ಲವೆ?। ಕೃಪೆ
ಮಾಡದಿರುವೆ ॥ ೧ ॥ ಶರಣೆಂದ ಮಾತ್ರದಿ। ನಿನ್ನಯ ಕೋಪವು। ಇರದೆಂದು
ಹೇಳುವರು॥ಶರಣು ಶರಣು ಭವ। ಹರಣಸಮರ್ಥನೆ। ಅರಿಪತ್ತು ಪೊರೆಯಯ್ಯ।
ಶರಣಯ್ಯ ಬೇಯ ॥ ೨ ॥ ಅರಿಗಳೆಂದೆನ್ನದೆ। ದುರುಳರೆಂದೆನ್ನದೆ। ಕರುಣದೋರು
ವನೆಂಬರು ॥ ಪರಮಾದರದಿ ನಿನ್ನ । ಚರಣವ ಹಿಡಿದೀಗ। ಪೊರೆಯೆಂದು ನೆರಗೊ
ಡ್ಡುವೆ। ಚಿನ್ಮಯನೆ ಬೇಡುವೆ ॥ ೩ ॥ —(ಭಕ್ತಿ.೧೮)

ಇಂಥ ಪ್ರಾರ್ಥನೆಯನ್ನು ಮಾಡುವದರ ಕಡೆಗೆ ಮನಸ್ಸು ಒಲಿಯುವದೇ ಕಠಿನವಾದ್ದರಿಂದ ಆ ಒಲವು ಉಂಟಾಗುವದಕ್ಕೆ ಕೂಡ ಭಕ್ತನು ಪ್ರಾರ್ಥಿಸಬೇಕೆಂದು ಭಾಗವತರು ಹೇಳಿರುವದೇನೆಂದರೆ—

ಷ॥ ವರುಷನೂರಾಯುಷ್ಯವದರೊಳ। ಗಿರುಳ ಕಳೆದೈವತ್ತನೈವ। ತ್ತರಲಿ
ವಾರ್ಧಕಬಾಲ್ಯಕೌಮಾರದಲಿ ಮೂವತ್ತು ॥ ಇರದೆ ಸಂದುದು; ಬಳಿಕ ಇಪ್ಪ।
ತ್ತೊರುಷವದರೊಳಗಾಗಲಂತಃ। ಕರಣ ನಿನ್ನೊಳು ತೋರಿ ರಕ್ಷಿಸು ನಮ್ಮನನ
ವರತ ॥ —(ಹ.ಭ)

ಈ ಅಲ್ಪಕಾಲದಲ್ಲಿಯೂ ಕೂಡ—

ಶ್ಲೋ॥ ಯಸ್ಮಿನ್ನಸ್ತಿ ಮಮತಾ। ಮಮ ತಾಪಸ್ತತ್ರ ತತ್ರೈವ ॥ ಯತ್ರೈ-
ವಾಹಮುದಾಸೇ। ತತ್ರ ಮುದಾಸೇ ಸ್ವಭಾವಸಂತುಷ್ಟಃ ॥ —(ಸು)

ಯಾವಯಾವ ವಸ್ತುವಿನಲ್ಲಿ ನನ್ನದೆಂದು ಅಭಿಮಾನ ಮಾಡುತ್ತೇನೊ ನನಗೆ ಅದರಲ್ಲಿ ತಾಪವೇ. ಯಾವ ವಸ್ತುವಿನ ವಿಷಯದಲ್ಲಿ ಉದಾಸೀನನಾಗಿರುತ್ತೇನೊ ಅದರಲ್ಲಿ ನಾನು ಸಂತೋಷದಿಂದಿರುತ್ತೇನೆ.

ಈ ಅನುಭವವನ್ನು ಸದುಪಯೋಗಮಾಡಿಕೊಂಡು ಆ ಕಾಲದಲ್ಲಿ ದೇವರನ್ನು ಭಜಿಸಬೇಕಾದರೂ 'ಅಭಿಮಾನದಂಭಾದಿಕಂ ತ್ಯಾಜ್ಯಮ್'' ಎಂಬ (ನಾ. ಭ; ಸೂ.) ಸೂತ್ರದಂತೆ ದುರಭಿಮಾನ, ದಂಭ— ಮೊದಲಾದುವುಗಳನ್ನು ಬಿಟ್ಟು ಭಜಿಸಬೇಕು. ಮುಳ್ಳಿನಿಂದ ಮುಳ್ಳನ್ನು ತೆಗೆಯುವಂತೆ ದುರಭಿಮಾನ ಮೊದಲಾದವುಗಳನ್ನು ಬಿಡಬೇಕಾದರೆ ಸದಭಿಮಾನವನ್ನು ಹಿಡಿಯಬೇಕಾಗುವದು. ಅಂಥ ಸದಭಿಮಾನಗಳಲ್ಲಿ ಒಂದಾದ ಮೈತ್ರಿಯಭಿಮಾನವನ್ನು ಮಾಡಬೇಕೆಂದು ಪೀಠಿಕೆಯಲ್ಲಿ "ಮೈತ್ರಿಯಭಿಮಾನವನು ತೋರಿಸು'' ಎಂದು ಮುಂತಾಗಿ ಹೇಳಿರುವದು. ಈ ಮೈತ್ರಿಯಭಿಮಾನಕ್ಕೆ ನಿದರ್ಶನವಾಗಿ ಜಟಾಯುಮೋಕ್ಷವು ನಿರೂಪಣಮಾಡಲಾಗುವದು.



# ಆಖ್ಯಾನ

ಅತ್ತ ಭರತನು ನಂದಿಗ್ರಾಮದಲ್ಲಿ ಪಾದುಕಾಸ್ಥಾಪನೆಯನ್ನು ಮಾಡಿ ಅದರ ಸೇವಕನಾಗಿ ರಾಜ್ಯಭಾರವನ್ನು ನಿರ್ವಹಿಸುತ್ತಿರಲು ಇತ್ತ ರಾಮಚಂದ್ರ ಮೊದಲಾದವರು—

✓ ಕೀ॥ ನಗರದ ಜನಗಳು ಗುಂಪುಗಟ್ಟುತ। ಲ್ಲಿಗೆ ಬರಲಾರಂಭಿಸಲಾಗ ॥ ಹಗರಣವಾಯ್ತೆಂದತ್ರಿಮುನಿಪನ। ಲ್ಲಿಗೆ ತಾನೈತಂದರು ಬೇಗ ॥

ಅಲ್ಲಿ ಸೀತೆಯು ಅತ್ರಿಪತ್ನಿಯಾದ ಅನಸೂಯಾದೇವಿಗೆ ನಮಸ್ಕರಿಸಿದಾಗ—

ಷ॥ ಸೊಗಸುವೀ ಸೌಂದರ್ಯಸಾಗರ। ಪಗಬೆಗಾ ರಮೆಗಾ ಸರಸ್ವತಿ। ಗೊಗೆಯುದಿಹುದಾಗದೆ ಸಿರೀಕ್ಸಿಸಲಂಗವಟ್ಟದಲಿ; ॥ ಅಗಲದಿರು ರಾಮನನು; ಮಾಯಾ। ವಿಗಳು ಘನ; ಕೇಳೆಂದು ಹೊಂದೊಡ। ವೃಗಳಸಿತ್ತುಪಚರಿಸಿ ಹರಸಿದಳನಸುಯಾದೇವೀ ॥ —(ತೊ.ರಾ)

ಟಿ॥ ಒಗೆಯುದಿಹುದು + ಆಗದೆ—ಹುಟ್ಟದೆ ಇರುವುದಾಗದೆ. ಅಂಗವಟ್ಟ—ಮೈಕಟ್ಟು.

ಅಲ್ಲಿಂದ ಮುಂದೆ ಬಂದಾಗ—

✓ ಸಾ॥ ಸೀತೆಯು ಸುಂಗಲು ಬಂದ ವಿರಾಧನ। ರೀತಿಯನರಿತಾ ರಾಮ ॥ ಧಾತುಗೆಡಿಸೆ ತುಂಬುರನಾದವನಿಂ। ಖ್ಯಾತನಾದ ರಣಭೀಮ ॥

ಟಿ॥ ತುಂಬುರನಾದ + ಅವನಿಂ.

✓ ದಿಂ॥ ಮುಂದೆ ಶರಭಂಗಾಶ್ರಮಮನೈದಲಾಗ। ಅಂದು ಪುಣ್ಯೌಘಾತಿಶಯವನ್ನು ಬೇಗ ॥ ಚಂದದಿಂದಂ ಕೊಟ್ಟಾಮುನಿಪನಗ್ನಿಯಲ್ಲಿ। ಬೆಂದು ಸಂದಂ ರಾಘವನ ಪಾದದಲ್ಲಿ ॥

ಆಮೇಲೆ ಸುತೀಕ್ಷ್ಣನನ್ನು ಕಂಡು ಅಗಸ್ತ್ಯಾಶ್ರಮಕ್ಕೆ ಬಂದಾಗ—

ಶ್ಲೋ॥ ಮುನಿರ್ಜಯತಿ ಯೋಗೀನ್ದ್ರೋ ಮಹಾತ್ಮಾ ಕುಮ್ಭಸಮ್ಭವಃ ॥ ಯೇನೈಕಚುಲಕೇ ದೃಷ್ಟೌ ದಿವ್ಯೌ ತೌ ಮತ್ಸ್ಯಕಚ್ಛಪೌ ॥ —(ಸು)

ಅ॥ ಯಾರ ಒಂದು ಬೊಗಸೆಯಲ್ಲಿ ದಿವ್ಯವಾದ ಆ ಮತ್ಸ್ಯಕೂರ್ಮಗಳು (ವಿಷ್ಣುವಿನ ಅವತಾರಗಳು) ಕಾಣಬಂದವೊ ಆ ಯೋಗೀಂದ್ರನೂ ಮಹಾತ್ಮನೂ ಆದ ಅಗಸ್ತ್ಯನು ಜಯಶೀಲನಾಗಿದ್ದಾನೆ.

ಆ ಅಗಸ್ತ್ಯರು ರಾಮನನ್ನು ಸ್ತುತಿಸಿ—

✓ ಕೀ॥ ಸುರಪತಿಯಿಟ್ಟಿದ್ದರ್ಧ ಧನುವನು ಮೇ। ಣ್ಸುರರತ್ನಖಚಿತಖಡ್ಗವನು ॥ ಮೆರೆವಕ್ಷಯಬಾಣವ ತೂಣೀರವ। ನೆರೆ ಕೊಟ್ಟರು ಗೆಲೆ ದೈತ್ಯರನು ॥

ಅವರ ಅನುಗ್ರಹಕ್ಕೆ ಪಾತ್ರನಾಗಿ ರಾಮನು ಮುಂದೆ ಹೆಜ್ಜೆಯನ್ನಿಡುತ್ತಲೆ ದಂಡಕಾರಣ್ಯವು ಕಾಣಬಂದಿದೆ—

✓ ರ॥ ಕಂಡನಲ್ಲಿಯ ವಿಶೇಷವನು। ದಂಡಕಾವನವನು ॥ ಪ ॥ ಜುಳುಜುಳು ಹರಿಯುವ ಗೋದಾವರಿಯು। ಥಳಥಳ ಹೊಳೆಯುವ ದೂರದ ಗಿರಿಯು।

ಅಲ್ಲಿಗಲ್ಲಿ ಕಾಣುವ ಕಂದರಗಳು। ಎಲ್ಲಿ ನೋಡಿದರು ತೋರುವ ದರಿಗಳು। ತಿಳಿನೀರುಗಳ ಸರೋವರವೈಭವ। ನಲಿವ ಹಂಸಗೂಡಿದ ಕಾರಂಡವ। ಗಿರಿಶಿಖರದಿ ಕೂಗುತಿಹ ಮಯೂರ। ಚರಿಸುತ್ತಿಹ ಮೃಗಗಳ ವ್ಯವಹಾರ। ಬೆಳ್ಳಿಚಿನ್ನ ಮೊದಲಾಗಿಹ ಗಣಿಗಳು। ಒಳ್ಳೆಗೆಣಸುಗಳ ತೆಗೆದಿಹ ಗುಣಿಗಳು। ಚಂದನವೃಕ್ಷದಿ ಬರುವ ಸುಗಂಧ। ಸಂಧಿಸುತಿರಲಾಗುವ ಬಲುಚೆಂದ। ಸಾಲತಾಲಖರ್ಜೂರಗಳಿಂದ। ಮೇಲಹ ಪನಸತಮಾಲದ ವೃಂದ। ಚೂತಾಶೋಕತಿಲಕಪುನ್ನಾಗ। ಕೇತಕಿ ಚಂಪಕಸುಮಗಳ ಯೋಗ। ಬಗೆಬಗೆಯಾಗಿರೆ ತೋರ್ಪ ಲತಾಳಿ। ಪುಗೆಗುಲ್ಮಗಳಿಂದೈತಹ ಗಾಳಿ। ಬಹುವಿಧಶುಕಶಾರಿಕೆಗಳ ನಿನದ। ಬಹಳವಾಗಿ ಹೇಳುವದಿನ್ನೇನದ॥

ಆ ವನದಲ್ಲಿ—

ಷ॥ ಮುನಿಗಳಿದ್ದರು ಮುಂದೆ ನಿಯಮದಾ। ಸನಸವಮಾಥಧ್ಯಾನದಲಿ, ಜಲ। ದನಿಲದಾಹಾರದಲಿ, ಕಾಮಕ್ರೋಧ ಮೊದಲಾದ॥ ಜಿನುಗುಜಾಡ್ಯದ ಜಂಜಡದ ಕೆಲ। ಕೊನೆದು ನಿಖಿಲೇಂದ್ರಿಯದ ಕಳಕಳ। ವನು ನಿವಾರಿಸಿ ಕೇವಲಬ್ರಹ್ಮದಲಿ ನೆಲೆಯಾಗಿ॥ —(ತೊ.ರಾ)

ಟಿ॥ ಜಿನುಗುಜಾಡ್ಯದ—ಕ್ಷುದ್ರರೋಗದ. ಜಂಜಡವ—ಜಡತ್ವವನ್ನು. ಕೆಲಕೆ+ಒನೆದು—ಒಂದು ಪಕ್ಕಕ್ಕೆ ಒತ್ತಿ.

ಅವರೆಲ್ಲರೂ ಅಲ್ಲಿಗೆ ಬಂದ ರಾಮನಿಗೆ ಶುಭಾಗಮನವನ್ನು ಬಯಸಿದ್ದಂತೆಂದರೆ—

ಹಿಂದೂಸ್ಥಾನಿ ಕಾಪಿ—ಆದಿತಾಳ

ರಾಮ, ಬಾರೊ ರಘುನಂದನ। ರಾಮ, ಬಾ ರಾಜೀವಲೋಚನ ॥ ಪ ॥ ರವಿವಂಶದಲ್ಲಿ। ಅವತಾರಮಾಡಿದ। ಕುವಲಯದಲನೇತ್ರನೆ ॥ ೧ ॥ ಕಿರುನಗೆಗೂಡಿದ। ಕರುಣಾಕಟಾಕ್ಷದಿ। ಶರಣರ ಪೊರೆಯುವನೆ ॥ ೨ ॥ ನವನೀಲಮೇಘದ। ಛವಿಯಂತೆ ತೋರುವ। ರವಿಶತಸಮತೇಜನೆ ॥ ೩ ॥ ಎಳೆತುಲಸಿಯ ಮಾಲೆ। ನಲಿದಾಡೆ ಕಂಠದಿ। ಬೆಳಗುವ ಮೃದುಹೃದಯನೆ ॥ ೪ ॥ ದೇವಾದಿದೇವರು। ಸೇವೆಯ ಮಾಡುವ। ಪಾವನಚಿದ್ರೂಪನೆ ॥ ೫ ॥ —(ಭಕ್ತಿ.ಗೀ)

ಇನ್ನೂ ಮುಂದೆ ಬಂದಾಗ ಒಂದು ಕಡೆ ಜಟಾಯು ಕಾಣಬಂದಿದ್ದಾನೆ—

ವಕೀ॥ ಬರುತ ಕಂಡನು ರಾಕ್ಷಸನೆಂದೂಹಿಸಿ। ಗಿರಿಯ ಪೋಲ್ವ ವಿಹಗವನೊಂದ॥ ತರಿಯಲದನು ಖಡ್ಗಕೆ ಕೈಚಾಚಲು। ಭರದಿಂದವನು ಶರಣು ಬಂದ॥

ಆ ಸಂದರ್ಭವನ್ನು ಕವಿ ವರ್ಣಿಸಿರುವದೇನೆಂದರೆ—

ಶ್ಲೋ॥ ಪಾನೇನ ಪೀನಜಲಮಬ್ಧಿಮುಹಾಸ್ಯ ನೂನಮ್। ಮೈನಾಕ ಏಷ ಮುನಿಮಾಶ್ರಯತೀತಿ ಜಾತಾಂ॥ ಶಙ್ಕಾಮಿಮಾಂ ರಘುಪತೇಃ ಕಥಿತಾತ್ಮವಂಶ। ಸ್ತ್ವತ್ತಾತಮಿತ್ರಮಹಮಿತ್ಯಹರಜ್ಜಟಾಯುಃ॥ —(ರಾ.ಚಂ)

ಅ॥ ಅಗಸ್ತ್ಯಋಷಿಗಳು ಕುಡಿದದ್ದರಿಂದ ನೀರಿಲ್ಲದೆ ಹೋದ ಸಮುದ್ರವನ್ನು ಬಿಟ್ಟು ನಿಜವಾಗಿ ಈ ಮೈನಾಕವು ಆ ಮುನಿಯನ್ನು ಆಶ್ರಯಿಸುವದೆಂದು ರಾಮನ ಮನಸ್ಸಿನಲ್ಲಿ ಹುಟ್ಟಿದ ಸಂಶಯವನ್ನು ಜಟಾಯು ತಾನು ನಿಮ್ಮ ತಂದೆಯ ಗೆಳೆಯನೆಂದು ಹೇಳುವದರ ಮೂಲಕ ಹೋಗಲಾಡಿಸಿದನು.

ದಶರಥನಿಗೆ ಮಿತ್ರನಾಗಿದ್ದ ಜಟಾಯು ಈಗ ರಾಮಚಂದ್ರನಿಗೂ ಮಿತ್ರನಾದನು. ಹೇಗೆಂದರೆ—

ಶ್ಲೋ॥ ಔರಸಂ ಕೃತಸಮ್ಬನ್ಧಂ ತಥಾ ವಂಶಕ್ರಮಾಗತಮ್ ॥ ರಕ್ಷಿತಂ ವ್ಯಸನೇಭ್ಯಶ್ಚ ಮಿತ್ರಂ ಜ್ಞೇಯಂ ಚತುರ್ವಿಧಮ್ ॥ —(ಸು.)

ಅ॥ ಸ್ವಜಾತಿಸಂಬಂಧಿ, ಹೊಸಸಂಬಂಧಿ, ಕುಲಪರಂಪರೆಯಿಂದ ಬಂದ ಸಂಬಂಧಿ, ಸಂಕಟದಿಂದ ರಕ್ಷಿಸಲ್ಪಟ್ಟವನು— ಹೀಗೆ ಮಿತ್ರರು ನಾಲ್ಕು ಬಗೆ.

ರಾಮಚಂದ್ರನಿಗೆ ಗೆಳೆಯನಾದ ಜಟಾಯುವಿನ ಯೋಗ್ಯತೆಯು ಬಹಳ ಹೆಚ್ಚಿನದು. ಅದೆಂತೆಂದರೆ—

ಶ್ಲೋ॥ ಕ್ಷಮಾ, ದಯಾ, ಸತ್ಯಮುದಾರಭಾವೋऽಸಙ್ಗೋ, ವಿರಾಗಃ, ಸಮತಾ, ಪ್ರಬೋಧಃ ॥ ಏತೇ ಗುಣಾ ಯಸ್ಯ ಹರೇಃ ಸಖಾಽಸೌ । ಶೀಲೇ ಸಮಾನೇ ಹಿ ವದನ್ತಿ ಸಖ್ಯಮ್ ॥ —(ಸು.ಲಾ)

ಅ॥ ಕ್ಷಮೆ, ದಯೆ, ಸತ್ಯ, ಉದಾರಭಾವ, ಅಸಂಗ, ವಿರಾಗ, ಸಮತ್ವ, ಜ್ಞಾನ— ಈ ಗುಣಗಳುಳ್ಳವನು ಹರಿಯಗೆಳೆಯನು. ಸಮಾನಶೀಲರಿಗಷ್ಟೆ ಗೆಳೆಯತನವೆಂದು ಹೇಳುತ್ತಾರೆ?

ಆಗ ರಾಮನ ವೃತ್ತಾಂತವನ್ನೆಲ್ಲ ತಿಳಿದ ಜಟಾಯು ದಶರಥನ ಮರಣಕ್ಕೆ ಮರುಗುತ್ತಾನೆ—

ಷ॥ ಅಕಟ! ದಶರಥರಾಯನಮರ । ಪ್ರಕರದಲಿ ಸೇರಿದನೆ!! ಶಿವಶಿವ!!! । ಸಕಲಭೂಪಾಲಂಕೃತನು ಸಾರಿದನೆ ಸುರಪುರವ!!! ॥ ಪ್ರಕಟಿತಾತ್ಮಪ್ರಿಯನ ಮೃತಿವಾ । ಚಕವ ಕೇಳ್ದೆನೆ? ಹಾ! ಎನುತಲಿ । ವ್ಯಕುತಜಲಬಿಂದುಗಳ ಬಿಡದುಗುಳಿಚಿದನಕ್ಷಿಯಲಿ ॥ —(ತೊ.ರಾ.)

ಟಿ॥ ಅವ್ಯಕುತಜಲಬಿಂದುಗಳ— ಸಣ್ಣನೀರುಹನಿಗಳನ್ನು. (ಬಿಡದೆ)+ಉಗುಳಿಚಿದನು— ಕೆಡಪಿದನು.

ಸ್ವಲ್ಪ ಸಮಾಧಾನವಾದ ಮೇಲೆ ಅವನು ರಾಮನನ್ನು ಕುರಿತು ಹೇಳಿದ್ದೇನೆಂದರೆ—

ಕೀ॥ ದೇವಾಸುರಯುದ್ಧದಿ ದಶರಥನಿಗೆ । ಜೀವದ ಸಖನಾದಾ ನಾನು ॥ ದೇವನೆ, ವನದಲಿ ನಿನ್ನಯ ಪತ್ನಿಯ । ಕಾವಲಿಗಿರೆ ಬೆಸಸೈ ನೀನು ॥

ಜಟಾಯುವಿನ ಈ ನಡೆವಳಿಕೆಯೇ ಪೀಠಿಕೆಯಲ್ಲಿ ಹೇಳಿರುವ "ಗೆಳೆಯತನವದು ಬೆಳೆಯಲೊಬ್ಬನೊಳ್" ಮೊದಲಾಗಿರುವ ನುಡಿಗೆ ಉದಾಹರಣೆ.

ಅದಕ್ಕೆ ಸಮ್ಮತಿಯನ್ನು ಕೊಟ್ಟು ಮುಂದೆ ಬರುತ್ತ ರಾಮಚಂದ್ರನಿಗೆ ಪಂಚವಟೀಪ್ರದೇಶದಲ್ಲಿ ಗೋದಾವರೀನದಿಯು ಕಾಣಬರಲು—

ಷ|| ಆ ಸದಿಯ ಕಂಡಾಗಘೌಘಕ್ಷಶಾಸು ಪರಿತೋಷದೊಳಗೆಮುಗೀ। ಸ್ನಾನವೇ ಸಾಕೆಂದು ನಿಶ್ಚಯಿಸಿದನು ಬೀಡಿಕೆಯ; ॥ ಸ್ನಾನಪಾನಾದಿಗಳಿಗಿವು ಪರ । ಮೂಸುಗುಣವಾಯ್ತೆಂದು ತೊರವೆಯ । ಶ್ರೀನೃಸಿಂಹಸು ಬಂದು ಪೊಕ್ಕನು ಪರ್ಣಮಂದಿರವ ॥ —(ತೊ.ರಾ)

ಟಿ|| ಅಘೌಘಕ್ಷಶಾಸು—ಪಾಪಗಳ ಗುಂಪಿಗೆ ಬೆಂಕಿಯಾದವನು. ಬೀಡಿಕೆಯ—ವಾಸವನ್ನು

ಶ್ರೀರಾಮನು ಸೀತಾಲಕ್ಷ್ಮಣಸಮೇತನಾಗಿ ವಾಸಮಾಡುತ್ತಿರುವಾಗ ಮನುಷ್ಯಗಂಧವನ್ನು ಹಿಡಿದ ಶೂರ್ಪನಖಿಯೆಂಬ ರಾಕ್ಷಸಿಯು ಅವರನ್ನು ತಿನ್ನಲೆಂದು ಬಯಸಿ ಬರುತ್ತ ದೂರದಿಂದ ರಾಮನನ್ನು ನೋಡಿ ಕಾಮುಕಳಾಗಿ ಅವನನ್ನು ಪತಿಯಾಗಿ ಒಲಿಸಿಕೊಳ್ಳುವ ಯೋಚನೆಯಿಂದ ಕಾಣಿಸಿಕೊಂಡದ್ದೆಂತೆಂದರೆ—

ಷ|| ನಿಡುಜಡೆಯ, ನಗೆಮೊಗದ, ಕಂಗಳ।ಬೆಡಗ, ಸುಲಿಪಲ್ಲುಗಳ, ಚಿಗುರಿನ । ಸಡಗರದ ಚೆಂದುಟಿಯ, ಕಂಠದೊಳೆಸೆವ ಹಾರಗಳ, ॥ ಕೊಡವೊಲೆಯ ಬಡತನುವು ತಾಳದೆ।ನಡುಗುತೊಯ್ಯಾರದಲಿ ಮೆಲ್ಲಡಿ।ಯಿಡುತಬಲೆ ನಡೆತಂದು ನುಡಿದಳು ರಾಮಚಂದ್ರನೊಳು ॥ —(ರಾ.ಕ.ಕು)

ಹೀಗೆ ಮಾಯಾವೇಷದಿಂದ ಬಂದ ಶೂರ್ಪನಖಿಯು ಹೇಳಿದ್ದೇನೆಂದರೆ—

ಕಂ|| ಸ್ಮರಸಂ ಶರೀರದಿಂ, ತಾ। ವರೆಯಂ ಕಣ್ಣಿಂದೆ, ಚಂದ್ರನಂ ಮುಖದಿಂ, ಧಿ ॥ ಕ್ಕರಿಸುವೆ; ನೀನಾರೆಲೆ ನರ। ವರ? ನಿನ್ನಂ ನೋಡಿ ಕಾಮುಸತಿಯಾಗಿರ್ಪೆಂ ॥ —(ರಾ.ನಾ)

ಆಗ ರಾಮನು ತನ್ನ ವೃತ್ತಾಂತವನ್ನು ಹೇಳುತ್ತಲೆ ಶೂರ್ಪನಖಿ ಹೇಳುತ್ತಾಳೆ—

ಕಮಾಚು—ರೂಪಕ

ದಯಮಾಡಿ ಎನ್ನ ಕೈಯ ಹಿಡಿಯೊ।ಭಯವ ತಾಳದೆ ॥ ಜಯಶೀಲನಾಗಿ ಬಾಳ್ವೆ ಇಲ್ಲಿ।ಕೇಳೊ ಪೇಳುವೆ ॥ ೧ ॥ ನಾನಾಗಿ ಬಂದು ಬೇಡುತಿಹೆನು । ದೀನತೆಯಿಂದ ॥ ನೀನೀಗ ಬಿಡದೆ ಕಾಯ್ದುದೆನ್ನ । ಪ್ರಾಣಗಳನು ॥ ೨ ॥ ಬಹುಭೋಗಭಾಗ್ಯವೀವೆ ನಾನು।ಬಯಸೊ ಎನ್ನನು ॥ ಮಹಿಯಲ್ಲಿ ನಿನಗೆ ಸಾಮ್ಯರಿಲ್ಲ। ವೆನಿಪೆ ನಿನ್ನನು ॥ ೩ ॥ ಸ್ಮರನಸ್ತ್ರದಿಂದ ಬೆಂದು ಬೂದಿ।ಯಾಗುತಿರುವೆನು ॥ ನೆರೆ ರಮಿಸಿ ಜೀವವುಳಿಸುವದೀ ।ಸುಂದರಿಯನು ॥

ಅದಕ್ಕೆ ರಾಮನ ಉತ್ತರ—

✓ ಸಾ|| ಎನಗಿಹಳೊಬ್ಬಳು ಹೆಂಡತಿ ಸೀಯೆ।ನ್ನನುಜನ ಬಳಿಯೊಳು ಬೇಡು॥ ನಿನಗವನಿಂದಲಿ ಫಲವಾಗುವದೆನೆ।ದನುಜೆಗಾಯಿತದು ಪಾಡು ॥

ಅಲ್ಲಿ ಅವಳ ಪ್ರಾರ್ಥನೆಗೆ ಲಕ್ಷ್ಮಣನ ಉತ್ತರ—

✓ ದಿಂ|| ದಾಸನಾಗಿರ್ಪೆನ್ನಿಂದ ಲಾಭವೇನು?। ದಾಸಿಯಿವಳೆಂದೇ ಕರೆಸಿಕೊಳ್ವೆ ನೀನು ॥ ಬೇಸರಿಸ ಬೇಡಾ ಪೋಗು ರಾಮನನ್ನು । ಲೇಸೆನಲು ಕೇಳಾ ಪಡೆವೆಯಿಷ್ಟವನ್ನು ॥

ಹೀಗಾಗಿ ರಾಮಲಕ್ಷ್ಮಣರಲ್ಲಿ ಯಾರನ್ನು ವರಿಸಬೇಕೋ ಅದು ಅವಳಿಗೆ ತೋರದೆ ಹೋಗಿದೆ.

ಶ್ಲೋ|| ದಶರಥಾತ್ಮಜಯುಗ್ಮನಿರೀಕ್ಷಣಾ । ಕ್ಷಣಸಮಾಕುಲಬುದ್ಧಿರಿ-ಯಂ ದಧೌ || ಉಭಯಕೂಲಸಮುತ್ಥಿತಶಾದ್ವಲ । ಭ್ರಮಗತಾಗತಖಿನ್ನಗವೀಂ ದಶಾಮ್ || —(ರಾ.ಚಂ.)

ಅ|| ದಶರಥನ ಇಬ್ಬರು ಮಕ್ಕಳನ್ನು ನೋಡಿದ ಕ್ಷಣದಲ್ಲಿಯೇ ಅವಳ ಬುದ್ಧಿಯು ಎರಡು ಪಕ್ಕದಲ್ಲಿಯೂ ಸಮವಾಗಿ ಹಸಿರುಹುಲ್ಲಿರುವದನ್ನು ನೋಡಿ ಅತ್ತೊಮ್ಮೆ ಇತ್ತೊಮ್ಮೆ ಹೋಗಿ ಬರುವ ಆಕಳ ಪಾಡನ್ನು ಪಡೆಯಿತು.

ರಾಮನ ಕಡೆಗೆ ಮತ್ತೆ ಶೂರ್ಪಣಖಿ ಬಂದಾಗ—

ಕೀ|| ಇರುವನೇಕಪತ್ನಿಯು ವ್ರತದೊಳು ನಾ । ಬರಿದೆ ಬಳಲಬೇಡೆನ್ನಿದಿರೊಳ್ || ತೆರಳೆನಲಾ ಪತ್ನಿಯ ತಿಂದಪೆನೆನೆ । ಕರೆದನಾಗ ತಮ್ಮನ ಭರದೊಳ್ ||

ಆಗ ರಾಮನು ಲಕ್ಷ್ಮಣನಿಗೆ ಹೇಳಿದ್ದು—

ಷ|| ಚೆಲುವತನವನು ತೋರಿ ನಿನ್ನನು । ನೊಲಿಸಲೈದಿದಳಿವಳ ಲೋಕಕೆ । ಚೆಲುವತನವನು ಮಾಡಿಬಿಡು ಸಾಕೀ ನಿಶಾಚರಿಯ || ಕೊಲುವದನುಚಿತವೆಂದು ನುಡಿವುದ । ರೊಳಗವಳ ನಾಸಿಕವನುಸ್ಟಕೆ । ಬಳಿಸಿದನು; ಕಳಚಿದನು ಕರ್ಣದ್ವಯದ ಬೆಸುಗೆಗಳ || —(ತೊ.ರಾ)

ಇದನ್ನು ಕಂಡು ಸೀತೆ ನಗುತ್ತ ರಾಮನಿಗೆ ಹೇಳುತ್ತಾಳೆ—

ಷ|| ನಿಮ್ಮ ಚಿತ್ತಕೆ ಬಾರದಿರೆ ನೀ । ವೆಮ್ಮ ನ್ಯೂದುಸಗಾದರೆಯು ನ । ಮ್ಮೊರ್ಮಿಳಾವಾಸಿನಿಗೆ ಪಡಿಯಾಗಿರಲು ಮಾಡುವದು; || ನಿಮ್ಮ ರೂಪಿಗೆ ಸೋತವಳ ನೀ । ವ್ಗುಮ್ಮನನು ಮಾಡುವದು ಗುಣವೇ? ನಮ್ಮ ಮನಕಿದು ಬಾರದೆಂದಳು ನಗುತ ನಳಿನಮುಖಿ || —(ತೊ.ರಾ)

ಟಿ|| ಪಡಿ—ಪ್ರತಿ. ಗುಮ್ಮ—ಹೆದರಿಕೆಯಾಗುವ ರೂಪು.

ಆಮೇಲೆ ಶೂರ್ಪಣಖಿಯು ಜನಸ್ಥಾನಕ್ಕೆ ಬಂದು ಅಣ್ಣನಾದ ಖರಾಸುರನಿಗೆ ಹೇಳುತ್ತಾಳೆ—

ನಾದರಾಮಕ್ರಿಯೆ—ಅಟತಾಳ

ಅಣ್ಣಾ ಎನ್ನನು ನೀನು । ಕಣ್ಣಾರೆ ನೋಡೋ || ಇನ್ನಾರಿಗುಸುರಲೊ । ಮನ್ನಣೆ ನೀಡೊ || ಪ || ದಶರಥನ ಸುತನಂತೆ । ವಸುಧೆಗೊಡೆಯನಂತೆ || ಅಸಮ ವಿಕ್ರಮನಂತೆ । ಬೆಸೆದನೆನಗೆ ಚಿಂತೆ || ೧ || ಮನುಜನು ಹೆಂಡತಿ । ಯನು ಕೂಡಿ ಕೊಂಡಿಲ್ಲಿ || ಮನೆಮಾಡಿರಲು ಎನ್ನ । ಮನವು ಪೋಯ್ತವರಲ್ಲಿ || ೨ || ಎಂತಹ ತರುಣರು! । ಎಂಥ ಆಭರಣರು! || ಎಂತಹ ಕಿರಣರು! । ಇಂತೆನ್ನಗೈದರು || ೩ ||

ಎಂದು ತನ್ನ ಕಿವಿಮೂಗುಗಳನ್ನು ಅವನ ಮುಂದೆ ಬಿಸಾಡುತ್ತಲೆ—

ಷ|| ಖಳನ ಖರಕೋಪಾನಲನ ದ । ಳ್ಳುರಿಗೆ ಸಿಡಿದವು ತಾರೆ; ನಿಮಿನಿಮಿ । ಗರೆದುದಂಬರಸಿಂದು; ಸುರಪುರ ಹೊಗೆದುದಗಲದಲಿ; || ತರುಣ, ಕೇಳೈ ಕುಶನೆ, ರಾಕ್ಷಸ । ತರುಣಿಗಾದಭಿಮಾನಭಂಗದ । ಭರದ ಬವರಕೆ ಬಹಳ ಬಲಸಹಿತಸುರ ಹೊರವಂಟ || —(ತೊ.ರಾ)

ಟಿ॥ ಖರಕೋಪಾನಲನ—ತೀಕ್ಷ್ಣವಾದ ಕೋಪವೆಂಬ ಬೆಂಕಿಯು. ಹೊಗೆದುದು—ಹೊಗೆಯಿಂದ ತುಂಬಿತು.

ರ॥ ಬಂತೈ। ಖರದೈತ್ಯನ ಸೇನೆ ಬಂತೈ ॥ ಪ ॥ ಮೊರೆಯುತ್ತಿರೆ ರಣಭೇರೀಧ್ವನಿಗಳು । ತೆರಪಿಲ್ಲದೆ ಬರುತಿರೆ ಯೋಧರ್ಕಳು। ಧೂಳಿಯೆದ್ದು ಮುಸುಕಿರಲಂಬರವನು। ಮೇಲೆ ಸುರಿಸೆ ಗಜಘಟೆ ಕಂಬನಿಯನು । ಕುದುರೆಗಳೆಲ್ಲಾ ತಲೆಗೊಡಹುತ್ತಿರೆ। ಬೆದರುತೆ ಭೂಭಾಗವು ನಡುಗುತ್ತಿರೆ । ಧ್ವಜದ ಮೇಲೆ ಹದ್ದುಗಳೆರಗುತ್ತಿರೆ। ನಿಜದಿಂ ರಕ್ತದ ಮಳೆ ಸುರಿಯುತ್ತಿರೆ । ರವಿಮಂಡಲವನು ಕಾವಳ ಕವಿದಿರೆ। ಜವದಿಂದಂ ತಾರೆಗಳುದುರುತ್ತಿರೆ ॥

ಈ ಸೇನೆ ಬರುವದನ್ನು ನೋಡಿ ಧನುಸ್ಸಿಗೆ ಕೈಹಾಕಿದ ತಮ್ಮನನ್ನು ಹಿಮ್ಮೆಟ್ಟಿಸಿ ರಾಮನು ಹೇಳುತ್ತಾನೆ—

ಷ॥ ಬೇಗ ಮಾಡಿದಿರಿರಿಸು ಸೀತೆಯು। ನೀ ಗಿರಿಯ ಶಿಖರದಲಿ; ಕೈಮುಗಿ। ಲಾಗಿ ಬಂದರಿಭಟರ ಭಂಜಿಪ ನೇಮ ನಿನಗಿಸಿತು; ॥ ಬಾಗೆ ನಮಗೀ ರಕ್ಕಸರ ರಣ । ದಾಗು; ತಾ ಕಾರ್ಮುಕವನೆಂದು ಸ । ರಾಗದಲಿ ಸಾಹಸಪರಾಕ್ರಮಿ ನಮರಕನುವಾದ ॥ —(ತೊ.ರಾ)

ಟಿ॥ ಇದಿರಿರಿಸು—ಇದಿರಲ್ಲಿರುವ ಶಿಖರದಲ್ಲಿರಿಸು. ಬಾಗೆ—ಬರಲಿ; ನನ್ನ ಭಾಗಕ್ಕಿರಲಿ.

ಅಷ್ಟು ಹೊತ್ತಿಗೆ ಸರಿಯಾಗಿ—

ಚೌ॥ ಮುಸಗಿದುದು ಪಡೆ ರವಿಯು ಕತ್ತಲೆ ಮುಸಗಿ ತಾ ಕವಿವಂದದಿ। ಎಸೆವ ಮಂಜಿನ ಹುಸರ ನೀಲಾಚಲವನಾವರಿಪಂದದಿ ॥ ಹಸಿದ ಹೆಬ್ಬುಲಿಯಿದ್ದೆಡೆ ವಿಲಂಘಿಸುವ ಮೃಗಕುಲದಂದದಿ। ದೆಸೆದೆಸೆಯೊಳಬ್ಬರಿಸುತಿರೆ ರಕ್ಕಸರು ಮೋಡಗಳಂದದಿ ॥

ಆ ಯುದ್ಧವು ನಡೆದುದನ್ನು ವಾಲ್ಮೀಕರು ಒಂದೇ ಮಾತಿನಲ್ಲಿ ಲವಕುಶರಿಗೆ ಹೇಳಿರುವದೇನೆಂದರೆ—

ಷ॥ ಕಾಣೆನಿದಿರಲಿ ಕವಿವ ಕಾದುವ । ಕೋಣಪರ ಕೋಳಾಹಳಿಕೆಗಳ; । ಕಾಣೆನೈ ಕಣ್ಣಾಳತೆಯಲಿ ಕುಂಭಿಣಿಯ ವಿವರಣವ; ॥ ಕಾಣಿಸಿತು ಕರ್ಬುರರ ಕದನದ। ಶೋಣಿತಾಂಬುಧಿಯುಗಳದಲಿ; ಬಲು। ಬಾಣರೊಳಗಿಂದಾವ ಧೀರನೊ ನಿಮ್ಮ ಪಿತನೆಂದ ॥ —(ತೊ.ರಾ)

ಟಿ॥ ಕೋಣಪರ—ರಾಕ್ಷಸರ. ಕೋಳಾಹಳಿಕೆಗಳ—ಆರ್ಭಟಗಳನ್ನು. ಕುಂಭಿಣಿ—ಭೂಮಿ. ಕರ್ಬುರರ—ರಾಕ್ಷಸರ.

ಇತ್ತ ಹೀಗೆ ಶತ್ರುಸಂಹಾರವನ್ನು ಮಾಡಿ ರಾಮನು ಸ್ವಸ್ಥನಾಗಿರಲು ಶೂರ್ಪನಖಿ ಲಂಕೆಗೆ ಹೋಗಿ ರಾವಣನ ಮುಂದೆ ತನ್ನ ಕಿವಿಮೂಗುಗಳನ್ನು ಬಿಸುಟು ಹೇಳುತ್ತಾಳೆ—

ಶ್ಲೋ॥ ಸಕ್ತಂ ಗ್ರಾಮ್ಯೇಷು ಭೋಗೇಷು ಕಾಮವೃತ್ತಂ ಮಹೀಪತಿಮ್। ಲುಬ್ಧಂ ನ ಬಹುಮನ್ಯಂತೇ ಶ್ಮಶಾನಾಗ್ನಿಮಿವ ಪ್ರಜಾಃ ॥—(ಶ್ರೀ.ರಾ)

ಅ‖ ಗ್ರಾಮ್ಯವಾದ ಭೋಗಗಳಲ್ಲಿ ಆಸಕ್ತನಾಗಿ ಸ್ತ್ರೀಲೋಲನಾಗಿ ಲೋಭಿಯಾಗಿರುವ ರಾಜನನ್ನು ಪ್ರಜೆಗಳು ಶ್ಮಶಾನದ ಅಗ್ನಿಯನ್ನು ಹೇಗೊ ಹಾಗೆ ಬಹುಮಾನಿಸುವದಿಲ್ಲ.

ನಿನ್ನೆದುರಿಗೇ ನನಗಾದ ಈ ಅವಸ್ಥೆಯನ್ನೇನು ಹೇಳಲೆಂದು ಹೇಳುತ್ತಾಳೆ—

ಧನ್ಯಾಸಿ—ಛಾಪು

ಹೇಳಲೇನ ನಾ ನಿನ್ನ ಮುಂದಿಗೇ | ಹಾಳಾದೆನೊ ಅಣ್ಣಾ ‖ ಪ ‖ ತಾಳಲಾರೆನೋ ಈ ಅಪಮಾನವ | ಬಾಳುಗೆಟ್ಟೆ ಕಾಣಣ್ಣಾ ‖ ಅ.ಪ ‖ ಪಂಚವಟಿಯೊಳಗೆ ಬಂದಿರ್ಪರು ಬಹು | ಮುಂಚುತಿರ್ಪ ನಾರಿ ‖ ಹೊಂಚುತವಳ ತರಹೋದರೆ ಜೇವಕೆ | ಸಂಚಕಾರವಾದಳು ನಾರಿ ‖ ೧ ‖ ಅವಳನು ವಶಗೊಂಡಿಹ ಮಾನಿಸರಿಂ | ಬವಣೆಗೊಂಡೆನಯ್ಯೋ ‖ ಅವಳ ನಿನ್ನೊಡನೆ ಕೂಡಿಪ ಭರದಲಿ | ಜನರ ಕೈಗೆ ಸಿಕ್ಕಿದೆನಯ್ಯೋ ‖ ೨ ‖ ಸತ್ತರು ಖರದೂಷಣಾದಿ ಸರ್ವರು | ಮರ್ತ್ಯರಿಂದ ಕೇಳೋ ‖ ಅತ್ತು ಅತ್ತು ಸಾಕಾಗಿರ್ಪೆನು ಮನ | ವಿತ್ತು ಮುಂದೆ ಪೇಳೊ ‖ ೩ ‖

ಆಗ ರಾವಣನು ಕ್ರುದ್ಧನಾಗಿ ಹೇಳುತ್ತಾನೆ—

ಷ‖ ಅಳಿಪೆನೋ ಹದಿನಾಲ್ಕು ಲೋಕವ? | ಹಿಳಿಪೆನೋ ಹರಿಯಜಭವಾದ್ಯರ? | ತಳಿಪೆನೋ ಬಾಹುಪ್ರತಾಪಾನಲನ ಬಲುಗಿಡಿಯ? ‖ ಉಳಿಸದಿರಿಯಲು ಬೇಕು ತಂಗಿಯ | ಬಳಲಿಸಿದ ಬಲ್ಲಿದನನೆನುತಲಿ | ಗೊಳುವ ಕಡುಗೋಪದಲಿ ಕಿಡಿಕಿಡಿಯಾದನಸುರೇಂದ್ರ ‖ —(ತೊ.ರಾ)

ಟಿ‖ ಹಿಳಿ—ಹಿಂಡು. ಉಳಿಸದೆ+ಇರಿಯಲುಬೇಕು.

ಆ ಸಮಯದಲ್ಲಿ ಸಭೆಯೆಲ್ಲ ಹೆದರಿದ್ದದ್ದೆಂತೆಂದರೆ—

ಶ್ಲೋ‖ ಬ್ರಹ್ಮನ್ನಧ್ಯಯನಸ್ಯ ನೈಷ ಸಮಯಸ್ತೂಷ್ಣೀಂ ಬಹಿಃ ಸ್ಥೀಯತಾಮ್; | ಸ್ವಲ್ಪಂ ಜಲ್ಪ ಬೃಹಸ್ಪತೇ, ಜಡಮತೇ, ನೈಷಾ ಸಭಾ ವಜ್ರಿಣಃ; ‖ ವೀಣಾಂ ಸಂಹರ ನಾರದ; ಶ್ರುತಿಕಥಾಲಾಪೈರಲಂ ತುಂಬುರ; | ಸೀತಾಮಲ್ಲಕಭಲ್ಲಭಗ್ನಮನಸಃ ಸ್ವಸ್ಥೋ ನ ಲಂಕೇಶ್ವರಃ ‖ —(ಹ.ನಾ)

ಅ‖ ಬ್ರಹ್ಮನೆ, ವೇದಪಾಠಕ್ಕೆ ಇದು ಸಮಯವಲ್ಲ; ಸುಮ್ಮನೆ ಹೊರಗೆ ಕೂತುಕೊ. ದಡ್ಡನಾದ ಬೃಹಸ್ಪತಿಯೆ, ಇದು ಇಂದ್ರನ ಸಭೆಯಲ್ಲ; ಮಾತು ಸ್ವಲ್ಪವೇ ಆಡು. ನಾರದನೆ, ವೀಣೆಯನ್ನು ಸಾಕುಮಾಡು. ತುಂಬುರನೆ ಶ್ರುತಿಯ ಕಥೆಗಳ ಮಾತು ಸಾಕು. ರಾವಣನು ಒಂದು ಹಂಸಭೇದದಂತಿರುವ ಸೀತೆಯೆಂಬ ಕರಡಿಯಿಂದ ಮನಸ್ಸಿನಲ್ಲಿ ನೊಂದವನಾಗಿದ್ದಾನೆ; ಸ್ವಾಭಾವಿಕವಾದ ಸ್ಥಿತಿಯಲ್ಲಿಲ್ಲ.

ಆಗ ರಾವಣನು ಶೂರ್ಪನಖಿಯ ಅವಮಾನದ ವಿಚಾರವನ್ನು ಮರೆತು ಸೀತೆಯ ವಿಚಾರವನ್ನೆ ಹೆಚ್ಚಾಗಿ ಮನಸ್ಸಿಗೆ ತಂದುಕೊಂಡು ಅವಳ ಸೌಂದರ್ಯದ ವಿಷಯವಾಗಿ ಪ್ರಶ್ನೆಮಾಡಿದಾಗ ಶೂರ್ಪನಖಿ ಹೇಳುತ್ತಾಳೆ—

ಚಾ‖ ಚೆಲುವಿಕೆಗೆ ಹಿಮವಂತಸುತೆಗಗ್ಗಳೆಯೆನಿಸಿ ಶೋಭಿಸುವಳು | ಸಲೆ ಮಹಾಮಂಗಲತೆಗೆ ರಮಾದೇವಿಯನು ಮೀರಿರುವಳು ‖ ಬಲಿಪಿನಲಿ ಸರಸಿಜನ

ರಾಣಿಯು ಬಲುಮೆಯುಸು ಮರೆಸಿರುವಳು। ಲಲನೆರತಿಗಿತಿಮುಖ್ಯರನು ಕೀಳೆನಿಪ್ಪ ದಿನ್ನೇನಿಳೆಯೊಳು ॥

**ಆಗ ರಾವಣನಿಗೆ ಸೀತೆಯ ಮೇಲೆ ಮನಸ್ಸಾಗಿ ಅದರ ಯತ್ನಕ್ಕೆ ಹೊರಟು—**

✓ ಕೀ॥ ಭರದಿಂ ಮಾರೀಚನ ಬಳಿಗೈದುತೆ। ಸುರರಿಪು ನೆರವಾಗೆನೆ ತನಗೆ ॥ ಸ್ಮರಿಸುತವನು ಹಿಂದಿನ ವೃತ್ತಾಂತವ। ತೊರೆದಿದ ಹೋಗೆಂದನು ಮನೆಗೆ ॥

**ರಾವಣನು ಹೆಚ್ಚು ನಿರ್ಬಂಧಿಸಿದ ಮೇಲೆ ಮಾರೀಚನು ಹೇಳಿದ್ದೇನೆಂದರೆ—**

ಶ್ಲೋ॥ ಸುಲಭಾಃ ಪುರುಷಾ ಲೋಕೇ ಸತತಂ ಪ್ರಿಯವಾದಿನಃ। ಅಪ್ರಿಯಸ್ಯ ಚ ಪಥ್ಯಸ್ಯ ವಕ್ತಾ ಶ್ರೋತಾ ಚ ದುರ್ಲಭಃ ॥ —(ಶ್ರೀ.ರಾ)

**ಅ॥ ಯಾವಾಗಲೂ ಕಿವಿಗಿಂಪಾದ ಮಾತನ್ನಾಡುವ ಜನರು ಬಹುಸುಲಭ; ಕಿವಿಗಿಂಪಾಗದಿದ್ದರೂ ಹಿತಕರವಾದ ಮಾತನ್ನು ಹೇಳುವವರೂ ಕೇಳುವವರೂ ಇಬ್ಬರೂ ದುರ್ಲಭ.**

**ಜುಂಜೋಟಿ—ರೂಪಕ**

ಇಷ್ಟೇಕೆ? ಮನದಿಹಠವು। ಕಷ್ಟಾತ್ಮನೆನಿಪೆ ಜಗದಿ॥ಸೃಷ್ಟೀಶನೊಡನೆ ರಣದ। ಕಟ್ಟಾಳುವೆನಿಸೆ ನಿಜದಿ ॥ ಪ ॥ ನರನಲ್ಲ ಕಾಣೊ ರಾಮು । ಧುರದಲ್ಲಿ ತಾ ನಿಸ್ಸೀಮ ॥ ತರಳಾಕ್ಷಿಯಲ್ಲ ಪ್ರೇಮ। ಸರಿಯಲ್ಲ ದೈತ್ಯಭೀಮ ॥೧॥ ಶರವೊಂದರಿಂದ ನಾನು। ಹರಿತಂದೆ ನೋಡು ನೀನು ॥ ಪರಿಪೂರ್ಣಶಕ್ತನವನು। ನೆರೆ ಪೇಳಲಾರೆನದನು ॥ ೨ ॥ ಕಿವಿಗೊಟ್ಟು ಕೇಳೊ ಅಳಿಯ । ರವಿವಂಶದೀಪನಳಿಯ ॥ ಅವಲೋಕಿಸೆನ್ನ ಸ್ಥಿತಿಯ। ತವೆ ನೋಡು ನಿನ್ನ ಗತಿಯ ॥ ೩ ॥

**ಟಿ॥ ಕೇಳೊ ಅಳಿಯ—ಅಳಿಯನೇ ಕೇಳು. ....ದೀಪನಳಿಯ—....ದೀಪಪ್ರಾಯನಾದ ರಾಮನು ಅಳಿಯುವದಿಲ್ಲ. (ನಾಶವಾಗುವದಿಲ್ಲ)**

**ಆಗ ರಾವಣನ ಮಾತು—**

✓ಸಾ॥ ಎನ್ನುದ್ದೇಶಕೆ ನೆರವಾಗದಿರಲು। ನಿನ್ನನು ಕೊಲ್ಲುವೆ ನಾನು॥ಎನ್ನಯ ಶೌರ್ಯವ ತಿಳಿಯದೆ ಬೊಗಳುವೆ। ನಿನ್ನೊಡನೆನಗಿನ್ನೇನು? ॥

**ಈ ಮಾತನ್ನು ಕೇಳಿ ಮಾರೀಚನು ಯೋಚಿಸಿದ್ದೇನೆಂದರೆ—**

✓ ಕೀ॥ ದುರುಳನಾದ ರಾವಣನಿಂ ದೊರೆಯುವ । ಮರಣಕಿಂತ ರಘುವರನಿಂದ ॥ ಬರುವ ಮರಣವೇ ಶ್ರೇಯಸ್ಕರವೆಂ। ದರಿದದನೇ ಮನಸಿಗೆ ತಂದ ॥

**ಮುಂದೆ ಆದದ್ದೇನೆಂದರೆ—**

ಷ॥ ಕಾಮುಕಗೆ ಭಯಲಜ್ಜೆ, ಎದ್ದಾ। ಕಾಮನಿಗೆ ಸುಖನಿದ್ರೆ, ದ್ರವ್ಯಾ। ಕಾಮನಗೆ ಗುರುಬಂಧು, ಕ್ಷುಧೆಯುಳ್ಳವಗೆ ರುಚಿ, ಸೌಖ್ಯ ॥ ಭೂಮಿಯಲಿ ತೋರದಿಹುದೆಂಬುದ! ನೀ ಮದಾಂಧನಲೀಕ್ಷಿಸಿದೆ ನೆಂ। ದಾ ಮಹಾಮಾರೀಚ ನುಡಿದನು ಪಙ್ಕ್ತಿಕಂಧರಗೆ ॥ —(ರಾ.ಕ.ಕು)

**ಕೊನೆಗೆ ಅವನು ಮಾತುಕೊಟ್ಟದ್ದೇನೆಂದರೆ—**

ದಿ॥ ರಾಮನಂ ನಾ ದೂರಕ್ಕೆ ಸೆಳೆವೆನೀಗ । ಕಾಮಿನಿಯನಾಗಳೊಯ್ಕೊಂಡು ಪೋಗು ಬೇಗ ॥ ಆ ಮಹಾತ್ಮಮುನಿಂ ಬಿಡದೆ ನಾನು ಸಾಯ್ವೆ । ನೇಮದಿಂ ನೀನುಂ ಸಾಯ್ವೆಯೆಂದು ನುಯ್ವೆ ॥

ಇಷ್ಟು ಹೇಳಿ ರಾಮನನ್ನು ಸೀತೆಯಿಂದಗಲಿಸುವದಕ್ಕೇನು ಮಾಡಬೇಕೆಂದು ಮಾರೀಚನು ನೀತಿಯನ್ನು ನೆನೆಸಿಕೊಳ್ಳುತ್ತಾನೆ—

ಶ್ಲೋ॥ ಯಸ್ಯ ಚಾಪ್ರಿಯಮಿಚ್ಛೇತ್ತಸ್ಯ ಕುರ್ಯಾತ್ಸದಾ ಪ್ರಿಯಮ್ । ವ್ಯಾಧಾ ಮೃಗವಧಂ ಕರ್ತುಂ ಸಮ್ಯಗ್ಗಾಯನ್ತಿ ಸುಸ್ವರಮ್ ॥ —(ಸು)

ಅ॥ ಯಾರಿಗೆ ಅಪ್ರಿಯವನ್ನು ಮಾಡಬೇಕೆಂದಿರುವದೋ ಅವರಿಗೆ ಯಾವಾಗಲೂ ಪ್ರಿಯವನ್ನು ಮಾಡಬೇಕು. ಮೃಗಗಳನ್ನು ಕೊಲ್ಲುವದಕ್ಕೆ ಹೊರಟ ಬೇಡನು ಒಳ್ಳೆ ಸ್ವರದಿಂದ ಚೆನ್ನಾಗಿ ಹಾಡುತ್ತಾನೆ.

ಹೀಗೆಂದು ಆಗ ಅವನು ಮಾಡಿದ್ದೇನೆಂದರೆ—

ಷ॥ ಬೆದರುಗಂಗಳ ನೀಲಗಳ, ಮಾಣಿಕ್ಯದ ವಿಷಾಣದ್ವಯದ, ವೈಡೂರ್ಯದ ಶ್ರುತಿಯ, ಗೋಮೇಧಿಕದ ತೊಡೆಗಳ ವಿಲಾಸಗಳ, ॥ ಪೊಸದ ಪಚ್ಚೆಯ ಖುರದ, ಮಾಣಿಕ್ಯದ ಸುಕೋಮಲವಾಲ, ಸೌವರ್ಣದ ತನುಚ್ಛಾಯದ ಮಹಾಮೃಗಮಾಗುತೈತಂದ ॥ —(ರಾ.ಕ.ಕು)

ಟಿ॥ ಈ ಪದ್ಯದಲ್ಲಿ ಕವಿಯು ಆ ಜಿಂಕೆಯನ್ನು ರತ್ನಮಯವಾಗಿತ್ತೆಂದು ವರ್ಣಿಸಿದ್ದಾನೆ.

ಅವನು ಬಂದು ತೋರಿಸಿದ ಬೆಡಗು—

ಶ್ಲೋ॥ ಕ್ಷಣಂ ಚ ಧಾವತ್ಯವತಿಷ್ಠತೇಕ್ಷಣಮ್ । ಸಮೀಪಮಾಗತ್ಯ ಪುನರ್ಭಯಾವೃತಃ ॥ ಏವಂ ಸ ಮಾಯಾಮೃಗವೇಷರೂಪಧೃಕ್ಚಚಾರ ಸೀತಾಂ ಪರಿಮೋಹಯನ್ಖಲಃ ॥ —(ಅ.ರಾ.)

ಅ॥ ಒಂದು ಕ್ಷಣ ಓಡುತ್ತದೆ; ಒಂದು ಕ್ಷಣ ನಿಲ್ಲುತ್ತದೆ; ಹತ್ತಿರಕ್ಕೆ ಬಂದು ಮತ್ತೆ ಹೆದರಿಕೊಳ್ಳುತ್ತದೆ; ಹೀಗೆ ಮಾಯಾಮೃಗದ ವೇಷವನ್ನು ಹಾಕಿದ ಆ ಮಾರೀಚನು ಸೀತೆಯನ್ನು ಮೋಹಗೊಳಿಸುತ್ತ ಓಡಾಡಿದನು.

ಆ ಮೃಗವನ್ನು ಸೀತೆಯು ಅಪೇಕ್ಷಿಸಿದ್ದು—

ಕಮಾಚು — ಆದಿತಾಳ

ನೀ ತಂದು ಕೊಡಬಾರದೆ? । ನಾಥನೆ ಇದ ॥ ಪ ॥ ಹೊತ್ತು ಹೋಗದು ಎನಗಿತ್ತರೀ ಮೃಗವನು ॥ ತೃಪ್ತಿಯಿಂದಿರುವೆನು ನಾ । ನಾಥನೆ ಇದ ॥ ೧ ॥ ಸುಂದರವಾಗಿಹುದಿದು ಕಾಣುವ ಮೃಗ ॥ ಕಂದರಂತಾಡುವದು । ನಾಥನೆ ಇದ ॥ ೨ ॥ ಬೇಕೆನಿಸಿಹುದಿದು । ಜೋಕೆಯಿಂ ತಂದರೆ ॥ ಸಾಕುವೆನಾದರದಿ । ನಾಥನೆ ಇದ ॥ ೩ ॥

ಈ ಮಾತನ್ನು ಕೇಳಿದ ಮೇಲಾದದ್ದೇನೆಂದರೆ—

✓ ಕೀ॥ ಮೃಗವಲ್ಲಿದು ರಾಕ್ಷಸನೆನೆ ಲಕ್ಷ್ಮಣ, । ಮೃಗವಾಗದಿರಲ್ಕಾ ಕೊಂದು ॥ ಮೃಗಶಾಬಾಕ್ಷಿಯು ತೃಪ್ತಿಗೊಳಿಪೆನೆಂ। ದಗಲಿದನಾ ರಾಘವನಂದು ॥

**ಅತ್ತ ಮಾರೀಚನು ಹಿಡಿತಕ್ಕೆ ಸಿಕ್ಕದೆ ಓಡಾಡುತ್ತ—**

ಶ್ಲೋ॥ ಆಕೃಷ್ಯ ದೂರಮುಟಜಾದಥ ದರ್ಶಿತಾಶಃ । ಕ್ರವ್ಯಾದ ಏಷ ರಘುನಾಥ ಶರೇಣ ವಿದ್ಧಃ ॥ ಕಾರ್ತಸ್ವರೇಣ ತನುತಾಂ ವಿಜಹೌ ಹತೋಽಸ್ಮೀ। ತ್ಯಾರ್ತಸ್ವರೇಣ ಸಹ ರಾಮನಚೋಽಭಿಧೇನ ॥ —(ರಾ.ಚಂ.)

ಅ॥ ಮಾಂಸಾಶನನಾದ ಆ ಮಾರೀಚನು ಆಶೆಯನ್ನು ತೋರಿಸುತ್ತ ಪರ್ಣಶಾಲೆಯಿಂದ (ರಾಮನನ್ನು) ದೂರಕ್ಕೆ ಸೆಳೆದುಕೊಂಡು ಹೋಗಿ (ಕೊನೆಗೆ) ರಾಮನ ಬಾಣದ ಪೆಟ್ಟಿನಿಂದು ರಾಮನ ಧ್ವನಿಯಂತೆ ಹಾ! ಸತ್ತೆನೆಂದು ಸ್ವರವನ್ನು ಮಾಡಿ ತನ್ನ ಚಿನ್ನದ ರೂಪವಾದ ಜಿಂಕೆಯ ದೇಹವನ್ನು ತೊರೆದನು.

ಶ್ಲೋ॥ ಯನ್ನಾಮಜೋಽಪಿ ಮರಣೇ ಸ್ಮೃತ್ವಾ ತತ್ಸಾರೂಪ್ಯಮಾಪ್ನುಯಾತ್। ಕಿಮುತಾಗ್ರೇ ಹರಿಂ ಪಶ್ಯಂಸ್ತೇನೈವ ನಿಹತೋಽಸುರಃ ॥ —(ಅ.ರಾ)

ಅ॥ ತಿಳಿವಳಿಕೆ ಇಲ್ಲದವನು ಕೂಡ ಮರಣಕಾಲದಲ್ಲಿ ಅವನ ಹೆಸರನ್ನು ಸ್ಮರಿಸಿ ಅವನ ಸಾರೂಪ್ಯವನ್ನು ಪಡೆದನೆಂದ ಮೇಲೆ ಮುಂದೆ ಹರಿಯನ್ನೇ ನೋಡುತ್ತ ಅವನಿಂದಲೇ ಮರಣವನ್ನು ಪಡೆದ ರಾಕ್ಷಸನ ವಿಷಯವನ್ನು ಹೇಳಬೇಕಾದ್ದೇನು?

ಮಾರೀಚನ ದೇಹದಿಂದ ಒಂದು ತೇಜಸ್ಸು ಹೊರಟು ಎಲ್ಲರೂ ನೋಡುವಂತೆ ರಾಮನ ಶರೀರದೊಳಕ್ಕೆ ಪ್ರವೇಶಿಸಿತು. ಇತ್ತ ರಾಮನ ಧ್ವನಿಯಂತೆ ಮಾರೀಚನಾಡಿದ ದೈನ್ಯದ ಮಾತನ್ನು ಕೇಳಿ ಭೀತಿಗೊಂಡ ಸೀತೆಯು ಲಕ್ಷ್ಮಣನಿಗೆ ಹೇಳುತ್ತಾಳೆ—

**ಪೀಲು—ಆದಿತಾಳ**

ಕೂಗದೇನು ಕೇಳಿದೆಯ? । ಈಗಿದೇನು ದುರ್ದೈವವೊ! ॥ ಬೇಗ ಹೋಗಿ ನೋಡು ಪತಿಯ । ಭೋಗಭಾಗ್ಯಹೀನಳು ನಾ ॥ ಪ ॥ ದುರುಳದೈತ್ಯರಿಂದ ಪತಿಯು । ಪರಿಪರಿಯೊಳು ಕಷ್ಟಬಟ್ಟು ॥ ಸೊರಗಿ ನುಡಿದ ಪತಿಯ ಶಬ್ದ । ಕೊರೆಯುತಿಹುದು ನನ್ನ ಕಿವಿಯ ॥ ೧ ॥ ಏನ ಮಾಡಲೀಗ ನಾನು? । ದೀನಳಾದೆ ನೋಡು ನೀನು ॥ ಕಾಣದಿಹೆನು ಮುಂದೆ ನಾನು । ಪ್ರಾಣನಾಥನಡಿಗಳನ್ನು ॥ ೨ ॥ ಏಳು ಏಳು ಬೇಗಮಾಡು । ತಾಳಲಾರೆನೆನ್ನ ನೋಡು ॥ ಕಾಳಾದುದೆನ್ನ ದೃಷ್ಟ । ಕೋಳಾದನೆ ರಘುಶ್ರೇಷ್ಠ? ॥

**ಅದಕ್ಕೆ ಲಕ್ಷ್ಮಣನ ಉತ್ತರ—**

✓ ಸಾ॥ ಅಗ್ರಜನನು ಹೆದರಿಸುವಂಥವನು ನ । ಮಗ್ರಭೂಮಿಯೊಳಗಿಲ್ಲ ॥ ಉಗ್ರರಾಕ್ಷಸರ ಮಾಯೆಯಿದದರಿಂ । ವ್ಯಗ್ರಳಾಗುವುದು ಸಲ್ಲ ॥

**ಅದಕ್ಕೆ ಸೀತೆಯ ಮಾತು—**

✓ ದಿಂ॥ ಅರಿತೆನೀಗಳ್ನಾಂ ನಿನ್ನ ಮರ್ಮವನ್ನು । ಭರತಗೆಂದೇ ನೀಂ ಬಂದೆ ಯೆಂಬುದನ್ನು ॥ ಪರಿಕಿಸುತ್ತೆಂದುಂ ತಕ್ಕ ಸಮಯವನ್ನು । ಭರದೊಳೆನ್ನಂ ಕೊಂಡೊಯ್ಯಲಿರ್ಪುದನ್ನು ॥

ಆಗ ಲಕ್ಷ್ಮಣನ ಮಾತು—

ಶ್ಲೋ॥ ವಾಕ್ಯಮಪ್ರತಿರೂಪಂ ತು ನ ಚಿತ್ರಂ ಸ್ತ್ರೀಷು ಮೈಥಿಲೀ। ಸ್ವಭಾವಸ್ತ್ವೇಷ ನಾರೀಣಾಮೇವಂ ಲೋಕೇಷು ದೃಶ್ಯತೇ ॥ —(ಶ್ರೀ.ರಾ)

ಅ॥ ಹೆ, ಸೀತೆ, (ಹೀಗೆ) ಅನುಚಿತವಾದ ಮಾತನ್ನಾಡುವದು ಹೆಂಗಸರಲ್ಲಿ ಆಶ್ಚರ್ಯವೇನೂ ಅಲ್ಲ. ಇದು ಹೆಂಗಸರ ಸ್ವಭಾವ. ಹೀಗೆಯೇ ಜಗತ್ತಿನಲ್ಲಿ ಕಾಣಬರುತ್ತದೆ.

ಹೀಗೆಂದು ಲಕ್ಷ್ಮಣನು ಎರಡು ಕಿವಿಗಳನ್ನೂ ಮುಚ್ಚಿಕೊಂಡು ರಾಮನ ಹೆಜ್ಜೆಯನ್ನು ಹಿಡಿದು ಹೋದನು. ಇತ್ತ—

ಷ॥ ಬಳಿಕ ಕಾಷಾಯಾಂಬರದ, ಜಲ। ಕಲಿತಹೇಮಕಮಂಡಲದಲಂ। ಗುಳಿಯ ದರ್ಭಾಮುದ್ರಿಕೆಯ, ಕಕ್ಷದ ಮೃಗಾಜಿನದ, ॥ ಲಲಿತಕರಧೃತದಂಡದೂರ್ಧ್ವದ। ತಿಲಕನೊಸಲಿನ ಪಾರ್ಥಕದಿ ಬಳ। ಬಳಲ್ವ ಭಿಕ್ಷುಕವೇಷವನು ತಾಳ್ದನು ದಶಗ್ರೀವ ॥ —(ರಾ.ಕ.ಕು)

ವೇಷದ್ದೇನು ದೊಡ್ಡಮಾತು—

ವ॥ ವೇಷ ಎಲ್ಲಿರದು ಸೂಳೆಯಲ್ಲಿ, ಡೊಂಬನಲ್ಲಿ, ಬಹು ರೂಪಿನಲ್ಲಿ ಇರದೆ? ವೇಷವ ತೋರಿ ಒಡಲ ಹೊರೆವ ದಾಸಿ ವೇಶಿಯ ಮಕ್ಕಳಿಗೆ ನಿಜಭಕ್ತಿ ಎಲ್ಲಿಯದೊ? ಆಚಾರವೇ ಪ್ರಾಣವಾದ ರಾಮೇಶ್ವರಲಿಂಗದಲ್ಲಿ ॥ —(ವೀ.ವ.ಶಾ)

ವೇಷಧಾರಿಗಳನ್ನು ನೋಡಿ ದೊಡ್ಡವರು ವಿಷಾದಗೊಳ್ಳುವದೆಂತೆಂದರೆ—

ವೃ॥ ಉರುಕಾಂತಾರದ ಮಧ್ಯದೊಳ್ಪಸಿಸುವೆಂ, ವಾತಾಶನಂ ನಾನೆಸು। ತ್ತುರಗಂ ಸನ್ಮುನಿಸ್ವೃತ್ತಿಯಿಂ ಮರೆದೊಡಂ ವಕ್ತ್ರಾಂತದೊಳ್ಕ್ಷ್ವೇಳಮಂ ॥ ಎರಡುಂ ಜಿಹ್ವೆಯನ್ನೈದೆ ಜಿಹ್ಮಗತಿಯಂ ತಾಳ್ದಂತೆವೊಲ್ದುರ್ಜನರ್। ನೆರೆ ಸೌಮ್ಯಾಕೃತಿದೋರಿ ವಂಚಿಪರಲಾ! ಶ್ರೀಚೆಲ್ವನಾರಾಯಣ ॥ —(ಶ್ರೀ.ಚೆ.ಶ)

ಟಿ॥ ಕ್ಷ್ವೇಳ—ವಿಷ. ಜಿಹ್ಮಗತಿ—ವಕ್ರವಾದ ನಡೆ.

ರಾವಣನು ಶಿವಸ್ಮರಣೆಯನ್ನು ಮಾಡುತ್ತ ಸೀತೆಯ ಪರ್ಣಶಾಲೆಗೆ ಬರುತ್ತಾನೆ—

ಮುಖಾರಿ—ಏಕತಾಳ

ಗಿರಿಶಾ, ಗೌರೀಪ್ರಾಣಾಧೀಶ, ಜಯಜಯ ದುರಿತವಿನಾಶ ಮಹೇಶ ॥ಪ॥ ದಕ್ಷಯಜ್ಞವಿಧ್ವಂಸಕಾರಿ, ಸುರಪಕ್ಷಪಾತಿ, ಕಾಮಾರಿ, ದುಃಖಹರ,। ಘೋರಪಾಪಸಂದೋಹನಾಶನ,। ಭೂರಿದಯಾಳೊ, ಭೋಗಿಭೂಷಣ,। ಈಶ, ಗಿರೀಶ, ಧನೇಶ್ವರಮಿತ್ರ,। ಕಾಶೀಶ್ವರ, ಸುರಸನ್ನುತಿಪಾತ್ರ,। ವಾಸವಾದಿನುತ, ದುಷ್ಟಭಯಂಕರ। ವೇಷ, ಜಟಾಧರ, ಚಂದ್ರಶೇಖರ,। ಕಲಭಪೌಢಮಹಾನಾಟ್ಯೇಶ್ವರ,। ಅವಿಮುಕ್ತೇಶ್ವರ, ಪ್ರಮಥಗಣೇಶ್ವರ,। ಕಾಳಿಂದೀಪ್ರಿಯ, ಕಮಲನಯನಸಖ,। ಕಾಲಕಾಲ, ಕಾಲಾಗ್ನಿ ಪಂಚಮುಖ,। ನೀಲಕಂಠ, ನಿಖಿಲಾಮರರಕ್ಷಕ,। ಫಾಲಚಂದ್ರ, ಸಂಸೃತಿವಿಷಭಕ್ಷಕ,। ಶಾಂತಮೂರ್ತಿ, ವರಶಾಂತಿಗುಣ

ಪ್ರಿಯ, । ಶಾಂತಿದಾಯಕಾ, ಶಾಂತಸಂಶಯ, । ಕುಂಭಜಾತಸುತನಟನವಿಲಾಸ, । ಶಂಭು, ಹರ, ಚಿದಾಕಾಶನಿವಾಸ ॥ —(ಭಕ್ತಿ.ಗೀ.)

ಕೀ॥ ಬಂದ ಯತಿಗೆ ವಂದಿಸಿ ಸತ್ಕರಿಸುತ । ಕುಂದರದನೆ ಕುಳ್ಳಿರಿಸಿರಲು ॥ ಅಂದಿನಖಿಲವೃತ್ತಾಂತವ ಕೇಳ್ದನು । ಮಂದಹಾಸತೋರಲು ಮಿಗಿಲು ॥

ಈ ಪ್ರಕಾರ ಮಾತನಾಡಿಸುತ್ತ ಆಕೆಯನ್ನು ಚೆನ್ನಾಗಿ ನೋಡಿ ಪರಿಚಯವನ್ನು ಮಾಡಿಕೊಳ್ಳುತ್ತಲಿ—

ಷ॥ ಅಡಗಿತಾಕ್ಷಣ ದಂಡ, ಮೆಲ್ಲನೆ । ಸಡಿಲಹೊಂದಿತು ಕರಕಮಂಡಲ, । ಮಿಡುಕಿಸಿಂದುದು ಬೆರಳ ನಾಮಸ್ಮರಣೆಗಳು ಹರನ,॥ ಸಿಡಿದು ಜಾರಿತು ಜಡೆಯ ಜಾಡ್ಯದ । ತೊಡರು ಹರಿದು, ವಯೋವಿಲಾಸದ ಜಡೆಯ ತಾಪಸಿಯಾಗೆ ಮನದಲಿ ಬೆದರಿದಳು ಸೀತೆ:॥ —(ತೊ.ರಾ)

ಟಿ॥ ವಯೋವಿಲಾಸದ ಜಡೆಯ ತಾಪಸಿ—ಯೌವನಸ್ಥನಾಗಿ ಕೇಶವಿಶೇಷದಿಂದ ಶೋಭಿತನಾದ ತಪಸ್ವಿ.

ಒಡನೆ ಸೀತೆಗೆ ಸಂಶಯವಾಗಿದೆ. ಏಕೆಂದರೆ—

ಶ್ಲೋ॥ ಯಸ್ತು ದ್ವಿಜೇಶ್ವರಃ ಕುಟಿಲೋ ಮಸ್ತ್ವಪೂರ್ಣ ಏವ ಸಃ । ಯಸ್ತು ಪೂರ್ಣತ್ವಮಾಪನ್ನಃ ಸ ಸದ್ವೃತ್ತೋ ಪಿ ದೃಶ್ಯತೇ ॥ —(ಸು.ಲಾ)

ಅ॥ (೧) (ದ್ವಿಜೇಶ್ವರಃ) ಚಂದ್ರನು ವಕ್ರನಾದರೆ ಅವನು ಅಪೂರ್ಣನೆ. ಅವನು ಪೂರ್ಣತ್ವವನ್ನು ಪಡೆದರೆ (ಸದ್ವೃತ್ತಃ) ಒಳ್ಳೆ ವೃತ್ತಾಕಾರನಾಗಿಯೇ ಕಾಣುತ್ತಾನೆ. (ಇದರಂತೆ ಇಲ್ಲಿ ಗ್ರಹಿಸಬೇಕಾದರ್ಥವೇನೆಂದರೆ) (೨) ಯಾವ (ದ್ವಿಜೇಶ್ವರಃ) ಬ್ರಾಹ್ಮಣನಾದರೂ ಕುಟಿಲನಾಗಿ ಕಂಡರೆ ಅವನು ಅಪೂರ್ಣನೆ. ಯಾವನಾದರೂ ಪೂರ್ಣತ್ವವನ್ನು ಪಡೆದಿದ್ದರೆ ಅವನು (ಸದ್ವೃತ್ತಃ) ಒಳ್ಳೇ ಆಚರಣೆಯವನಾಗಿಯೇ ಕಾಣುತ್ತಾನೆ.

ರಾವಣನು ತನ್ನ ಕುಟಿಲತೆಯನ್ನು ವ್ಯಕ್ತಗೊಳಿಸಿ ಸೀತೆಯನ್ನು ಬೇಡುತ್ತಾನೆ—

ಕೇತಾರಗೌಳ—ರೂಪಕ

ಅತಿಥಿಯಾಗಿ ಬಂದ ಎನ್ನ । ಹಿತವ ಮಾಡು ಮೋಹನೆ ॥ ಪ ॥ ರತಿಯ ಜರಿವ ರೂಪ ಕೇಳಿ । ಧೃತಿಯ ಗಟ್ಟು ಬಂದೆನೆ ॥ ಅ.ಪ ॥ ವನದಿ ಗೆಡ್ಡೆ ಗೆಣಸುಗಳ । ತಿನುವ ಕಷ್ಟವೇತಕೆ? ॥ ವನಜನಯನೆ ರಾಮನ ಬಿಡು । ಎನಗೆ ಸೇರು ಸೌಖ್ಯಕೆ ॥ ೧ ॥ ಮೂರುಲೋಕದರಸ ನಾನು । ಧೀರನಾದ ರಾವಣನು ॥ ವಾರಿನಿಧಿಯ ನಡುವೆ ಇರುವೆನು । ವಾರಿಜಾನನೆ ॥ ೨ ॥ ಮದನನೆನ್ನ ಬಾಧಿಸುವನು । ಪದುಮನೇತ್ರೆಯೆ ॥ ಬೆದರದೆನ್ನ ರಾಣಿಯಾಗು । ಚದುರತನದಲಿ ॥ ೩ ॥

ಈ ಮಾತನ್ನು ಕೇಳುತ್ತಲೆ ಸೀತೆ ಸಂಕಟಪಡುತ್ತಾಳೆ—

ಕಂ॥ ಉರಿಯೊಳ್ಗಾಕಿಸಿದ ಸರಳಿನ । ತೆರದಿಂದಂ ಕರ್ಣಯುಗವನಿರಿಯುತ್ತಿರ್ಪೀ ॥ ಪರುಷೋಕ್ತಿಯ ಕೇಳಿಯುಮಿಾ । ಹರಣಂ ಪೋಗಿಲ್ಲಮಕಟ! ಕಠಿನಮದೆಂತೋ? ॥ —(ರಾ.ನಾ)

ಕಂ॥ಕುಡಿವೆನೊ ಹಾಲಾಹಲಮಂ,। ಪಡುವೆನೊ ಕಾಳ್ಗಿಚ್ಚಿನಲ್ಲಿ, ಗೋದಾವರಿಯಾ ॥ ಮಡುವಂ ಪುಗುವೆನೊ, ಘತ,। ಪತ! ಬಿಡಲೀಗೆಯ್ದುವೆನೊ ಕಾಣೆ ನೀ ಬೆಂದೊಡಲಂ ॥ —(ಸೀ.ಸು.ನಾ)

ಆಗ ಅವಳು ರಾವಣನಿಗೆ ಹೇಳಿದ್ದು—

ಸಾ॥ಎಲೆ ರಾವಣ, ನಿನ್ನಯ ದುರ್ವೃತ್ತಿಗೆ। ಫಲವನು ಪಡೆಯುವೆ ನಿಲ್ಲು ॥ ಕೊಲದೆ ಬಿಡನು ಪತಿ ಬಂದೊಡನೀ ಕ್ಷಣ। ನಿಲುವದು ನಿನ್ನಯ ನೊಲ್ಲು ॥

ಇಷ್ಟೆನ್ನುವದರಲ್ಲಿ ರಾವಣನು—

ಶ್ಲೋ॥ ತತೋ ವಿದಾರ್ಯ ಧರಣೀಂ ನಖೈರುದ್ಧೃತ್ಯ ಬಾಹುಭಿಃ । ತೋಲಯಿತ್ವಾ ರಥೇ ಕ್ಷಿಪ್ತ್ವಾ ಯಯೌ ಕ್ಷಿಪ್ರಂ ವಿಹಾಯಸಾ ॥ —(ಅ.ರಾ)

ಅ॥ ಆಮೇಲೆ ಉಗುರುನಿಂದ ಭೂಮಿಯನ್ನು ತೋಡಿ ಬಾಹುಗಳಿಂದ ಎತ್ತಿ ತೂಗುತ್ತ ರಥದಲ್ಲಿಟ್ಟು ಆಕಾಶಮಾರ್ಗದಿಂದ ಬೇಗ ಹೊರಟನು.—

ಆಗ ಸೀತೆ ದುಃಖಿಸುತ್ತಾಳೆ—

ಆನಂದಭೈರವಿ—ಅಟತಾಳ

ದಿಕ್ಕುತೋರದಾದೆನೆ! ಕಕ್ಕುಲತೆಯೊಳು ॥ ಸಿಕ್ಕಿದೆನೇ ರಾಕ್ಷಸನಿಗೆ! ದಕ್ಕಿಪೋಪೆನೆ? ॥ ಪ ॥ ಎಲ್ಲಿಬಂತು ಹಾಳುಜಿಂಕೆ! ಎಲ್ಲಿಬಂತು ಆದರಬಯಕೆ ॥ ವಲ್ಲಭನನು ಕಳುಹಲದಕೆ। ಇಲ್ಲಿ ಸಿಕ್ಕಿಬಿದ್ದೆನಿದಕೆ ॥ ೧ ॥ ಆಡಬಾರದುದನೆ ಆಡಿ। ಖೋಡಿಯಾದೆ ಲಕ್ಷ್ಮಣನಿಗೆ ॥ ಬೇಡಬಾರದುದನು ಬೇಡಿ। ಮೂಢಳಾದೆ ಗತಿಯೇನೆನಗೆ ॥ ೨ ॥ ಹಾ! ಮಮಪ್ರಾಣನಾಥ! ಹಾ! ಲಕ್ಷ್ಮಣ ಮೈದುನನೆ॥ ಭೀಮವಿಕ್ರಮರನಗಲಿ। ಈ ಮಾಯೆಗೆ ಸಿಲುಕಿದೆನೆ? ॥ ೩ ॥

ಷ॥ ಗಿರಿಗಳಿರ, ನಿಮ್ಮಂತೆ ಭೂಭೃ। ದ್ಧರನು; ಮೃಗತತಿಗಳಿರ, ನಿಮ್ಮೊಲು। ಸರಸಕಾಂತಾರಹಿತ; ನಿಮ್ಮಂದದಲಿ ಕುಜಗಳಿರ ॥ ನಿರುತಸುಮನೋರಮ್ಯ; ದಾನೋ। ತ್ಕರನು ನಿನ್ನೋಪಾದಿಯಲಿ ಘನ। ಕರಿಗಳಿರ, ರಘುವರನು ಬಂದರೆ ಪೇಳಿರೆನ್ನಳಲ ॥ —(ರಾ.ಕ.ಕು)

ಟಿ॥ ಭೂಭೃದ್ಧರನು—ಗಿರಿಗಳು ಭೂಮಿಯನ್ನು ಹೊರುತ್ತಿರುವವು; ರಾಮನು ರಾಜ್ಯಭಾರವನ್ನು ವಹಿಸಿರುವನು. ಸರಸಕಾಂತಾರಹಿತ—ಮೃಗಗಳು ಸರಸವಾದ ಕಾಂತಾರದಲ್ಲಿ ಹಿತವುಳ್ಳವುಗಳು; ರಾಮನು ಸರಸಳಾದ ಹೆಂಡತಿಯಿಂದ ಅಗಲಿದವನು. ಸುಮನೋರಮ್ಯ—ಮರಗಳು ಹೂವಿನಿಂದ ಮನೋಹರವಾಗಿರುವವು; ರಾಮನು ದೇವತೆಗಳಿಗೆ ಅಥವಾ ವಿದ್ವಾಂಸರಿಗೆ ಮನೋಹರನು. ದಾನೋತ್ಕರನು—ಆನೆಗಳು ಹೆಚ್ಚು ಮದೋದಕವುಳ್ಳವುಗಳು; ರಾಮನು ಹೆಚ್ಚು ದಾನವನ್ನು ಮಾಡುವವನು.

ಆ ಸೀತೆಯ ಧ್ವನಿಯನ್ನು ಕೇಳಿ ಜಟಾಯು—

ಚೌ॥ ಯಾರೆೊ ನೀಂ ಜಗದಂಬಿಕೆಯ ನಸು—ರಾರಿಪತ್ನಿಯನೊಯ್ಯುವೆ । ಯಾರೆೊ ನೀಂ ಪರಮರ್ಷಿಜನಕನ—ಸುತೆಯ ಕಳವನು ಗೆಯ್ಯುವೆ ॥ ಯಾರೊ

ಸೀನೀಗೆನ್ನ ಮಾತೆಯನಪಹರಿಸಿಕೊಂಡೋಡುವೆ । ಯಾರೊ ಹೇಳೆಲೊ ರಣದಿ ನಿನ್ನನು ಭೂತಗಳಿಗೀಡಾಡುವೆ ॥

ಅವರಿಬ್ಬರಿಗೂ ಸ್ವಲ್ಪ ಯುದ್ಧವು ನಡೆದ ಮೇಲೆ—

ಶ್ಲೋ॥ ರಾಕ್ಷಸಾಸಿಕ್ಷತಃ ಕ್ಷಿಪ್ರಂ ಪಪಾತ ಪತತಾಂ ವರಃ । ಮೈಥಿಲೀಪಕ್ಷಪಾತೇನ ಪಕ್ಷಪಾತಮವಾಪ್ಯ ಸಃ ॥ —(ರಾ.ಚಂ)

ಅ॥ ಪಕ್ಷಿಶ್ರೇಷ್ಠನಾದ ಆ ಜಟಾಯು ರಾಕ್ಷಸನ ಕತ್ತಿಯ ಪೆಟ್ಟಿನಿಂದ ಶೀಘ್ರದಲ್ಲಿಯೇ ಸೀತೆಯ ಮೇಲಿನ (ಪಕ್ಷಪಾತ) ಅಭಿಮಾನವಿಶೇಷದಿಂದ (ಪಕ್ಷಪಾತ) ರೆಕ್ಕೆಗಳನ್ನು ಕಳೆದುಕೊಂಡು ಬಿದ್ದನು.

ಅದನ್ನು ಕವಿ ವರ್ಣಿಸಿರುವದೆಂತೆಂದರೆ—

ಷ॥ ಕೆಳಗೆ ಬಿದ್ದವು ಪಕ್ಕವೆರಡುಸ । ಕಳಚಿದದ್ರಿಯ ಪಕ್ಕದಂತಿರೆ । ಒಳಲಿದನು ಬಂಬಾಳಿಸಿದ ಬಾಸರದ ರಕ್ತದಲಿ ॥ ಜಲರುಹಾಕ್ಷ, ಜನಾರ್ದನ, ಶ್ರೀ । ನಿಲಯ, ನೀನೇ ಗತಿಯೆನುತ ಕಳ । ವಳಿಸಿ ಬಿದ್ದನು ಮಥನದಗ್ರದ ಪೃಥುಲಗಿರಿಯಂತೆ ॥ —(ತೊ.ರಾ)

ಟಿ॥ ಬಂಬಾಳಿಸಿದ—ಹೊಳೆಯುವಂಥ. ಬಾಸರದ—ಹರಿಯುತ್ತಿರುವ.

ಜಟಾಯುವಿನ ಈ ನಡೆವಳಿಕೆಯು ಪೀಠಿಕೆಯಲ್ಲಿರುವ “ಸಖನು ತ್ರಸ್ತವಸಾದಕಾರಣ” ಎಂದು ಮೊದಲಾಗಿರುವ ನುಡಿಗೆ ಉದಾಹರಣೆ. ಆ ಸ್ಥಿತಿಯ ಜಟಾಯುವನ್ನು ಕಂಡು ಸೀತೆಯ ಮಾತು—

✓ ದಿಂ॥ ನೋಡುತದನಾಗಾ ಸೀತೆ ದುಃಖವೇರೆ । ಕೋಡಿಯಿಡೆ ಕಣ್ಣೀರ್ ಪೇಳ್ದಳಾಗ ಧೀರೆ ॥ ನೋಡಿದುದ ಪೇಳ್ವಾ ರಾಮಚಂದ್ರಗಿನ್ನು । ಪಾಡುತವಸಂ ನೀಂ ಪೊಂದು ಮುಕ್ತಿಯನ್ನು ॥

ಎಂದು ಹೇಳಿ ಹೋಗುತ್ತ—

✓ ಕೀ॥ ಮುಂದೆ ಋಷ್ಯಮೂಕದಿ ಕಾಣುತ ಕಪಿ । ವೃಂದವ ತನ್ನಾಭರಣಗಳ ॥ ಬಂಧಿಸಿ ಶೆರಗಿನೊಳೊಗೆದಳು ನೆನೆಯುತ । ಚಂದದಿ ರಾಮನ ಚರಣಗಳ ॥

ಕೊನೆಗೇನಾಯಿತೆಂದರೆ—

✓ ಕೀ॥ ಸೇರಿ ಲಂಕೆಯನಶೋಕವನದೊಳಾ । ನಾರಿಯನಿಟ್ಟಿಂದನು ಖಳನು ॥ ಸೇರದಿರಲು ವರ್ಷದೊಳೆನ್ನೊಡನಾ । ಹಾರವಪ್ಪೆ; ತಿಳಿದಿಹುದಿದನು ॥

ಇಷ್ಟಾಗುವದರಲ್ಲಿ—

ಷ॥ ಪುರವ ಹೊಗಲಾಕ್ಷಣದಿನಿಳೆ ಬಾ । ಯ್ದೆರೆದು ವರಲಿ, ಶಿಲಾಪ್ರತಿಮೆ ಬೊ । ಬ್ಬಿರಿದುದಂಬರ ಕಾರಿತರುಣೋದಕದ ಧಾರೆಗಳ; ॥ ಮುರಿದು ಬಿದ್ದವು ಸೌಧ; ಬೀಸಿತು ಬಿರುಬಿಸಲಿ ಬಿರುಗಾಳಿ; ಬಾಗಿಲ । ಲೊರಲಿದವು ಸರಿಹದ್ದುಕಾಗೆಗಳಾ ಮಹಾಪುರದ ॥ —(ತೊ.ರಾ)

ಇತ್ತ ಮಾರೀಚನನ್ನು ಕೊಂದ ರಾಮನು ಹಿಂದಿರುಗಿಬರುತ್ತ—

ದಿ॥ ದಾರಿಯೊಳ್ರಾಮಂ ತಮ್ಮನಸ್ನು ಕಂಡು । ಗಾರುಗೆಟ್ಟಂ ಭೀತಿಯನು ತಂದುಕೊಂಡು ॥ ಸಾರಿ ಕೇಳ್ದಾ ಕಾರಣವನೆಲ್ಲವಾಗ । ನಾರಿಯಂ ನೋಡಲ್ ಭರದಿ ಬಂದ ಬೇಗ ॥

ಬಂದು ನೋಡುತ್ತಲೆ ಸೀತೆಯಿಲ್ಲದಿರುವದನ್ನು ಕಂಡು ರಾಮನು—

ಷ॥ ಎಲೆ ಸುಮಿತ್ರಾಸೂನು, ಸೀತೆಯು । ಸುಳಿವು ಸಿಲುಕುದೊಳಿಲ್ಲದಿದೆ; ಕಂ। ಬೆಳಕು ಕಾಣಿಸದಿದೆ ಮದೀಯಮಿಶಾಲಭವನದಲಿ; ॥ ಲಲಿತದರಹಸಿತಾ ನನಾಬ್ಜಾಕಲಿತನಾಸಾಶ್ವಾಸಪರಿಮಳ । ಸುಳಿಯದಿದೆ; ಸೀತೆಯನು ತೋರೈ ತಮ್ಮ ತನಗೆಂದ ॥ —(ತೊ.ರಾ)

ಆಗ ಲಕ್ಷ್ಮಣನು ತಲೆಯನ್ನು ಬಗ್ಗಿಸಿಕೊಳ್ಳಲು ರಾಮನು ತನ್ನ ವ್ಯಥೆಯನ್ನು ಪ್ರಕಾಶ ಪಡಿಸುತ್ತಾನೆ—

ಶ್ಲೋ॥ ಇಯಂ ಗೇಹೇ ಲಕ್ಷ್ಮೀರಿಯಮಮೃತವರ್ತಿರ್ನಯನಯೋಃ । ರಸಾವಸ್ಯಾಃ ಸ್ಪರ್ಶೋ ವಪುಷಿ ಬಹುಲಶ್ಚಂದನರಸಃ ॥ ಅಯಂ ಬಾಹುಃ ಕಣ್ಠೇ ಶಿಶಿರಮಸೃಣೋ ಮೌಕ್ತಿಕಸರಃ । ಕಿಮಸ್ಯಾ ನ ಪ್ರೇಯೋ ಯದಿ ಪರಮಸಹ್ಯಸ್ತು ವಿರಹಃ ॥ —(ಉ.ರಾ)

ಅ॥ ಈ ಸೀತೆಯು ಮನೆಯಲ್ಲಿ ಲಕ್ಷ್ಮಿಯು; ಇವಳು ಕಣ್ಣಿಗೆ ಅಮೃತದ ಬತ್ತಿಯಂತೆ ಇರುವಳು; ಜಗತ್ತಿನಲ್ಲಿ ಇವಳ ಸ್ಪರ್ಶವು ಒಳ್ಳೆ ಚಂದನರಸದಂತೆ ಇರುವದು; ಕಂಠದ ಮೇಲೆ ಬೀಳುವ ಈ ಬಾಹು ಗಂಧದಂತೆ ಮೃದುವಾದ ಮುತ್ತಿನ ಸರವು. ಇವಳದು ಯಾವದು ತಾನೆ ಹಿತ ವಲ್ಲ? ಆದರೆ ಇವಳ ವಿರಹವು ಮಾತ್ರ ಸಹನವಾಗುವದಿಲ್ಲ.

ಎಂದು ದುಃಖಿಸುತ್ತಾನೆ—

ಕಮಾಚು—ಅಟತಾಳ

ಎಂತು ನಾ ಸೈರಿಸಲಿ । ಈ ತಾಪವ ॥ ಪ ॥ ಮನೆಗೆ ಬಂದೊಡನೆಯೆ । ಇಸಿ ವಾತಿಸಿಂದೆನ್ನ ॥ ಮನಕೆ ಸಂತಸವೀವ । ವನಿತೆಯುನಗಲುತ ॥ ೧ ॥ ಊರುಕೇರಿಯ ಬಿಟ್ಟು । ಭೂರಿಪ್ರೇಮದೊಳೆನ್ನ ॥ ಸೇರಿಕೊಂಡಿದ್ದಂಥ । ನಾರಿಯು ನಗಲುತ ॥ ೨ ॥ ಎನ್ನ ಬಿಟ್ಟಗಲದೆ । ಎನ್ನ ಹಿತಕ್ಕಾಗಿ ॥ ತನ್ನ ದೇಹವೆಂದೆಂಬ । ಮಾನ್ಯೆಯು ನಗಲುತ ॥ ೩ ॥

ಎಂದು ಬುದ್ಧಿಭ್ರಮಣೆಯನ್ನು ಹೊಂದಿದವನಾಗಿ ದುಃಖಿಸುವ ರಾಮನಿಗೆ ಲಕ್ಷ್ಮಣನೊಡನೆ ಆ ರಾತ್ರೆ ಸಂಭಾಷಣೆ ನಡೆದದ್ದೇನೆಂದರೆ—

ಶ್ಲೋ॥ (ರಾ) ಸೌಮಿತ್ರೇ, ನನು ಸೇವ್ಯತಾಂ ತರುತಲಂ ಚಣ್ಡಾಂಶುರುಜ್ಜೃಮ್ಭತೇ । (ಲ) ಚಣ್ಡಾಂಶೋರ್ನಿಶಿ ಕಾ ಕಥಾ ರಘುಪತೇ? ಚನ್ದ್ರೋಯಮುನ್ಮೀಲತಿ ॥ (ರಾ) ವತ್ಸೈತದ್ವಿದಿತಂ ಕಥಂ ನು ಭವತಾ? (ಲ) ಧತ್ತೇ ಕುರಙ್ಗಂ ಯತಃ । (ರಾ) ಕ್ವಾಸಿ ಪ್ರೇಯಸಿ, ಹಾ! ಕುರಙ್ಗನಯನೇ ಚನ್ದ್ರಾನನೇ ಜಾನಕೀ ॥ —(ಪ್ರ.ರಾ)

ಅ॥ (ರಾ) ಲಕ್ಷ್ಮಣನೇ ಸೂರ್ಯನು ಬಿರುಸಾಗಿದ್ದಾನೆ; ಮರದ ಕೆಳಕ್ಕೆ ಹೋಗೋಣ. (ಲ) ಅಣ್ಣಾ, ರಾತ್ರಿಯ ಹೊತ್ತಿನಲ್ಲಿ ಸೂರ್ಯನ ಮಾತೆಲ್ಲಿಯದು? ಚಂದ್ರನು ಹುಟ್ಟಿದ್ದಾನೆ. (ರಾ) ತಮ್ಮ, ಇದು ನಿನಗೆ ಹೇಗೆ ತಿಳಿಯಿತು? (ಲ) ಏಕೆಂದರೆ— ಜಿಂಕೆ ಇರುವುದರಿಂದ. (ರಾ) ಹಾ! ಜಿಂಕೆಯಂತೆ ಕಣ್ಣುಳ್ಳ ಸೀತೆಯೇ, ಚಂದ್ರವದನೆ, ಎಲ್ಲಿದ್ದಿ?

ಜಗತ್ತಿನಲ್ಲಿ ಇಂಥ ಸಂತಾಪಕರಗಳು ಯಾವವೆಂದರೆ—

ಶ್ಲೋ॥ ಪ್ರಿಯಪತ್ನಿ ಪುಗಲ್ಕೆಯುಂ ಮಾ।ರಯೆ ಸಜ್ಜನರಿಂದೆ ನಿಂದೆಯುಂ, ರಿಣದುಳಿವುಂ, ॥ ನಯರಹಿತದುರ್ಜನರ ಸೇ। ವೆಯುಮಿಳೆಯೊಳಗಗ್ನಿಯಿಲ್ಲದೊಡಲಂ ಸುಡುಗುಂ ॥ —(ನ.ಶ)

ಆಗ ಲಕ್ಷ್ಮಣನು ಹೇಳುತ್ತಾನೆ—

ಷ॥ ಆದೊಡಲೆ ರಘುನಾಥ, ಚಿತ್ತೈ। ಸಾವಿಲಕ್ಷ್ಮಿಯ ಸವಸಿತನುಜೆಯ। ನೀ ದಿವಿಜಮಾನವಭುಜಂಗಮುಭುವನಮೂರರಲಿ ॥ ಸಾಧಿಸುವೆನಿಲ್ಲದಿರೆ ಪಥಿ ಮೊದ। ಲಾದ ದೇವರ ಹಿಂಡ ಹಿಳಿವೆನು। ಕೈದುವಿದು ತಾಸಿದ್ದು ಫಲವೇನೆಂದು ಗರ್ಜಿಸಿದ ॥ —(ತೊ.ರಾ)

ಆಮೇಲೆ ಅವರಿಬ್ಬರೂ ಸೀತೆಯನ್ನು ಹುಡುಕುವದಕ್ಕೆ ಹೊರಟು—

✓ ರ॥ ಹುಡುಕಿದರವರಾಗಾ ಸೀತೆಯನು। ಲೋಕದ ಮಾತೆಯನು ॥ ಪ ॥ ಮರಗಿಡಬಳ್ಳಿಗಳೊಳು ನುಂದರಿಯುತ। ಸರಸಿಜಾಕ್ಷಿ ಸೀತೆಯ ನೆರೆ ಕರೆಯುತ। ಮುನಿಮುನಿವರರಾಶ್ರಮಗಳ ನೋಡಿ। ವನಜಾಕ್ಷಿಯ ಕಾಣದೆ ಬಲುಬಾಡಿ। ಕೆರೆತೊರೆಗಳ ದಡಗಳೊಳರಸುತ್ತ। ತರುಮೃಗಸಂಕುಲಗಳ ಕೇಳುತ್ತ। ವನಜವೆ ಕಂಡಿರೆ ವನಜಾನನೆಯ। ಎನಗೆ ಜೀವಳಾಗಿಹ ಮಾನಿನಿಯ। ಕೋಕವೆ ಕಂಡಿರೆ ಕೋಕಸ್ತನಿಯ। ಶೋಕವಡಗೆ ಸೌಂದರ್ಯದ ಗಣಿಯ। ಹರಿಣವೆ ಕಂಡಿರ ಹರಿಣಾಕ್ಷಿಯನು। ಮರೆಮಾಚದೆ ಪೇಳಿರಿ ಸೀವದನು। ಅಳಿಗಳೆ ಕಂಡಿರ ಅಳಿಕುಂತಲೆಯ। ಗಿಳಿಗಳೆ ಕೇಳ್ವಿರ ಸೀತೆಯ ಧ್ವನಿಯ। ಎಂದು ವಿಧವಿಧದಿ ಹಂಬಲಿಸುತ್ತ। ಬಂದರರಣ್ಯದೊಳಗೆ ಹುಡುಕುತ್ತ ॥

ಹೀಗೆ ಮುಂದೆ ಬರುತ್ತಿರುವಾಗ ಜಟಾಯು ಕಾಣಬಂದದ್ದು ಹೇಗೆಂದರೆ—

ಷ॥ ಅರೆಮುಗಿದ ಲೋಚನದ, ಒಳಲುವ। ಕೊರಳ, ಬಿರಿದೆರಕೆಗಳ, ನಭಕು। ಪ್ಪರಿಸಿದಂಘ್ರಿಯ, ಸಿಶಿತಖಡ್ಗವಿಘಾತವೇದನೆಯ ॥ ಸರಳಿಕೆಯ, ರಘುರಾಮನಾಮ। ಸ್ಮರಣೆಯರುಣಕುಮಾರಕನ ಬಳಿ। ಕರಸ ಕಂಡನು ನೆನೆದು ಕೊಂಡನು ಪೂರ್ವದರುಶನವ ॥ —(ತೊ.ರಾ)

✓ ಕೀ॥ ಪಸಿದೇನೆನುತ ಕೇಳಲು ರಾಮನು। ದೀನನಾಗಿ ಪೇಳಿದನವನು ॥ ಕ್ಷೋಣಿಜಾತೆಯನು ಕಳವಿಂದೊಯ್ದಾ। ದಾನವೇಂದ್ರನಿಂದಾದುದನು ॥

✓ಸಾ॥ ಎನ್ನ ಹಿತಕೆ ತಾ ಪ್ರಾಣವ ಕೊಟ್ಟನ। ನೆನ್ನುತ ಕನಿಕರದಿಂದ ॥ ಮನ್ನಣೆಯಿಂದಲಿ ಮುಟ್ಟಲು ರಘುಪತಿ! ಇನ್ನವಗಾಯ್ತಾನಂದ ॥

✓ ದಿಂ॥ ಪ್ರಾಣಹೋಗಲಾಕ್ಕ ಜಟಾಯುವಿಗೆ ಬೇಗ। ಮಾಣದಿತ್ತಂ ತರ್ಪಣವ ರಾಮನಾಗ ॥ ಕ್ಷೋಣಿಯೊಳಗಂದಾ ಪಕ್ಷಿಜೀವವಲ್ಲಿ । ಕಾಣಬಂತಾಗಳ್ ವಿಷ್ಣುರೂಪವಲ್ಲಿ ?

**ಮರಣಕಾಲದಲ್ಲಿ ಶ್ರೀರಾಮನ ದರ್ಶನಸ್ಪರ್ಶನಗಳಿಂದ ಸಾರೂಪ್ಯಮುಕ್ತಿಯನ್ನು ಪಡೆದ ಜಟಾಯು ಸ್ತೋತ್ರಮಾಡುತ್ತಾನೆ—**

✓ ಚೂ॥ ಸಕಲಕಲ್ಯಾಣಗುಣಸಾಗರ, ನಿಖಿಲಕುಮತಿಕಲ್ಪನಾದೂರ, ಪ್ರಕಟಿತವಿವಿಧಾಕಾರ, ಸಕಲನಿಗಮಾಗಮಸಾರ, ಮುಖರಿತಬ್ರಹ್ಮತತ್ತ್ವವಿಚಾರ, ಅಕುಟಿಲಾಂತಃಕರಣವಿವಿಧಾವತಾರ, ಕೃಪಾಪೂರ, ಅಪಾರ, ರೂಪಿಸಲಿ ಮಾರ, ಉಪನಿಷದ್ವಿಹಾರ, ಧೀರ । ಭವವಿಪಿನದಾವಾಗ್ನಿನಾಮಧೇಯ, ಅವಿರತವೂ ಸುರಮುನೀಂದ್ರಗೇಯ, ಭುವಿಯೊಳಗೆಲ್ಲ ನೀನೆ ಮಾನನೀಯ, ರವಿಶತಕೋಟಿತೇಜಕಾಯ, ದಿವಿಜದಾನವಸಂಕುಲಾಜೇಯ, ನಿನಗೆ ಶರಣೈದಿಹವು ಚತುರೋಪಾಯ, ನಿನ್ನ ದರ್ಶನದಿಂದ ಹಿಮ್ಮೆಟ್ಟುವದು ಮಾಯ, ನಿನ್ನೊಲುಮೆಯೇ ಎನಗೆ ಸಹಾಯ, ರಘುರಾಯ, ಜೀಯ । ಗಿರಿಶಗಿರಿಸುತಾಮನೋನಿವಾಸ, ಗಿರಿವರಧಾರಣಾದಿಮಹಾವಿಲಾಸ, ಸುರವರಮುಖಸಕಲದಿವಿಜಪೋಷ, ಪರಿಹೃತಾಖಿಲಶರಣದೋಷ, ಶರಣೆಂದೊಡನೆ ನಿನಗಾಗುವದು ತೋಷ, ದುರುಳರನು ಕಂಡೊಡನೆ ರೋಷ, ಮರೆಹೊಕ್ಕೆ ಮಾಯಾವೇಷ, ಕರುಣದಿಂ ಪೊರೆ ಕೃಪಾಭೂಷ, ಚಿದ್ವಿಶೇಷ ॥

**ಹೀಗೆ ಜಟಾಯು ಮುಕ್ತನಾದದ್ದನ್ನು ಲಕ್ಷ್ಯದಲ್ಲಿಟ್ಟುಕೊಂಡೇ ''ವ್ಯೈತ್ರಿಯಭಿಮಾನವನು ತೋರಿಸು'' ಎಂದು ಮುಂತಾಗಿ ಪೀಠಿಕೆಯು ಉಪದೇಶಿಸಿರುವದು.**

## ಭಜನಾವಲಿ

(೧)ಹೆ ರಘುನನ್ದನ, ರಾಕ್ಷಸಖಣ್ಡನ, ರಾಮ, ದಯಾಘನ, ಪಾಲಯ ಮಾಮ್ ।
ಹೆ ರಘುನನ್ದನ, ರಾವಣಮರ್ದನ, ರಾಮ, ಜನಾರ್ದನ, ಪಾಲಯ ಮಾಮ್ ॥

(೨) ರಾಕ್ಷಸಖಣ್ಡನ, ರಘುಕುಲಮಣ್ಡನ, ರಾಜರತ್ನ, ರಣಧೀರ ।

(೩) ರಾಮ, ರಾಮ, ಸೀತಾರಾಮ, ಜಾನಕೀಜೀವನ, ಜಯಜಯ ರಾಮ ।

(೪) ರಘುಪತಿ, ರಾಘವ, ರಾಜಾರಾಮ, ಪತಿತಪಾವನ, ಸೀತಾರಾಮ ।

(೫) ರಾಮಚನ್ದ್ರ, ರಘುವೀರ, ಜಯಜಯ, ರಾಮಚನ್ದ್ರ, ರಘುವೀರ ।

**ಜಯಜಯ ರಘುವೀರಸಮರ್ಥ**



# ಸುಗ್ರೀವಸಖ್ಯ



## ಪೀಠಿಕೆ—ಸಖ್ಯ

ಭೈರವಿ—ರೂಪಕ

ಸಖ್ಯವಗ್ಯಾವುದು ಮನುಜ । ಸೌಖ್ಯವ ನೀ ಬೇಕೆಂಬೊಡೆ ॥ ಪ ॥ ವಿಖ್ಯಾತರೊಡನೆ ಸೇರಿ ನಂ । ಹಾಖ್ಯಾತಿಯ ನೀ ಪಡೆವೊಡೆ ॥ ಅ.ಪ ॥ ಗೆಳೆತನವನು ಗೆಯ್ವಿಬ್ಬರು । ತಿಳಿಯೆ ಸಮಾನಪರಿಸ್ಥಿತಿ ॥ ಯೊಳಗಿರಲದು ಶೋಭಿಸುವದು । ಬಳೆಸುವದಾ ಪರಿಯರಿಯುತ ॥ ೧ ॥ ಗೆಳೆತನವನು ತಮತಮ್ಮೊಳು । ಬಲಿಸಲು ಯೋಚಿಪ ಮುನ್ನವೆ ॥ ತಿಳಿದೀರ್ವರ ಸಾಮರ್ಥ್ಯವ । ತಳೆಯುತಾಗ ವಿಶ್ವಾಸವ ॥ ೨ ॥

ಜಗತ್ತಿನಲ್ಲಿ ಎಲ್ಲಿ ನೋಡಿದರೂ ಸಂಸಾರಸಂಬಂಧವಾದ ಯಾವದಾದರೊಂದು ಚಿಂತೆ ಇಲ್ಲದವರು ಎಲ್ಲಿಯೂ ಸಿಕ್ಕುವದಿಲ್ಲ. ಹೀಗೆಯೇ ಜನರ ಆಯುಸ್ಸೆಲ್ಲ ಕಳೆಯುತ್ತಿರುವದು.

ಶ್ಲೋ॥ ಗಾತ್ರೇಷು ವಲಯಃ ಪ್ರಾಪ್ತಾಃ ಶ್ವೇತಾಶ್ಚೈವ ಶಿರೋರುಹಾಃ । ಜರಯಾ ಪುರುಷೋ ಜೀರ್ಣಃ ಕಿಂ ಹಿ ಕೃತ್ವಾ ಪ್ರಭಾವಯೇತ್ ॥

—(ಶ್ರೀ.ರಾ)

ಅ॥ ಶರೀರದಲ್ಲಿ ಸುಕ್ಕುಗಳು ಬಂದವು. ಕೂದಲು ಬೆಳ್ಳಗಾದವು. ಮನುಷ್ಯನು ಮುಪ್ಪಿನಿಂದ ಸುಕ್ಕಿದನು. ಇನ್ನೇನು ಮಾಡಿ ದರ್ಪವನ್ನು ತೋರಿಸಬೇಕು?

ಇವೆಲ್ಲ ದುರ್ಲಕ್ಷಣಗಳಿಗೂ ಚಿಂತೆಯೇ ಹೆಚ್ಚಿನ ಕಾರಣ. ಚಿಂತೆಯ ಪ್ರಭಾವವನ್ನು ಕುರಿತು ನೀತಿಕಾರರು ಹೇಳಿರುವದೇನೆಂದರೆ—

ಶ್ಲೋ॥ ಚಿನ್ತಾಯಾಶ್ಚ ಚಿತಾಯಾಶ್ಚ ಬಿನ್ದುಮಾತ್ರಂ ವಿಶೇಷಕಮ್ । ಚಿತಾ ದಹತಿ ನಿರ್ಜೀವಂ ಚಿನ್ತಾ ದಹತಿ ಜೀವನಮ್ ॥ —(ಸು)

ಅ॥ ಚಿಂತೆಗೂ ಚಿತೆಗೂ ಸೊನ್ನೆ ಮಾತ್ರ ವ್ಯತ್ಯಾಸ. ಚಿತೆಯು ಸತ್ತ ದೇಹವನ್ನು ಸುಡುತ್ತದೆ. ಚಿಂತೆಯು ಬದುಕಿರುವ ದೇಹವನ್ನೆ ಸುಡುತ್ತದೆ.

ವಿವೇಕಿಗಳು ಈ ಚಿಂತೆಯನ್ನು ಕಳೆದುಕೊಳ್ಳಬೇಕೆಂಬಿಚ್ಛೆಯನ್ನು ವ್ಯಕ್ತಪಡಿಸಿರುವದೆಂತೆಂದರೆ—

ವೃ॥ ಚಿಂತೆಯೊಳೊಂದಿದಾವ ಬರ್ದುಕುಂ ಬಹುದುಃಖಮೆ ಎಂಬರೆಂದು ಮಾ । ಚಿಂತೆಯ ಬಾಳೊಳೇ ಬರ್ದುಕುತಿರ್ದಪರೇಕೆ ಸುಖಸ್ಥಲಾಂಧಕರ್? ॥ ಚಿಂತಿಪ, ಪಾಳ್ಪ, ಮಾತುಲಿವ ದಂದುಗಪಿಲ್ಲದೆ ತನ್ನ ರೂಪಿನೊಳ್ । ಶಾಂತದೆ ತೆಪ್ಪಗಿರ್ಪ ಬಗೆದೋರದಲಾ! ಅಪರಾಜಿತೇಶ್ವರಾ ॥ —(ಅ.ಶ)

ಟಿ|| ಸುಖಸ್ಥಲಾಂಧಕರ್—ಸುಖವೆಲ್ಲಿರುವದೆಂಬುದನ್ನು ಕಾಣದವರು. ಮಾತುಲಿವ—ಮಾತಾಡುವ. ದಂದು—ಕ್ಲೇಶ.

ಆ ಶಾಂತತೆಯು ಸುಮ್ಮನೆ ಹಂಬಲಿಸಿದರೆ ಬರತಕ್ಕದ್ದಲ್ಲ. ಅದಕ್ಕೆ ಅರ್ಹತೆ ಬೇಕು—

ಶ್ಲೋ|| ನೋದನ್ವಾನರ್ಥಿತಾಮೇತಿ ಸದಾಂಭೋಭಿಃ ಪ್ರಪೂರ್ಯತೇ ।
ಆತ್ಮಾ ತು ಪಾತ್ರತಾಂ ನೇಯಃ ಪಾತ್ರಮಾಯಾನ್ತಿ ಸಮ್ಪದಃ || —(ಸು.)

ಅ|| ಸದ್ರುಮುವು ಯಾಚನೆಯನ್ನು ಮಾಡುವದಿಲ್ಲ. ಅದಕ್ಕೆ ನೀರು ಬಂದು ತುಂಬುತ್ತಲೆ ಇರುತ್ತದೆ. ತನ್ನಲ್ಲಿ ಅರ್ಹತೆಯನ್ನುಂಟುಮಾಡಿಕೊಳ್ಳಬೇಕು. ಅರ್ಹತೆಯಿದ್ದ ಕಡೆಗೆ ಭಾಗ್ಯವು ಬರುತ್ತದೆ.

ಆ ಅರ್ಹತೆಯು ಬರಬೇಕಾದರೆ—

ಜುಂಜೋಟಿ—ಆದಿತಾಳ

ಸುಡಿ ಹರಿನಾಮುವನೆ। ರಸನೆ ||ಪ|| ಸುಡಿ ಹರಿನಾಮುವ। ನಡಿಗಡಿಗೊಲಿದುಸೀ || ಹಿಡಿಯೊಂದು ನೇಮುವನೇ || ಅ.ಪ || ಬಿಡು ಬೀಳುಮಾತಿನ । ಬೆಡಗಿಗೆ ಸೋಲ್ವುದ; || ಕಡಿ ಪಾಪದಾಮುವನೇ || ೧ || ಬಿಗಿಹಿಡಿ ಬಾಹ್ಯದೆ । ಸೊಗವ ಸವಿವಾಸೆಯ; || ಹೊಗು ರಸಧಾಮುವನೇ || ೨ || ನಾಮವೆ ಶಂಕರ। ಪ್ರೇಮ ರಸಾಯನ || ಕಾಮಿಸೀ ಕಾಮುವನೆ || ೩ || —(ಅ.ಗೀ)

ಟಿ|| ಪಾಪದಾಮ—ಪಾಪವೆಂಬ ಹಗ್ಗ. ಕಡಿ—ಕತ್ತರಿಸು. ರಸಧಾಮ—ರುಚಿಯ ಮನೆ.

ಇದೇ ಅರ್ಥವನ್ನು ಒಬ್ಬ ಕವಿಯು ಚಮತ್ಕಾರವಾಗಿ ಹೇಳಿರುವದೇನೆಂದರೆ—

ಶ್ಲೋ|| ಪತಿತಾನಾಂ ಸಂಸಾರಾ । ನ್ಧತಮಸಿ ಕೂಪೇ ಪಿನಷ್ಟದೃಷ್ಟೀನಾಮ್ || ಏಕಂ ಸುಹದುಪದಿಷ್ಟಂ । ಕಷ್ಟಹರಂ ಚಕ್ರಿಣೋ ಹಿ ಗುಣಭಜನಮ್ || —(ಸು.ಲಾ)

ಅ|| ಸಂಸಾರವೆಂಬ ಕತ್ತಲಾಗಿರುವ ಬಾವಿಯಲ್ಲಿ ಬಿದ್ದು ಕಣ್ಣುಕಾಣದವರಿಗೆ ದೊಡ್ಡವರು ಒಂದುಪಾಯವನ್ನು ಹೇಳಿದ್ದಾರೆ. ಅದೇನೆಂದರೆ— (ಭಾವಿಯಲ್ಲಿ ಬಿದ್ದವರಿಗೆ) (ಚಕ್ರಿಣಃ) ರಾಟೆಯ (ಗುಣಭಜನಮ್) ಹಗ್ಗವನ್ನು ಹಿಡಿದುಕೊಳ್ಳುವದು. (ಸಂಸಾರದಲ್ಲಿ ಬಿದ್ದವರಿಗೆ) (ಚಕ್ರಿಣಃ) ಚಕ್ರಪಾಣಿಯಾದ ವಿಷ್ಣುವಿನ (ಗುಣಭಜನಮ್) ಗುಣಗಳನ್ನು ಭಜಿಸುವದು.

ಅವನನ್ನು ಕೇಳಿಕೊಳ್ಳಬೇಕಾದದ್ದೇನೆಂದರೆ—

ಷ|| ಧರೆಯೊಳಿರುತಿಹ ತರುಗಳೆಲ್ಲವು। ಸರಿಯೆ ಕಲ್ಪದ್ರುಮಕೆ? ಜಗದೊಳ। ಗಿರುವ ಪಶುಗಳು ಕಾಮಧೇನುವಿನೊರೆಗೆ ಸರಿಯಹವೇ? || ಪರಮದೇವನೆ, ನಿಮ್ಮ ಮಹಿಮೆಗೆ। ಸರಿಯದಾರ್ಹ? ಸಕಲದೇವರ । ಪೊರೆವ ಕರುಣಾಸಿಂಧು, ರಕ್ಷಿಸು ನಮ್ಮನನವರತ || —(ಹ.ಭ)

ಸಾಯುವ ಕಾಲದಲ್ಲಿ ಕೂಡ ಈ ಭಾವನೆಯಿರಬೇಕು. ಏಕೆಂದರೆ—

ಶ್ಲೋ|| ಅನ್ತಕಾಲೇ ಚ ಮಾಮೇವ ಸ್ಮರನ್ಮುಕ್ತ್ವಾ ಕಲೇವರಮ್ ।
ಯಃ ಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ || —(ಭ.ಗೀ)

ಅ|| ಸಾಯುವ ಕಾಲದಲ್ಲಿ ಕೂಡ ನನ್ನನ್ನೇ ಭಜಿಸುತ್ತ ದೇಹವನ್ನು ಬಿಟ್ಟವರು ನನ್ನ ರೂಪವನ್ನೇ ಪಡೆಯುತ್ತಾರೆ. ಇದಕ್ಕೆ ಸಂಶಯವಿಲ್ಲ.

ಆದರೆ ಆ ಭಜನೆಯು ಮನಃಪೂರ್ವಕವಾಗಿರಬೇಕು—

ತ್ರಿ|| ಚಿತ್ತವಿಲ್ಲದೆ ಗುಡಿಯ ಸುತ್ತಿದರೆ ಫಲವೇನು? । ಎತ್ತು ಗಾಣವನು ಹೊತ್ತು ತಾ ನಿತ್ಯದಿ । ಸುತ್ತ ಬಂದಂತೆ ಸರ್ವಜ್ಞ || —(ಸ.ಪ)

ಪ್ರಾರ್ಥನೆಯ ಕಾಲದಲ್ಲಿ ಒಬ್ಬ ಭಕ್ತನು ಮನಸ್ಸಿಟ್ಟು ಹಂಬಲಿಸಿಕೊಂಡಿರುವುದೇನಂದರೆ—

ಕಮಾಚು—ರೂಪಕ

ಶ್ರೀರಾಮಚಂದ್ರದೇವ, ಭೂರಿದಯವ ತೋರಬಾರದೆ? || ಪ || ಬರಬಾರದ ಜನ್ಮಗಳೊಳು । ಬರುತಲೀ ದೇವ || ಬರಿದುಃಖವನು ಪಡುತ । ಕೊರಗು ತಿರ್ಪೆನೊ ದೇವ || ೧ || ಮೂರುದಿನದ ಜಗವ ನಂಬಿ । ಗಾರುಗೆಟ್ಟೆನೋ ದೇವ || ದಾರಿತೋರಯ್ಯ ನಿನ್ನ । ಸೇರಿ ಸಂತೋಷಿಪುದಕೆ ||೨|| ದೀನತನದಿ ಬಂದ ನನ್ನ । ನೀನುಪೇಕ್ಷೆ ಮಾಡಿಹೆ || ಮಾನವೇ ನೀ ನಡೆತೆ || ಮಾನನೀಯಗುಣಿಯೇ || ೩ || ಕೇಳು ದೇವ ನಿನ್ನ ನಾಮ । ಜಾಲವೆನ್ನ ನಾಲಿಗೆಗೆ || ಲೀಲೆಯಿಂ ಬರಲು ದಯ । ಪಾಲಿಸಬಾರದೇನೋ || ೪ || ಭೋಗಿಗಳೆಲ್ಲರಿಗಭೇದ್ಯ । ಆಗಮಾಂತ್ಯೈಕ ವೇದ್ಯ || ಯೋಗೀಂದ್ರವಿನುತವೇಷ । ಬೇಗ ನೀಂ ಚಿದ್ವಿಶೇಷ || —(ಭಕ್ತಿ.ಗೀ)

ಹೀಗೆ ದೇವರನ್ನು ಪ್ರಾರ್ಥಿಸಿದ ಮನುಷ್ಯನ ರೋಗಕ್ಕೆ ದೇವರು ತಕ್ಕ ಚಿಕಿತ್ಸೆಯನ್ನು ಮಾಡುವದೇನಂದರೆ—

ಶ್ಲೋ|| ವ್ಯಾಧಿತಸ್ಯಾರ್ಥಹೀನಸ್ಯ ದೇಶಾಂತರಗತಸ್ಯ ಚ । ನರಸ್ಯ ಶೋಕ- ದಗ್ಧಸ್ಯ ಸುಹೃದ್ದರ್ಶನಮೌಷಧಮ್ || —(ಸು)

ಅ|| ರೋಗಿಗೆ, ಹಣಕಾಸಿಲ್ಲದವನಿಗೆ, ದೇಶಾಂತರಕ್ಕೆ ಹೋದವನಿಗೆ, ದುಃಖದಿಂದ ಬೆಂದು ಬೆಂಡಾದವನಿಗೆ ಸ್ನೇಹಿತರ ದರ್ಶನವು ಔಷಧವು.

ಜಗತ್ತಿನಲ್ಲಿ ಸ್ನೇಹಿತರು ಬಹುಜನ ಗಂಟುಬೀಳುವರು. ಅವರಲ್ಲಿ ಕೆಲವರನ್ನು ಬಿಡಬೇಕಾಗುವದು. ಯಾರನ್ನೆಂದರೆ—

ಶ್ಲೋ|| ಪರೋಕ್ಷೇ ಕಾರ್ಯಹನ್ತಾರಂ ಪ್ರತ್ಯಕ್ಷೇ ಪ್ರಿಯವಾದಿನಮ್ । ವರ್ಜಯೇತ್ತಾದೃಶಂ ಮಿತ್ರಂ ವಿಷಕುಮ್ಭಪಯೋಮುಖಮ್ || —(ಸು)

ಅ|| ಹಿಂದುಗಡೆ ಕಾರ್ಯವನ್ನು ಕೆಡಿಸುವದು, ಮುಂದುಗಡೆ ಸವಿಯಾದ ಮಾತಾಡುವದು,— ಇಂಥ ಮಿತ್ರರನ್ನು— "ಹಾಲು" ಎಂದು ಚೀಟಿಯನ್ನು ಹಚ್ಚಿರುವಂಥ ವಿಷದ ಪಾತ್ರೆಯನ್ನು ಹೇಗೊ ಹಾಗೆ—ಬಿಡಬೇಕು.

ದೇವರ ಅನುಗ್ರಹದಿಂದ ದೊರೆಯುವ ಗೆಳೆಯನೆಂತಿರುವನೆಂದರೆ—

ಶ್ಲೋ|| ಶುಚಿತ್ವಂ, ತ್ಯಾಗಿತಾ, ಶೌರ್ಯಂ, ಸಾಮಾನ್ಯಂ ಸುಖದುಃ- ಖಯೋಃ, । ದಾಕ್ಷಿಣ್ಯಂ ಚಾನುರಕ್ತಿಶ್ಚ ಸತ್ಯತಾ ಚ ಸುಹೃದ್ಗುಣಾಃ || —(ಸು)

ಅ॥ ನಿರ್ಮಲವಾದ ಮನಸ್ಸು, ದಾನಶೀಲತ್ವ, ಶೌರ್ಯ, ಸುಖದುಃಖಗಳಲ್ಲಿ ತನ್ನಂತೆ ಇರುವದು, ಮತ್ತೊಬ್ಬರ ಮನಸ್ಸನ್ನು ನೋಯಿಸದಿರುವದು, ಪ್ರೀತಿ, ಒಳಗೊಂದು ಹೊರಗೊಂದು ಇಲ್ಲದಿರುವದು— ಇವು ಸ್ನೇಹಿತನ ಗುಣಗಳು.

ಇಂಥವನ ಗೆಳೆತನದಿಂದ ದುಃಖವಿಮೋಚನೆಯಾಗುವದೆಂದು ಹೇಳುವದಕ್ಕಾಗಿಯೆ ಪೀಠಿಕೆಯಲ್ಲಿ "ಸಖ್ಯಪ ಗ್ಯೆವುದು ಮನುಜ" ಎಂದು ಹೇಳಿರುವದು. ಈ ಬಗೆಯ ಸಖ್ಯಕ್ಕೆ ಉದಾಹರಣೆಯಾಗಿ ಸುಗ್ರೀವಸಖ್ಯವೆಂಬ ಆಖ್ಯಾನವು ಯಥಾಮತಿ ನಿರೂಪಣ ಮಾಡಲಾಗುವದು.

ಶ್ಲೋ॥ ಗುಣದೋಷೌ ಬುಧೋ ಗೃಹ್ಣನ್ನಿಂದುಕ್ಷ್ವೇಲಾವಿವೇಶ್ವರಃ ।
ಶಿರಸಾ ಶ್ಲಾಘತೇ ಪೂರ್ವಂ ಪರಂ ಕಣ್ಠೇ ನಿಯಚ್ಛತಿ ॥ —(ಸು.)

ಅ॥ ಈಶ್ವರನು ಚಂದ್ರನನ್ನೂ ವಿಷವನ್ನೂ ಗ್ರಹಿಸಿದಂತೆ ಪಂಡಿತರು ಗುಣದೋಷಗಳನ್ನು ಗ್ರಹಿಸಿ ಗುಣವನ್ನು ತಲೆಯ ಮೇಲಿಟ್ಟುಕೊಂಡು ದೋಷವನ್ನು ಕಂಠದಲ್ಲಿಯೇ ನಿಲ್ಲಿಸಿಬಿಡುತ್ತಾರೆ.

ಎಂಬ ವಾಕ್ಯದಂತೆ ಗುಣಗ್ರಹಣತತ್ಪರರಾಗಿ ಲಾಲಿಸಬೇಕೆಂದು ಪ್ರಾರ್ಥನೆ.



## ಆಖ್ಯಾನ

ಜಟಾಯು ವಿಮಾನಾರೂಢನಾಗಿ ವೈಕುಂಠಕ್ಕೆ ತೆರಳಿದ ಮೇಲೆ ರಾಮಲಕ್ಷ್ಮಣರು ಅರಣ್ಯದಲ್ಲಿ ಮುಂದೆ ಬರುತ್ತಿರಲು—

ಷ॥ ಆಲಿಸುತಲಬ್ಬರಿಸುತೊಯ್ಯನೆ । ತೋಳುಗಳ ಪಸರಿಸುತ, ಮುಂದಕೆ । ಮೋಲುಡಿಯ ಬಿದ್ದಿಹ ಉಲಾಯುಕುರಂಗಕದಲಿಗಳ ॥ ತಾಳಿಕೆಯ ತಳಕಿಳುಹುತಗಿವುತ । ಮೇಲುಮಂಡಲದಖಿಲಭೂತಗ । ಳೋಲಗದ ಖಳನೆದ್ದನಾಚರಿಸಲು ಸುರವ್ರಾತ ॥ —(ತೊ.ರಾ)

ಟಿ॥ ಮೇಲುಡಿಯ ಬಿದ್ದಿಹ—ಮಡಿಲಲ್ಲಿ ಬಿದ್ದಿರುವ. ಉಲಾಯು—ಕೋಣ. ಕುರಂಗ—ಹುಲ್ಲೇಕರು. ಕದಲಿ—ಬೋರೇವರ್ಣದ ಜಿಂಕೆ. ತಾಳಿಕೆ—ಭಾರ, ಅಗಿವುತ—ಕೋಪಗೊಳ್ಳುತ್ತ ಆಚರಿಸಲು—ಆ ಎಂದು ಕಿರಿಚಿಕೊಳ್ಳಲು.

ಆಗ—

✓ ಕೀ॥ ರಾಮಬಾಣದಿಂದಾ ಕಬಂಧನು । ದ್ದಾಮಬಾಹುಗಳು ಕಡಿವಡೆಯೆ॥ ತಾಮಸತ್ವವಳಿದಗ್ನಿಯುಸಿಡೆಂದು । ಕಾಮಿಸಿದನು ಸದ್ಗತಿವಡೆಯೆ ॥

✓ ಸಾ॥ ಮುದದಿಂದಷ್ಟಾವಕ್ರರ ಜರೆದೀ । ಹದನಾದಾ ಗಂಧರ್ವ ॥ ತ್ರಿದಶೇಶಕೃತವಿಕಾರವಳಿಯೆ ಪೂ । ರ್ವದವೋಲಾದನದೋರ್ವ ॥

ಆ ಗಂಧರ್ವನು ರಾಮಚಂದ್ರನನ್ನು ಪ್ರಾರ್ಥಿಸುತ್ತಾನೆ—

ನವರಸಕನ್ನಡ—ಆದಿತಾಳ

ದಯಮಾಡಿಕೊಡೊ ಎನ್ನಿಷ್ಟವ। ಸೀತಾಧವ। ಶ್ರೀರಾಘವ ‖ ಪ ‖ ನಯದಿಂದಲೆನ್ನ ಭವಬಂಧದ। ಭಯವನ್ನು ಕಳೆ ಜಯರಾಮಚಂದ್ರ ‖ ಅ.ಪ ‖ ಬುದ್ಧಿಯಿಲ್ಲದಿಹ ಜನ್ಮಗಳಿಗೆನ್ನ । ಒದ್ದು ನೂಕದೆ ದೇವಜನ್ಮದಲ್ಲಿ ‖ ಇದ್ದು ನಿನ್ನಯ ಮುದ್ದುಪಾದಕೆ । ಬಿದ್ದು ಬದುಕುವಂತುದ್ಧರಿಸೆಂಬೆ ‖ ೧ ‖ ಕೊನೆಯಲ್ಲಿ ದುಃಖಾಕರವಾದ ಭೋಗ । ವನು ಬೇಡುವಾಸೆಯನು ಸುಟ್ಟುಹಾಕಿ ‖ ಮನದಲ್ಲಿ ನೀ ಮನೆಮಾಡೆಂದು । ಅನುವಿಂದ ನಾ ಬೇಡುವಂತೆ ‖ ೨ ‖ ಸತಿಸುತರಾಬಲೆಯೆಂಬುವಾ। ಅತಿಕಷ್ಟದಿ ಸಿಲ್ಕಿರದೆ ‖ ಹಿತವನ್ನು ಮಾಡುವ ಸಾಧು ಸಂ। ಗತಿಯಲ್ಲಿಯೇ ಇಡು ಚಿನ್ಮಯ ‖ ೩ ‖ —(ಭಕ್ತಿ.ಗೀ)

ನಿನ್ನಿಂದ ಕೃತಾರ್ಥನಾದ ತನ್ನದೊಂದು ವಿಜ್ಞಾಪನೆ ಇದೆಯೆಂದು ಕಬಂಧನು ಮತ್ತೆ ರಾಮಚಂದ್ರನಿಗೆ ಹೇಳಿದ್ದೇನೆಂದರೆ—

✓ ದಿಂ‖ ಮುಂದೆ ನೀ ಹೋಗಾ ಶಬರಿಯಾಶ್ರಮಕ್ಕೆ। ಇಂದವಳಿಗೀ ದರ್ಶನದ ಲಾಭಮಕ್ಕೆ ‖ ಮುಂದಿನದ ಪೇಳ್ವಳ್ ಶಬರಿ ತಾನು। ದಂದುಗವ ಕಳೆವಳ್ ಪೇಳಲಿನ್ನದೇನು ‖

ಮುಂದೆ ಬಂದು ನೋಡಿದಾಗ ಶಬರಿಯ ಆಶ್ರಮವು ಹೇಗಿತ್ತೆಂದರೆ—

✓ ಚೌ‖ ನಲಹುತಿರ್ದವು ಹುಲಿಯು ಮರಿಗಳ–ವೊಲೆಯುನಿತ್ತು ಕುರಂಗಿಗಳ್। ಕಲಕಲಭನಿಕರವನು ಪೊರೆಯುತ–ನಲಿಯುತಿರ್ದವು ಸಿಂಹಗಳ್ ‖ ಒಲಿದು ರೆಕ್ಕೆಗಳೆಡೆಯೊಳಹಿಗಳ–ನುಳುಹುತಿರ್ದವು ನವಿಲುಗಳ್ । ಗಿಳಿಗಳಿಂದಲಿ ಮಾತುಕಥೆಗಳ–ಕಲಿಯುತಿರ್ದವು ಬೆಕ್ಕುಗಳ್ ‖

ಟಿ‖ ಕುರಂಗಿ—ಹೆಣ್ಣು ಜಿಂಕೆ. ಕಲಕಲಭನಿಕರ—ಅವ್ಯಕ್ತಧ್ವನಿಯನ್ನು ಮಾಡುವ ಆನೆಯ ಮರಿಗಳ ಗುಂಪು.

ಅಲ್ಲಿದ್ದ ಶಬರಿಯ ವರ್ಣನೆ—

ಷ‖ ಕುಶನೆ ಕೇಳ್ಕೆ ನರೆತ ಮಂಡೆಯ,। ಕುಸಿದ ತೊಗಲಿನ, ಜೋಲ್ದ ಹುಬ್ಬಿನ,। ನಸಿದ ನೋಟದ, ಬಾಗಿದೊಡಲಿನ, ಬತ್ತಿದಾನನದ, ‖ ಸಸಿದ ಹಲುಗಳ, ಕೆತ್ತ ಕಿವಿಗಳ । ಮುಸುಳಿದಂಗವ, ಮುಪ್ಪಿನಲಿ ಲಂ ! ಬಿಸುವ ಶಬರಿಯ ಸುಪ್ರಸಿದ್ಧಿಯ ನಾರ್ದರೊಲವಿನಲಿ ‖ —(ತೊ.ರಾ)

ಟಿ‖ ನಸಿದ—ಕಡಿಮೆಯಾಗಿಹೋಗಿರುವ. ಸಸಿದ—ಸವೆದು ಹೋದ. ಕೆತ್ತ—ಕಿವುಡಾದ. ಮುಸುಳಿದ—ಸೊರಗಿದ. ಲಂಬಿಸುವ—(ರಾಮಸಾಕ್ಷಾತ್ಕಾರಕ್ಕಾಗಿ) ಕಾದಿರುವ.

ಅವಳು ರಾಮರಿಗೆ ಮಾಡಿದ ಉಪಚಾರ—

✓ ಕೀ‖ ಚರಣವ ತೊಳೆಯುತ, ಬಹುಕಾಲದಿ ಶೇ। ಖರಿಸಿದ ಮಧುರಫಲಂಗಳನು ‖ ಭರದೊಳಿತ್ತು ಧನ್ಯತೆಯಿಂ ತಾಳ್ದಾ। ದರಿಸಿದಳವರ ಪದಂಗಳನು ‖

ಅವಳು ರಾಮಚಂದ್ರನನ್ನು ಸ್ತೋತ್ರಮಾಡಿದ್ದು—

✓ ಚೂ॥ ಆದಿಯಿಲ್ಲದವ ನೀನು, ಬಾಧಿತನಾಗದವ ನೀನು, ಔದುಂಬರಕ್ಷೇತ್ರ ವಾಸ ನೀನು, ಕಾದು ಕಟ್ಟುವವ ನೀನು, ಚೋದ್ಯನಲ್ಲದವ ನೀನು, ನಾದಮೂಲನು ನೀನು, ಪಾದಾನತಪಾಲ ನೀನು, ಮೇದಿನಿಯೊಳಗೆಲ್ಲ ದೇವದೇವನು ನೀನು, ವಾದದೂರನು ನೀನು, ವೇದವೇದ್ಯನು ನೀನು, ಸಾಧುಸೇವ್ಯನು ನೀನು, ಭೇದವಿರಹಿತ ನೀನು, ದೀನ ನಾನು। ಪಾತಾಲವೇ ಹೆಜ್ಜೆ, ಪಾದವು ಮಹಾತಲವು, ಪಾದಘುಟಿಕೆಗಳು ರಸಾತಲಮಹಾತಲಗಳು। ಮೊಣಕಾಲು ಸುತಲವು, ಎಣಿಸೆ ತೊಡೆ ವಿತಲವು, ವಿಸುತನೇ ಕಟಿಭಾಗವಹುದತಲವು। ಭೂಲೋಕವೇ ನಾಭಿ, ಭುವಸ್ಸ್ವಗಳೆದೆಯು, ಮಹಲೋಕ ಕೊರಳು, ಜನಲೋಕ ಬಾಯಿ। ತಪವು ಹಣೆ, ಸತ್ಯ ತಲೆ, ಇಂತೀ ವಿರಾಡ್ರೂಪವಿರಲೆಲ್ಲ ಶಾಸ್ತ್ರಗಳೊಳೇ । ಹೇ ರಾಮ ನಿನ್ನದೀ ಮಧುರರೂಪ, ಕಾಣಿಸುತ್ತಿರಲೇ ದಿವ್ಯದೀಪ, ಮಾಣದೆನಗೆ ಲಯವಪ್ಪುದೆಮ್ಮ ಪಾಪ, ಭೂಪ। ಕಯ್ಯೊಳು ಧನುರ್ಬಾಣ, ಮೇಘಶ್ಯಾಮಲವರ್ಣ, ಶಿರದೊಳು ಜಟಾಧಾನ, ವಲ್ಕಲವೆ ವಸನ। ಎಳೆಯ ತನು, ಹೊಳೆವ ಮುಖ, ಸುಳಿನಾಭಿ, ಬಳೆಗುರುಳು, ಜಲರುಹಸಮಾನವದನ। ಈ ರೂಪವೆನ್ನ ಮನದೊಳಗೆ ನೆಲಸಿರಲಿ, ಪ್ರೇಮಮಯಮೂರ್ತಿ ನಿನ್ನೊಲುಮೆಯೊಂದಿರಲಿ, ಈ ಜಗದೊಳೆನಗೆ ಬಹುದೆಲ್ಲವೂ ಬರಲಿ, ದೇವ ನಿನ್ನಯ ಸ್ಮರಣೆ ಮರೆಯದೇ ಇರಲಿ.

**ಆಮೇಲೆ ಅವಳು ರಾಮನಿಗೆ ಮಾಡಿದ ಸೂಚನೆ—**

✓ ಸಾ॥ ಮುಂದೆ ಋಷ್ಯಮೂಕದಿ ಸುಗ್ರೀವನೊ।ಳಂದದ ಸಖ್ಯವ ಮಾಡಿ ॥ ಪೊಂದುವೆ ಸೀತೆಯನೆಂದಗ್ನಿಯೊಳೇ। ಸಂದಳು ರಾಮನ ನೋಡಿ ॥

**ಅಲ್ಲಿಂದ ಮುಂದೆ ಬರುತ್ತಲೆ ಋಷ್ಯಮೂಕಪರ್ವತದ ಹತ್ತಿರದ ಪಂಪಾಸರಸ್ಸನ್ನು ನೋಡಿ ಆಶ್ಚರ್ಯಪಡುತ್ತಾರೆ—**

✓ ರ॥ ಇದು ಚಂದ ನೋಡುವೊಡಿದು ಚಂದ। ಪಂಪಾಸರೋವರ ॥ಪ॥ ಏನು ಸೊಬಗಿನದು ಪಂಪಾಸರವು। ಕಾಣಬರುವದು ನಿಲಿಂಪಾಶ್ರಯವು । ಸುಜನರ ಚಿತ್ತದವೊಲ್ತಿಳಿನೀರು। ವಿಜನವಾಗಿ ನೋಡಲು ಬಹುಚಾರು। ಎತ್ತ ನೋಡಲರಳಿದ ಹೂಗಂಧ। ಸುತ್ತಲು ಬಗೆಬಗೆ ತರುಗಳ ಚಂದ। ಸರದ ತುಂಬ ಸರಸಿಜವನಮಿಹುದು। ಹೊರಗೆ ಹಸುರು ಗರಿಕೆಯು ತೋರುವುದು। ಚೆಲ್ಲ ಸೂಸಿ ಬಿದ್ದಿಹ ಹೂವುಗಳು। ಎಲ್ಲ ರತ್ನಗಂಬಳಿಗಳೆ ಮಿಗಿಲು। ಮರಮರಗಳಿಗೇ ಹಬ್ಬಿದ ಬಳ್ಳಿ। ತಿರುತಿರುಗಿದ ಕಡೆ ತೋರ್ದಪುವಲ್ಲಿ। ಯಾವ ಕಡೆಯನೀಕ್ಷಿಸಿದರು ಬೆಟ್ಟ। ಯಾವ ಕಡೆಗೆ ನೋಡಲು ಮರದಟ್ಟ । ಸಾಧುವಾದ ಮೃಗಗಳ ಸಂಚಾರ। ಸಾಧುಗಳುಪಯೋಗಿಸುತಿಹ ಚೀರ । ಬಂಧುರತರಪಕ್ಷಿಗಳ ಧ್ವನಿಯು । ನಿಂದರಲ್ಲಿ ಶಾಂತಿಯ ತವರ್ಮನೆಯು ॥

**ಆ ವಾತಾವರಣಕ್ಕೆ ಹೋದ ಕೂಡಲೆ ರಾಮನು ವಿರಹವ್ಯಥೆಯನ್ನು ಅನುಭವಿಸುತ್ತಾನೆ—**

**ದೇಶೀತೋಡಿ—ಅಟತಾಳ**

ಹಾ! ಹಾ! ಸೀತೆ, ಹಾ! ಪ್ರಾಣನಾಥೆ। ಹಾ! ನಿನ್ನಗಲಿ ನಾನೆಂತಿರಲಿ? ॥ ಪ ॥ ಎಲ್ಲಿಗೆ ಹೋದೆ? ಪ್ರಿಯೆ, ಏನಾದೆ? । ಬಲ್ಲವರಿಲ್ಲವೆ ಫುಲ್ಲನಯನೆಯ? ॥ ೧ ॥ ಜನಕನ ತನುಜೆ, ಜನಕೆ ನೀ ಮನುಜೆ, । ಕನಕಸುಗಾತ್ರೆ, ಜನವಂದ್ಯಗೋತ್ರೆ ॥ ॥ ೨ ॥ ಕಾಳಾಹಿವೇಣಿ, ಕೋಕಿಲವಾಣಿ, । ವೈದೇಹಿ, ಬಾಲೆ, ಕಾಣೆ ಸುಶೀಲೆ ॥

**ಹೀಗೆ ಚಿಂತಿಸುತ್ತ ಮರದ ಕೆಳಗೆ ಕುಳಿತಿದ್ದ ರಾಮಲಕ್ಷ್ಮಣರನ್ನು ಕಾಣುತ್ತಲೆ ಪರ್ವತಾಗ್ರದಲ್ಲಿದ್ದ ಸುಗ್ರೀವನಿಗೆ ಪ್ರೇಮೋದಯವಾಗಿದೆ—**

ಶ್ಲೋ॥ ಸತಿ ಸಾಹಜಿಕಂ ಪ್ರೇಮ ದೂರಾದಪಿ ವಿರಾಜತೇ । ಚಕೋರೀ-ನಯನದ್ವಸ್ದ್ವಮಾಸ್ಪ್ರಯತಿ ಚನ್ದ್ರಮಾಃ ॥ —(ಸು)

**ಚಂದ್ರನು ಚಕೋರಪಕ್ಷಿಯ ಕಣ್ಣುಗಳಿಗೆ ಪ್ರೇಮವನ್ನುಂಟುಮಾಡುವಂತೆ ಸಹಜವಾದ ಪ್ರೇಮವಿದ್ದರೆ ದೂರದಿಂದಲೂ ಕಾಣಿಸಿಕೊಳ್ಳುತ್ತದೆ.**

**ಚೆನ್ನಾಗಿ ದೃಷ್ಟಿಸಿ ನೋಡಿದಾಗ ಸುಗ್ರೀವನಿಗೆ ಕಾಣಬಂದದ್ದೇನೆಂದರೆ—**

ಷ॥ ಬೆಂಗಡೆಯೊಳಮರಿಚಿದ ಕಣೆಗಳಿಂ ಡೊಣೆಗಳಿಂ । ರಂಗುವಡೆದೆಸೆವ ಕಾರ್ಮುಕಗಳಿಂ। ಮುಖಗಳಿಂ। ಸಂಗಳಿಸಿದಮಳತೇಜಂಗಳಿಂ ಕಂಗಳಿಂ ಪಜ್ಜಳಿಪ ಕಾಂತಿಯಿಂದ ॥ ಮುಂಗಯ್ಯೊಳೆಸೆವ ಬಿಲ್ಬೊಡೆಗಳಿಂ ಜಡೆಗಳಿಂ। ಹಿಂಗದೊಪ್ಪುವ ರಾಜತೇಜದಿಂ ಸಾಜದಿಂ। ಪೊಂಗುವುರುತರದ ಲಾವಣ್ಯದಿಂ ಪುಣ್ಯದಿಂ ಕಂಗೊಳಿಸಿದರ್ ಕುವರರು ॥ —(ಮಾ.ರಾ.)

**ಟಿ॥ ಬೆಂಗಡೆಯೊಳ್—ಬೆನ್ನಿನ ಕಡೆ. ಡೊಣೆ—ಬತ್ತಳಿಕೆ. ಬಿಲ್ಬೊಡೆ—ಬಿಲ್ಲನ್ನು ಝೇಂಕರಿಸುವಿಕೆ. ಸಾಜದಿಂ—ಸ್ವಭಾವಸಿದ್ಧವಾದ (ರಾಜತೇಜದಿಂದ). ಪೊಂಗುವ—ಉಕ್ಕಿ ಹರಿಯುವ.**

**ಆಗ ಅವರು ವಾಲಿಯ ಕಡೆಯವರಿರಬಹುದೆಂಬ ಸಂಶಯವು ಬಂದದ್ದರಿಂದ ಅವರ ಗುಟ್ಟನ್ನು ತಿಳಿಯಲು ಸುಗ್ರೀವನು ಹನುಮಂತನನ್ನು ಕುರಿತು ಹೇಳಿದ್ದೇನೆಂದರೆ—**

✓ದಿ॥ ವಾಲಿ ತಾ ಕಳುಹಲ್ ಬಂದರೇನೊ ಕಾಣೆ; । ಕೇಳಿ ಜಾಣಿಂ ನೀಂ ತಿಳಿವುದೆನ್ನೊಳಾಣೆ; ॥ ಆಲಿಸಲ್ಕಿಯುಮಂ ಕಾಣದಿರ್ದೊಡೀಗ । ಕಾಲದೊಳ್ಳಿಮ್ಯಂ ಗೈಸು ನೀನು ಬೇಗ ॥

**ಒಡನೆ ಅವನು ಬ್ರಹ್ಮಚಾರಿವೇಷದಿಂದ ಬಂದಿದ್ದಾನೆ—**

ಷ॥ ವಿತತವಿಮಳಾಮ್ನಾಯುಡಲಿ ವಿ । ಶ್ರುತದ ಮಣಿಕುಂಡಲದ, ವಿವಿಧ । ಸ್ಮೃತಿವಿಳಾಸಬ್ರಹ್ಮದಂಡದ, ನಿರ್ಜಿತೇಂದ್ರಿಯದ ॥ ನುತಕನಕಕೌಪೀನದಾಗಮ । ದತಿಶಯದ ಯಜ್ಞೋಪವೀತದ । ಯತಿಕುಲೋತ್ತಮನೈದಿದನು ನರರೂಪಿನಚ್ಯುತನ ॥ —(ತೊ.ರಾ)

**ಟಿ॥ ವಿತತ . . . ಮಣಿಕುಂಡಲದ—ವಿಸ್ತಾರವಾದ ಮತ್ತು ಶುದ್ಧವಾದ ವೇದವನ್ನು ಶ್ರವಣ ಮಾಡಿರುವದೆಂಬ ಪ್ರಸಿದ್ಧವಾದ ಕರ್ಣಕುಂಡಲವುಳ್ಳವನು. ಅದರಂತೆ ಸ್ಮೃತಿಯೇ ಬ್ರಹ್ಮದಂಡ,**

ಜಿತೇಂದ್ರಿಯತ್ವವೇ ಕೌಪೀನ, ಆಗಮವೇ ಯಜ್ಞೋಪವೀತ. ಯತಿಕುಲೋತ್ತಮ—ಜಿತೇಂದ್ರಿಯರಲ್ಲಿ ಶ್ರೇಷ್ಠನಾದ.

ಹನುಮಂತನು ಬಂದು ಅವರ ಸೌಂದರ್ಯಕ್ಕೆ ಬೆರಗಾಗಿ ಹೇಳುತ್ತಾನೆ—

ಶ್ಲೋ॥ ಕುಶಸ್ತ್ವನ್ಯೋಽಪಿ ಸಮುದ್ಭೂತಃ ಸೌರಭ್ಯೇಣೈವ ಭಾಸತೇ । ತಪೋವೇಷೇಽಪಿ ಸೌಂದರ್ಯಂ ಯುವಯೋಃ ಯುವಯೋಗಿನೋಃ ॥ —(ರಾ.ಚಂ)

ಅ॥ ಪ್ರಾಯಸ್ಥರಾದ ಯೋಗಿಗಳಾಗಿರುವ ನಿಮ್ಮಿಬ್ಬರ ತಪೋವೇಷದಲ್ಲಿ ಕೂಡ—ದರ್ಭಕಾಂಡದಲ್ಲಿ ಕೂಡ ಸುವಾಸನೆ ತೋರುವಂತೆ—ಸೌಂದರ್ಯವು ತೋರುತ್ತದೆ.

ಶಂಕರಾಭರಣ—ಅಟತಾಳ

ಯಾರಪ್ಪ, । ನೀವೀರ್ವರು ಯಾರಪ್ಪ? ॥ ಪ ॥ ಯಾರಪ್ಪ ನೀವೀರ್ವರಿಲ್ಲಿ? । ಬಹು । ವಿಚಾರಿರುವರಿ ತೇಜದಲ್ಲಿ ॥ ಓಹೊ! । ಮೂರುಲೋಕಂಗಳ ಕಾರಣಕರ್ತರೆ । ದೂರದಿಂದ ಬಂದು ಸೇರಿಹುದೇನಿಲ್ಲಿ? ॥ಅ.ಪ॥ ಪಸಿದು ಪೀರರ ವೇಷ? । ಕೋಟಿ । ಭಾನುಮಂಡಲಸುಪ್ರಕಾಶ । ನೋಡೆ । ಮಾನುಷರಂದದಿ ಭಾಸ । ಕಾಣೆ । ನೀಸನು ನಿಮ್ಮಲಿ ದೋಷ ॥ ಓಹೊ । ಕ್ಷೋಣಿಯೊಳಗೆ ಕಾಣ್ಬ ದೇವರೆಂದೆಣಿಸೆನು । ವಾಣದೆನ್ನೊಳು ಪೇಳಿ । ಶರಣುಬಂದಿಹೆ ನಾನು ॥ ೧ ॥

ಇದನ್ನು ಕೇಳಿ ರಾಮನು ಲಕ್ಷ್ಮಣನಿಗೆ ಹೇಳುತ್ತಾನೆ—

ನಾಟಕುರಂಜಿ—ಅಟತಾಳ

ಕೇಳಿದ್ಯಾ? । ಲಕ್ಷ್ಮಣ, ನೀನು ॥ ಪ ॥ ಕೇಳಿದೆಯ ನೀನು ತಮ್ಮ? । ಇದ । ನಾಲಿಸಲಿವ ಬಂಧುವೆಮ್ಮ ॥ ಓಹೊ! । ಆಲಿಸೆ ಋಗ್ಯಜುಸ್ಸಾಮವನರಿಯದೆ । ಈ ಲಲಿತೋಕ್ತಿಯನಾಡುವೊಡಳವಲ್ಲ ॥ಅ.ಪ॥ ತಿಳಿದವನಿವ ವ್ಯಾಕರಣವ । ನೆಲ್ಲ । ಗಳಹನೊಂದಪಶಬ್ದಕಣವ । ದೇಹ । ದೊಳು ಕಾಣೆ ನಾ ದುರ್ಲಕ್ಷಣವ । ಶಬ್ದ । ದೊಳು ತೋರದಿಹನು ಸಂಶಯವ ॥ ಓಹೊ! । ತಿಳಿಯಲು ಮಧ್ಯಮಸ್ವರದಿ ಶೋಭಿಸುತಲಿ । ತಿಳಿಪನು ಸುಸ್ಪಷ್ಟವಾಗಿ ತನ್ನರ್ಥವ ॥ ೧ ॥

ಶ್ಲೋ॥ ಪ್ರಸನ್ನಾಃ ಕಾನ್ತಿಹಾರಿಣ್ಯೋ ನಾನಾಶ್ಲೇಷವಿಚಕ್ಷಣಾಃ । ಭವನ್ತಿ ಕಸ್ಯಚಿತ್ಪುಣ್ಯೈರ್ಮುಖೇ ವಾಚೋ, ಗೃಹೇ ಸ್ತ್ರಿಯಃ ॥ —(ಸು)

ಅ॥ ಮುಖದಲ್ಲಿ ಸ್ಪಷ್ಟಾರ್ಥವುಳ್ಳಂಥ, ಭಾಷಣಗುಣದಿಂದ ಮನೋಹರವಾದಂಥ, (ನಾನಾ+ಶ್ಲೇಷ) ಪಕ್ಷಾಂತರಾರ್ಥಗಳಿಂದ ಶೋಭಿಸುವಂಥ ಮಾತುಗಳೂ ಮನೆಯಲ್ಲಿ ಪ್ರಸನ್ನವಾದ ಮುಖವುಳ್ಳಂಥ, ಕಾಂತಿಯಿಂದ ಮನೋಹರರಾಗಿರುವಂಥ, (ನಾನಾ+ಆಶ್ಲೇಷ) ಬಗೆಬಗೆಯಾದ ಆಲಿಂಗನಗಳ ಚತುರತೆಯುಳ್ಳಂಥ ಸ್ತ್ರೀಯರೂ ಪುಣ್ಯವಿಶೇಷದಿಂದ ಯಾವನೋ ಒಬ್ಬನಿಗೆ ದೊರೆಯುವರು.

ಆಮೇಲೆ ರಾಮಚಂದ್ರನು ತನ್ನ ವೃತ್ತಾಂತವನ್ನೆಲ್ಲ ತಿಳಿಸಲು ರಾಮನ ಮತ್ತು ಸುಗ್ರೀವನ ಪರಿಸ್ಥಿತಿಗಳೆರಡೂ ಒಂದಾಗಿರುವದನ್ನು ನೋಡಿದ ಹನುಮಂತನು "ಗೆಳೆಯತನವನು ಗೈವಿಬ್ಬರು" ಎಂದು ಮೊದಲಾಗಿ ಪೀಠಿಕೆಯಲ್ಲಿರುವ ಅನುಭವಿಗಳ ನುಡಿಯನ್ನು ಮನಸ್ಸಿಗೆ ತಂದುಕೊಂಡು ರಾಮಚಂದ್ರನ ಮುಂದೆ ತನ್ನ ವಿಜ್ಞಾಪನೆಯನ್ನಿಡುತ್ತಾನೆ.—

ಮಧ್ಯಮಾವತಿ—ಅಟತಾಳ

ಲಾಲಿಸೈ। ಎನ್ನಯ ದೇವ। ಲಾಲಿಸೈ ॥ ಪ ॥ ಲಾಲಿಸು ನೀನೆನ್ನ ಮಾತ। ದಯ। ಪಾಲಿಸಭಯವನು ಖ್ಯಾತ ॥ ಓಹೊ। ಕೇಳಿಕೊಂಡವರನು ತಪ್ಪದೆ ಪೊರೆವ ಕೃ। ಪಾಳು ನೀನಲ್ಲವೆ? ರವಿಕುಲಸಂಜಾತ ॥ ಅ.ಪ ॥ ಈ ಪರ್ವತಾಗ್ರದೊಳಿರುವ। ಕಪಿ। ಭೂಪಾಲಕನು ಸುಗ್ರೀವ। ಕುಲ। ದೀಪನನು ನಿನ್ನ ಜೀವ। ಹಸ್ತ। ಚಾಪನೆ ಗೈ ಗೆಳೆತನವ ॥ ಓಹೊ। ಆ ಪಾಪಿ ವಾಲಿಯಿಂ। ತಾಪಗೊಂಡಿಹ ನಮ್ಮ। ಭೂಪನ ಪಾಲಿಸೆ। ನೀ ಪರಾಕ್ರಮಿ ನಿಜ ॥ ೧ ॥ ಶ್ರೀಸೀತಾದೇವಿಯನ್ನು। ಕದ್ದ। ದೋಷಿಯಾದ ಖಲನನ್ನು। ಕಂಡು। ಗಾಸಿಗೊಳಿಸಿ ಶೌರ್ಯವನ್ನು। ತೋರಿ। ತೋಷಗೊಳಿಸನು ನಿನ್ನನ್ನು ॥ ಓಹೊ। ಯೋಷಿತ್ಸಂಕುಲ। ಭೂಷಣೆಗಾಗಿ ಏ। ಶೇಷಯತ್ನವ ಮಾಡೆ। ಭಾಷೆಯನೀವನು ॥ ೨ ॥

ಇದಕ್ಕೆ ರಾಮನು ಸಮ್ಮತಿಸಲಾಗ ಹನುಮಂತನು—

✓ಕೀ॥ ಗೆಳೆತನಕೊಪ್ಪಿದ ರಾಮಲಕ್ಷ್ಮಣರ। ನೊಲಪಿಂ ಹೆಗಲೊಳು ಕುಳ್ಳಿರಿಸಿ ॥ ನಲವಿಂದೈದುತ್ತಾ ಸುಗ್ರೀವನ। ಬಳಿಯೊಳಗಿಳಿಸಿದನಾದರಿಸಿ ॥

ಆಗ—

✓ಚೌ॥ ವಾರಿಜಾರಿಯ ಕಂಡ ಬಾಲಚ-ಕೋರನಂತಾನಂದದಿ। ವಾರಿದವ ನೆರೆ ಕಂಡು ಕುಣಿವನ-ಯೂರವೋ ಎಂಬಂದದಿ ॥ ಸೂರನನು ಕಂಡೊಡನೆ ನಲಿವ ರ-ಥಾಂಗಪಕ್ಷಿಗಳಂದದಿ। ವೀರರಾಘವಗೆರಗಿದನು ಸು-ಗ್ರೀವನತುಲಾನಂದದಿ ॥

✓ಸಾ॥ ಯೋಗಕ್ಷೇಮದ ಮಾತನಾಡುತನು। ರಾಗದಿಂದ ಸುಗ್ರೀವ ॥ ಆಗ ಸೀತೆಯಾಭರಣದ ಗಂಟನು। ಬೇಗ ತಂದ ಕಪಿದೇವ ॥

ಅದನ್ನು ನೋಡಿ ರಾಮನು—

ಶ್ಲೋ॥ ಪ್ರತ್ಯರ್ಪಿತಾನಾಂ ಕಪಿಪುಙ್ಗವೇನ। ರಾಮಃ ಸ್ವಕಾನ್ತಾಧೃತ ಭೂಷಣಾನಾಮ್ ॥ ಸಂಸ್ಕಾರಹೈನ್ಯಾತ್ಪರಿಧೂಸರಾಣಾಮ್। ಪ್ರಕ್ಷಾಲನಂ ಬಾಷ್ಪಜಲೈಶ್ಚಕಾರ ॥ —(ರಾ.ಚಂ)

ಅ॥ ಸುಗ್ರೀವನು ತಂದು ಒಪ್ಪಿಸಿದಂಥ, ತನ್ನ ಹೆಂಡತಿ ಧರಿಸಿದಂಥ ಮತ್ತು ಸಂಸ್ಕಾರವಿಲ್ಲದ್ದರಿಂದ ಮೇಲೆ ಧೂಳು ಕೂತಿರುವಂಥ ಒಡವೆಗಳನ್ನು ರಾಮನು ತನ್ನ ಕಣ್ಣೀರಿನಿಂದ ತೊಳೆದನು.

ಮತ್ತು ಅವು ಸೀತೆಯವೆಂಬುದನ್ನು ಲಕ್ಷ್ಮಣನಿಗೆ ಗುರ್ತಿಸಹೇಳಲು ಲಕ್ಷ್ಮಣನು ಹೇಳುತ್ತಾನೆ—

ಶ್ಲೋ॥ ನಾಹಂ ಜಾನಾಮಿ ಕೇಯೂರೇ ನಾಹಂ ಜಾನಾಮಿ ಕುಣ್ಡಲೇ। ನೂಪುರೇ ತ್ವಭಿಜಾನಾಮಿ ನಿತ್ಯಂ ಪಾದಾಭಿವನ್ದನಾತ್ ॥ —(ಅ.ರಾ)

ಅ|| ನನಗೆ ವಂಕಿಗಳ ಗುರ್ತೂ ಇಲ್ಲ; ನನಗೆ ಕರ್ಣಾಭರಣಗಳ ಗುರ್ತೂ ಇಲ್ಲ; ನಿತ್ಯವೂ ಪಾದಗಳಿಗೆ ನಮಸ್ಕಾರ ಮಾಡುತ್ತಿದ್ದದ್ದರಿಂದ ಕಾಲುಂಗುರಗಳ ಗುರ್ತು ಚೆನ್ನಾಗಿದೆ.

ಹೀಗೆ ಗುರ್ತಾಗುತ್ತಲೆ ರಾಮನು ಚೆನ್ನಾಗಿ ದುಃಖಿಸಿ—

ದಿಂ|| ಹನುಮನಗ್ನಿ ಜ್ವಾಲೆಯನು ಸಿದ್ಧಮಾಡೆ। ಅನುವಿನಿಂದಂ ಸುಗ್ರೀವ ನೊಡನೆ ಕೂಡೆ ॥ ಇನಕುಲೋತ್ತಂಸಂ ಸಖ್ಯವನು ಮಾಡಿ । ಮನದಿ ತಾಳ್ದಂ ಹರ್ಷವನು ಧೈರ್ಯಗೂಡಿ ॥

ಸೀತೆಯನ್ನು ಹುಡುಕುವದಕ್ಕೆ ಸಹಾಯಮಾಡುತ್ತೇನೆಂದು ಮಾತುಕೊಟ್ಟು ಸುಗ್ರೀವನು ತನ್ನ ವೃತ್ತಾಂತವನ್ನು ಹೇಳಿಕೊಳ್ಳುತ್ತಾನೆ—

ಕೀ|| ಬಲುಮೆಯಿಂದಲಾ ವಾಲಿಯು ಎನ್ನಯ। ಲಲನೆಯ ಕೊಂಡೋಡಿ ಸಲೆನ್ನ ॥ ಗಳಿಲನಿಲ್ಲಿ ಬಂದಿಹೆನನಿಂ ನಾಂ। ತಳೆಯಲಾರೆನೀ ಪರಿ ಬನ್ನ ॥

ಇಷ್ಟು ಹೇಳುತ್ತಲೇ—

ಶ್ಲೋ|| ಮಿತ್ರದುಃಖೇನ ಸಂತಪ್ತೋ ರಾಮೋ ರಾಜೀವಲೋಚನಃ। ಹನಿಷ್ಯಾಮಿ ತವ ದ್ವೇಷ್ಯಂ ಶೀಘ್ರಂ ಭಾರ್ಯಾಪಹಾರಿಣಮ್। ಇತಿ ಪ್ರತಿಜ್ಞಾಮಕರೋತ್ಸುಗ್ರೀವಸ್ಯ ಪುರಸ್ತದಾ ॥ —(ಅ.ರಾ)

ಅ|| ಗೆಳೆಯನ ದುಃಖದಿಂದ ಸಂತಾಪಗೊಂಡ ಕಮಲನಯನನಾದ ರಾಮನು "ನಿನ್ನ ಹೆಂಡತಿಯನ್ನು ಅಪಹರಿಸಿರುವ ಶತ್ರುವನ್ನು ಬೇಗ ಕೊಲ್ಲುತ್ತೇನೆ" ಎಂದು ಸುಗ್ರೀವನ ಮುಂದೆ ಆಗ ಭಾಷೆಯನ್ನು ಮಾಡಿದನು.

ಆ ಸಮಯದಲ್ಲಿ ಸುಗ್ರೀವನ ನಂಬಿಕೆಗಾಗಿ ಅವನು ಮಾಡಿದ ಮಹತ್ಕಾರ್ಯಗಳೇನೆಂದರೆ—

ಸಾ|| ಆದಕೆ ಸಂಶಯಿಸೆ ದುಂದುಭಿಶಿರವನು। ಪದದಿಂದೆತ್ತಿ ಬಿಸಾಟು ॥ ಚದುರಿಂದೊಕ್ಕಣೆಯಿಂದೇಳ್ತಾಳವ। ಸದೆದು ತೋರಿಸಿದನಘಟು ॥

ಇದರಿಂದ ವಿಶ್ವಾಸವನ್ನು ಹೊಂದಿದ ಸುಗ್ರೀವನ ಗೆಳೆತನವು ಒಳ್ಳೆ ರೂಢಮೂಲವಾಯಿತು. ಹೀಗೆ ವಿಶ್ವಾಸದಿಂದ ಕೂಡಿದ ಮೈತ್ರಿಯಾಗಬೇಕೆಂದೇ ಪೀಠಿಕೆಯಲ್ಲಿ "ಗೆಳೆತನವನು ತಮ ತಮ್ಮೊಳು" ಎಂದು ಮೊದಲಾಗಿರುವ ನುಡಿಯು ಸೂಚಿಸುವದು. ಇಲ್ಲಿ ಸುಗ್ರೀವನು ಮಾತ್ರ ರಾಮನನ್ನು ಪರೀಕ್ಷೆಮಾಡಿ ವಿಶ್ವಾಸಗೊಂಡನು. ರಾಮನು ಸುಗ್ರೀವನಿಂದ ತನ್ನ ಕಾರ್ಯವಾದೀತೆಂಬದನ್ನೇನೂ ಪರೀಕ್ಷೆಮಾಡಲಿಲ್ಲ. ಏಕೆಂದರೆ ಅವನಿಗೆ ತನ್ನ ಕಾರ್ಯದ ಸಾಧನೆಗೆ ತನ್ನ ಸಾಮರ್ಥ್ಯವೇ ಸಾಕಾಗಿತ್ತು. ಅದಕ್ಕೆ ಸ್ವಲ್ಪ ನೆರವು ಮಾತ್ರ ಬೇಕಾಗಿತ್ತು. ಆದ್ದರಿಂದ ಅವನೇನೂ ಪರೀಕ್ಷೆಮಾಡಲಿಲ್ಲ. ಇರಲಿ. ಅಂತು ಇಬ್ಬರಿಗೂ ವಿಶ್ವಾಸವೇನೋ ಉಂಟಾಯಿತು.

ಶ್ಲೋ|| ಸಾ ಭಾರ್ಯಾ ಯಾ ಪ್ರಿಯಂ ಬ್ರೂತೇ ಸ ಪುತ್ರೋ ಯತ್ರ ನಿರ್ವೃತಿಃ। ತನ್ಮಿತ್ರಂ ಯತ್ರ ವಿಶ್ವಾಸಃ ಸ ದೇಶೋ ಯತ್ರ ಜೀವ್ಯತೇ ॥ —(ಸು)

ಅ|| ಪ್ರಿಯವನ್ನು ಹೇಳುವವಳೇ ಹೆಂಡತಿ; ಸುಖವನ್ನು ಕೊಡುವವನೇ ಮಗ; ವಿಶ್ವಾಸವುಳ್ಳವನೇ ಮಿತ್ರ; ಜೀವನ ನಡೆಯುವ ಕಡೆಯೇ ದೇಶ.

ಹೀಗೆ ವಿಶ್ವಾಸವನ್ನು ಹೊಂದಿರುವ ಸುಗ್ರೀವನಿಗೆ ರಾಮನು ಹೇಳಿದ್ದೇನೆಂದರೆ—

✓ದಿಂ॥ ಕರೆಯು ಹೋಗೈ ಅಣ್ಣನನು ಯುದ್ಧಕಾಗಿ। ದೊರೆಯು ಗೈವೆಂ ಪತ್ನಿ ಯನು ಭೋಗಕಾಗಿ ॥ ದೊರೆಯು ಗೈವೆಂ ನಿನ್ನನ್ನು ರಾಜ್ಯಕಾಗಿ। ಧರೆಯೊಳಾ ಅಣ್ಣಂ ರಣದಿ ಸಾಯಲಾಗಿ ॥

ಟಿ॥ (ಪತ್ನಿಯನ್ನು) ದೊರೆಯು ಗೈವೆಂ—ಪಡೆಯುವಂತೆ ಮಾಡುವೆನು. (ನಿನ್ನನ್ನು) ದೊರೆಯು ಗೈವೆಂ—ರಾಜನನ್ನಾಗಿ ಮಾಡುವೆನು.

ವಾಲಿಯ ವಧೆಗಾಗಿ ಸುಗ್ರೀವನಿಗೆ ಒಳ್ಳೆಯ ಸಹಾಯ ದೊರೆತಂತಾಯಿತು.

ಶ್ಲೋ॥ ಮಹದಾಧಾರದಾನಾಯ ಮಹಾನ್ತೋಽರ್ಹನ್ತಿ ನೇತರೇ। ಅಚ ಲಾಧಾರಿಣೋ ನೂನಮಚಲಾ ಏವ ಕೇವಲಮ್ ॥ —(ಸು.ಲಾ)

ಅ॥ ದೊಡ್ಡದಕ್ಕೆ ಆಧಾರರಾಗುವದಕ್ಕೆ ದೊಡ್ಡವರೇ ಯೋಗ್ಯರು; ಉಳಿದವರಲ್ಲ. (ಅಚಲಾ) ಭೂಮಿಯನ್ನು ಹೊರುವದಕ್ಕೆ (ಅಚಲಾ) ಪರ್ವತಗಳೇ ತಕ್ಕವು.

ಹೀಗೆ ಯೋಚಿಸಿ ಅವನು ಕಿಷ್ಕಿಂಧೆಯ ಬಳಿಗೆ ಹೋಗಿ ಆರ್ಭಟಿಸಿ ವಾಲಿಯನ್ನು ಕರೆಯುತ್ತಾನೆ—

ನೋಟು—ರೂಪಕ

ಬಾರೊ ಬಾರೆಲೋ। ಚೋರ ವಾಲಿಯೇ ॥ ಸಾರಿ ನೋಡೆಂದು ನನ್ನ। ಧೀರ ತನವನು ॥ ೧ ॥ ನಾನು ಬದುಕಿರೆ। ನನ್ನ ಪತ್ನಿಯ ॥ ನೀನು ಭೋಗಿಸಿದ ಫಲವ। ನಾನು ತೋರ್ಪೆನು ॥ ೨ ॥ ಧರ್ಮಮಾರ್ಗವ। ಮೀರಿ ನಡೆಯಲು ॥ ಪೇರ್ಮೆ ಯೆನಿಸಿ ಬಹಳ ದಿವಸ। ಬಾಳಲೀಯದು ॥೩॥ ಇಂದು ನಿನ್ನಯ। ಸರ್ವಭಾಗ್ಯವು ॥ ಸಂದಿ ಹೋಯಿತೆಂದು ನೀನು। ಚಂಪದಿಂ ತಿಳಿ ॥ ೪ ॥

ಸುಗ್ರೀವನ ಕೂಗನ್ನು ಕೇಳಿ ಆಶ್ಚರ್ಯದಿಂದಲೂ ರೋಷದಿಂದಲೂ ಕೂಡಿದ ವಾಲಿಯು ಬಂದು ಯುದ್ಧವನ್ನು ನಡೆಸುತ್ತಿರಲು—

ಕಂ॥ ಅಗ್ರಭವಾನುಜರೊಂದೇ। ವಿಗ್ರಹವೋ ಎಂಬೊಲಂದು ನಿಂದಿರೆ ರಣ ದೊಳ್ ॥ ನಿಗ್ರಹಿಸಲ್ಕಾರದೆ ನಾ। ನಾಗ್ರದೊಳಂಗುಲಿಯ ನಿಟ್ಟು ರಾಘವ ನಿರ್ದಂ ॥ —(ಹ.ರಾ)

ಇದರಿಂದ ಸೋತು ಹಣ್ಣಾದ ಸುಗ್ರೀವನು ಹಿಂದಕ್ಕೋಡಿಬಂದು ರಾಮನಿಗೆ ಹೇಳಿದ್ದು—

✓ಕೀ॥ ಕೊಲ್ಲಲಿಚ್ಛೆಯಿರಲೆನ್ನನು ನೀನೇ । ಕೊಲ್ಲಬಾರದೇತಕೆ ದೇವ? ॥ ಕೊಲ್ಲಿಸಬಹುದೇ? ವಾಲಿಯ ಕೈಯಿಂ। ಬಲ್ಲೆನೀಗ ನಿನ್ನಯ ಭಾವ ॥

ಆಗ ರಾಮನು ತನಗೆ ವಾಲಿಯು ಗುರ್ತು ಸಿಕ್ಕದೆ ಹೋದ ಸಂಗತಿಯನ್ನು ಹೇಳಿ—

✓ಸಾ॥ ಅನುಜನಾದ ಲಕ್ಷ್ಮಣನಿಂ ಹಾಕಿಸಿ । ದನು ಸುಗ್ರೀವಗೆ ಮಾಲೆ; ॥ ಅನುವಿಂ ವಾಲಿಯ ಕರೆಯಲು ಕಳುಹಿಸಿ। ದನು ರಾಘವನಾ ವೇಳೆ ॥

ಮತ್ತೆ ಅವನು ಹೋಗಿ ಕರೆಯುತ್ತಲೇ ಸಿದ್ಧನಾದ ಪತಿಯನ್ನು ನೋಡಿ ಹೆಂಡತಿಯಾದ ತಾರೆ ಹೇಳುತ್ತಾಳೆ—

ಕಮಾಚು—ಆದಿತಾಳ

ಹೋಗಬೇಡವೊ। ಪ್ರಾಣೇಶನೆ ॥ ಪ ॥ ಈಗಲೆ ಸೋತವ ಬೇಗ ಮತ್ತೆ ಕರೆ। ವಾಗ ನೀನು ಪುಂ। ದಾಗುವದರಿಯದೆ ॥ಅ.ಪ॥ ರಾಮನಂತೆ, ರಣಭೀಮ ನಂತೆ, ಸು। ಪ್ರೇಮದಿ ಗೆಳೆತನ ಮಾಡಿಹನಂತೆ ॥ ೧ ॥ ನಿನ್ನ ಕೊಲ್ಲುವೊಡೆ ಬಲ್ಲಿದ ನಂತೆ। ಮುನ್ನಮೆ ಮಾತನು ಕೊಟ್ಟಿಹನಂತೆ ॥ ೨ ॥ ದೇವನಂತೆ, ಸುಗ್ರೀವ ಮುಖ್ಯರನು। ಕಾವನಂತೆ ಜನನಾಯಕನಂತೆ ॥ ೩ ॥

ಅದಕ್ಕೆ ವಾಲಿಯ ಉತ್ತರ—

ಶಂಕರಾಭರಣ—ಅಟತಾಳ

ತಡೆಯಬೇಡ। ಬೆಡಗಿನ ಬಾಲೆ ॥ ಪ ॥ ನುಡಿಯಲು ಸಲ್ಲದ। ನುಡಿಯಿದು ಕೇಳೆ ॥ ಅ.ಪ. ॥ ದೇವದೈತ್ಯರ್ಕಳ । ಭಾವಕೆ ಬೆದರದ ॥ ಕೋವಿದನಲ್ಲವೆ!। ಜೀವ ಗಳ್ಳನೆ ನಾನು? ॥ ೧ ॥ ಬರಲಿ ಬೆಂಬಲವೆಲ್ಲ। ತರಿವೆನವರನೆಲ್ಲ ॥ ಬರಿಮಾತಿಸಿಂ ಸಿನ। ಗೊರೆಯುಲು ಫಲವಿಲ್ಲ ॥ ೨ ॥ ಧುರಕೆಂದು ಕರೆದರೆ। ಬರಲಾರೆನೆಂದರೆ ॥ ಧರೆಯೆಲ್ಲ ನಗದೇನೆ?। ಸರಸಿರುಹಾಂಬಕಿ ॥ ೩ ॥

ಹೀಗೆಂದು ವಾಲಿ ಬಂದು ಸುಗ್ರೀವನೊಡನೆ ಯುದ್ಧಮಾಡುತ್ತಾನೆ—

✓ ರ॥ ಅಲುತ ಕೈಕೊಂಡರು ಯುದ್ಧವನು। ವಾಲಿಯು ಸುಗ್ರೀವನು ॥ಪ॥ ನೋಡಿದರವರೊಬ್ಬರನೊಬ್ಬರನು। ಮಾಡಿ ರಣದ ಬಲು ಸನ್ನಾಹವನು। ಕರಕರ ಕಡಿಯುತ್ತಲಿ ಹಲ್ಲುಗಳ। ಭರದಿಂ ನೋಡುತ ಮರಮುಂಡಿಗಳ। ಸಿಟ್ಟಿನಿಂದ ಸಿಟ್ಟಿಸಿರನು ಬಿಡುತ। ಪಟ್ಟ ಹಿಡಿಯುವೊಡೆ ಹೋರಾಡುತ್ತ। ಜ್ವಲಿಸುತ್ತಿರಲ ಗ್ನಿಯುವೋಲ್ದೇಹ। ಬಲಿಯುತ್ತಿರೆ ಗೆಲ್ಲುವ ಬಲು ದಾಹ। ಕಣ್ಣುಗಳೆರಡೂ ಕೆಂಪಾ ಗಿರಲು। ತಿಣ್ಣವಾದ ಭುಜ ಕಂಪಿಸುತಿರಲು। ಒಬ್ಬರನೊಬ್ಬರು ಹೀಯಾಳಿಸುತ। ನಿರ್ಭರದಿಂ ಮುಷ್ಟಿಯ ತೋರಿಸುತ। ಕಾಯವೆಲ್ಲ ಜರ್ಝರವಾಗಿರಲು। ಗಾಯ ದಿಂದ ರಕ್ತವು ಬರುತಿರಲು। ಸಾಲವೃಕ್ಷಗಳ ಕಿತ್ತೈತರುತ। ಮೇಲೆ ವೇಗದಿಂದ ಲಿ ಜಸುಡುತ್ತ । ಕೆಡಹಲೆಂದು ಹಂಚಿಕೆಗೈವುತ್ತ । ಕೊಡಹಲೆಂದು ಯತ್ನವ ಮಾಡುತ್ತ । ಸುಗ್ರೀವನು ಗೆಲ್ಲುವನೊಮ್ಮೊಮ್ಮೆ । ಉಗ್ರವಾಲಿ ಗರ್ಜಿಪ ನೊಮ್ಮೊಮ್ಮೆ ॥

ಆದನ್ನು ನೋಡಿ ರಾಮನು ಮೆಚ್ಚಿದ್ದೆಂತೆಂದರೆ—

✓ ಚೌ॥ ಹರಿಹಿರಣ್ಯಕಶ್ಯಪುಗಳೆದುರಿಪ—ಪರಿಯನಿದು ವಿಚಾರಿಸುವದು। ಸುರ ಪಜಂಭಾಸುರರ ಸಂಗರ–ದಿರವನಿದು ಮರೆಸಿರ್ಪುದು ॥ ಹರನ ಕೆಣಕಿರ್ದಂಧಕಾ ಸುರ–ಬೆರಗುಪಡುವಂತಿರುವದು। ಧರೆಯೊಳೀ ಸೋದರರ ಯುದ್ಧಕೆ ಸರಿಯೆ ಇಲ್ಲೆನಿಸಿರುವದು ॥

ಇನ್ನು ವಾಲಿಯ ವಧೆಗೆ ಸಮಯವೆಂದು ಯೋಚಿಸಿದ ರಾಮಚಂದ್ರನು ಮರದ ಮರೆಯ ಲ್ಲಿದ್ದು ಧರ್ಮಸೂಕ್ಷ್ಮವನ್ನು ನೆನಪಿಗೆ ತಂದುಕೊಳ್ಳುತ್ತಾನೆ—

ಷ॥ ಮುಳಿದು ವೈರಿಪುಸಾರ್ಜವದಲಾ । ಗಲಿಯುನಾರ್ಜವದಿಂದಲಾಗಲಿ । ಸಲೆ ಕೆಡಿಸಬೇಕಲ್ಪನವನೆಂದುಳುಹುವರೆ ನೃಪರು? ॥ ಜ್ವಲಸ, ವಿಷ–ವೈರಿಯು ಸಮಾನವು; । ತಿಳಿಯಲಲ್ಪಗಳಾಗಿಹವು; ವೆ । ಗ್ಗಳಿಸಿ ಹಾನಿಯು ಮಾಡುವವು; ಭೂಪಾಲ ಕೇಳೆಂದ ॥ —(ಕ.ಭಾರ)

ಮುಂದೆ ಆದದ್ದೇನೆಂದರೆ—

✓ ಕೀ॥ ಉತ್ತಮವಾದೊಂದಂಬನು ರಾಮನು । ಕಿತ್ತು ಹೂಡಿ ಬಿಡೆ ಕ್ಷಣ ದೊಳಗೆ ॥ ಒತ್ತರದಿಂ ಮೂರ್ಛೆಯೊಳಾ ವಾಲಿಯು । ಸುತ್ತಿ ಸುತ್ತಿ ಬಿದ್ದನು ಧರೆಗೆ ॥

ಆ ನೋಟವನ್ನು ಕವಿ ವರ್ಣಿಸಿರುವದೇನೆಂದರೆ—

ಶ್ಲೋ॥ ಶ್ರೀರಾಮಬಾಣರವಿನಾ । ಸ್ಯಸ್ಯ ಚ ತಾರಾಧಿಪಸ್ಯ ಸಂಸರ್ಗಾತ್॥ ಚಿತ್ರಂ ಚಿತ್ರಮಿದಾನೀ । ಮುಭವದಿಯಂ ಪೂರ್ಣಿಮಾಪ್ಯಮಾವಾಸ್ಯಾ ॥ —(ರಾ.ಚ.ಚಂ)

ಅ॥ ರಾಮಬಾಣವೆಂಬ ಸೂರ್ಯನು ತಾರೆಯ ಗಂಡನಾದ ವಾಲಿಯೊಡನೆ ಸಂಬಂಧಗೊಂಡದ್ದರಿಂದ ನಕ್ಷತ್ರಗಳ ಒಡೆಯನಾದ ಚಂದ್ರನೊಡನೆ ಸಂಬಂಧಗೊಂಡಂತಾಗಿ ಆದಿನ ಪೂರ್ಣಿಮೆಯಾಗಿದ್ದರೂ ಅಮಾವಾಸ್ಯೆಯಾದದ್ದು ಬಹಳ ವಿಚಿತ್ರವು.

ಆಮೇಲೆ ಮೂರ್ಛೆಯನ್ನು ತಿಳಿದು ಕಣ್ಣು ಬಿಟ್ಟ ವಾಲಿಯು ಮರದ ಮರೆಯಲ್ಲಿದ್ದ ರಾಮನನ್ನು ಕಂಡು ಜರಿಯುತ್ತಾನೆ—

ಮಧ್ಯಮಾವತಿ — ಅಟತಾಳ

ನ್ಯಾಯವೇನಿದು ರಾಮ? । ನೀನೆನ್ನ ಕೊಂದುದು । ಮಾಯಕಾರರ ನೇಮ॥ ಅಲ್ಲವೆ ವಿಚಾರಿಸೆ ! ರಾಯರೊಳು ನಿಸ್ಸೀಮ । ರಾದರಿಗೆ ಸರಿಯೇ? ॥ ಪ ॥ ಬಾಯಮಾತಿನ್ನೇತಕೆನ್ನ ಸ । ಹಾಯಪನು ಜಯಿಸಿದರೆ ನಿನ್ನಯ । ಜಾಯೆಯನು ನಾನೀಕ್ಷಣದಿ ತಂ । ದೀಯ ಬಲ್ಲುದ ನೀನರಿಯೆ ಹಾ! ॥ ಅ.ಪ ॥ ಏನ ಮಾಡಿದೆ ನಾನು । ನಿನಗಹಿತವನ್ನು । ಜಾಣನಲ್ಲವೊ ನೀನು । ಸಂಬಂಧವಿಲ್ಲದೆ ಪ್ರಾಣ ಕಳೆಯುವದೇನು? । ಇಂತಿದೊರ್ಡಿನ್ನು । ಮಾನಿತರ ಪಥವನ್ನು । ಬಿಟ್ಟೆಲ್ಲವನ್ನು ॥ ಮಾಣದಾಹಾರಕೆ ನಿಷಿದ್ಧದ । ಹೀನಮೃಗವಾದೆನ್ನನೀ ಪರಿ । ಕಾಣದಂತಿರೆ ಹೊಡೆದು ಬೇಟೆಯ । ಜಾಣತನವನು ತೋರಿಕೊಂಡೆಯ? ॥ ಕಾಣೆ ನಾ ನಿನ್ನಲ್ಲಿ ಗುಣವನು । ಕ್ಷೋಣಿಯೊಳು ನೀ ಕ್ಷತ್ರಕುಲದೊಳು । ಬಾಣವಿದ್ಯದಿ ಜನರ ಗಂಟಲ । ಗಾಣವಾಗುವದಾವಧರ್ಮವು ? ॥

ಲೋಕದಲ್ಲಿ ಜನರನ್ನು ಮೆಚ್ಚಿಸುವದಸಾಧ್ಯವೆಂದು ಈ ಸಂದರ್ಭಕ್ಕೊಪ್ಪುವಂತೆ ನೀತಿಶಾಸ್ತ್ರಕಾರರು ಆಡಿರುವದೇನೆಂದರೆ—

ವೃ॥ ನಳಿನಾಪ್ತಂ ನಿಜಕಾಂತಿಯಿಂದೆ ತಮಮಂ ತೂಳ್ದಟ್ಟಿ ಕಣ್ಗಾಣದೀ । ನೆಲನಂ ಕಾಣಿಸಿ ಲೋಕಬಂಧುವೆನುತಂ ಪ್ರಖ್ಯಾತಿಯಂ ತಾಳ್ದಿಯುಂ ॥ ಪಳಿ

ಗುಂ ಗೂಗೆಗಳರ್ಕನಂ ಪಗಲಿನೊಳ್ ಕಣ್ಗಾಣದಾ ಖೇದದಿಂ | ನೆಲನಂ ಮೆಚ್ಚಿ ಸಲಪ್ಪುದೇ? ಯದುಗಿರಿ ಶ್ರೀಚೆಲ್ವನಾರಾಯಣಾ ॥ —(ಶ್ರೀ.ಚೆ.ಶ)

**ಟಿ॥ ತೂಳ್ದಟ್ಟಿ—ಕತ್ತುಹಿಡಿದು ದಬ್ಬಿ. ತಾಳ್ದಿಯುಂ—ಹೊಂದಿದರೂ.**

**ಜನರು ಏಕೆ ದೂರುವರೆಂದರೆ—**

ಶ್ಲೋ॥ ದಹ್ಯಮಾನಾಃ ಸುತೀವ್ರೇಣ ನೀಚಾಃ ಪರಯಶೋಽಗ್ನಿನಾ | ಅಶಕ್ತಾಸ್ತತ್ಪದಂ ಗನ್ತುಂ ತತೋ ನಿನ್ದಾಂ ಪ್ರಕುರ್ವತೇ ॥ —(ಸು)

**ಅ॥ ನೀಚರು ಮತ್ತೊಬ್ಬರ ಯಶಸ್ಸೆಂಬ ಒಳ್ಳೇ ತೀವ್ರವಾದ ಬೆಂಕಿಯಿಂದ ತಾಪವನ್ನು ಹೊಂದಿ ಅವರ ಸ್ಥಿತಿಯನ್ನು ಪಡೆಯುವದಕ್ಕೆ ಕೈಲಾಗದೆ ಕೊನೆಗೆ ನಿಂದೆಯನ್ನು ಮಾಡುತ್ತಾರೆ.**

**ಆ ನಿಂದೆಯನ್ನು ಕೇಳಿ ರಾಮಚಂದ್ರನು ವಾಲಿಗೆ ಉತ್ತರವನ್ನು ಹೇಳುತ್ತಾನೆ—**

**ಮಧ್ಯಮಾವತಿ—ಅಟತಾಳ**

ತಿಳಿಯದಾಡಲು ಸಲ್ಲ | ಹೇ ವಾಲಿ ಧರ್ಮದ | ತಿಳವ ನೀ ತಿಳಿದಿಲ್ಲ | ಕಪಿಯಾದ ಕಾರಣ | ಗಳಹುತಿಹೆ ಬರಿ ಸೊಲ್ಲ | ತಿರುಳೇನು ಇಲ್ಲ ॥ ಪ ॥ ಖಳ ಶಿರೋಮಣಿ ರಾವಣಗೆ ನೀ | ಗೆಳೆಯನೆಂದೇ ನಿನ್ನ ತಮ್ಮನ | ಗೆಳೆಯತನವನು ಮಾಡಿದೆನು ದೋ | ರ್ಬಲದಿ ಪ್ರಿಯಪತ್ನಿಯನು ಪಡೆವೊಡೆ ॥ಅ.ಪ॥ ಬದುಕಿರಲು ಸಹಜಾತ | ನೀನವನ ಪತ್ನಿಯ | ಮುದದೊಳನುಭವಿಸಾತ | ನಿನ್ನಂಥ ದುಷ್ಟರ ನಡೆಯಲಪ್ಪೆನು ಖ್ಯಾತ | ಅರಸಾದ ನಾನೀ | ವಿಧದೊಳಲ್ಲವು ಭೀತ | ಬಿಡು ನಿನ್ನ ಮಾತ ॥ ಚದುರ ವೀರರಿಗೆದುರ ನಿಲ್ವುದು | ಹದವು; ಹುಲುಕಪಿಮಹನ ಪಾಪಿಯ | ಎದುರಿಸುವದಪಮಾನವದರಿಂ | ಹುದುಗಿ ಬೇಟೆಯನಾಡಿದೆನು ನಾ ॥ ವಧೆಯಿದೇಂ ಹಗೆತನದೊಳಲ್ಲವು | ವಧಿಸಿಹುದು ನೀಂ ಗೈದ ಪಾಪವ | ಇದನರಿಯದೇ ರಾಜನೆದುರಿಗೆ | ಒದರುವದು ಬಲುಪಾಪವಪ್ಪುದು ॥

**ಇದಕ್ಕೆ ಅರ್ಧಾಂಗೀಕಾರವನ್ನು ಮಾಡಿದ ವಾಲಿಯು—**

✓ಸಾ॥ ಆದುದಾಯಿತೀ ಬಾಣವ ತೆಗೆಯೆನೆ | ಮೋದದಿಂದ ಕೈಮುಟ್ಟಿ ॥ ಬಾಧೆಯ ತಪ್ಪಿಸೆ ಜ್ಞಾನಿವರ್ಗದೊಳ | ಗಾದನು ಕಪಿಗಳ ಜಟ್ಟಿ ॥

**ಆಗ ವಾಲಿಯು ಸುಗ್ರೀವನಿಗೆ ಹೇಳುತ್ತಾನೆ—**

✓ದಿಂ॥ ಎದುರು ನಿಂತವರುಬ್ಬಟೆಯ ಕೊಳ್ವ ಹಾರ | ಇದ ಸುರೇಂದ್ರಂ ಕೊಟ್ಟಿರ್ದನಂದು ಧೀರ ॥ ಇದನು ಕೊಳ್ತಮ್ಮ, ನಿನಗೆ ಎರೆದೆ ಧಾರೆ | ಮುದದಿ ನೀ ಧರಿಸ್ಯೆ ಎನಗೆ ಹರ್ಷ ವಿಾರೆ ॥

**ಹೀಗೆಂದು ಅವನಿಗೆ ಹಾರವನ್ನು ಕೊಟ್ಟು ರಾಮಚಂದ್ರನಿಗೆ ಹೇಳುತ್ತಾನೆ—**

ಷ॥ ಉಡಿಯುವೇ ತರು ಗಾಳಿಯಲಿ? ಗಿರಿ | ಕೆಡೆಯುವೇ ಸಿಡಿಲಿನಲಿ? ಈ ಕಡು | ಒಡಲು ಬೀಳಲಿಕಂಗಲಾಚಿದೆ ದೇವ ನಿನ್ನೊಡನೆ; ॥ ಹಿಡಿಯದೆನ್ನಪರಾಧ ವನು ಕೈ | ವಿಡಿದು ನಿನ್ನ ಪದಾರವಿಂದದ | ಎಡಗಿಸುವ ಘನಕೃಪೆಯನೆನ್ನಲಿ ಮಾಡಬೇಕೆಂದ ॥ —(ತೊ.ರಾ)

ಅವನು ಕೊನೆಯ ಪ್ರಾರ್ಥನೆಯನ್ನು ಮಾಡಿದ್ದೇನೆಂದರೆ—

ಶ್ರೀರಾಗ—ರೂಪಕ

ಶರಣಾಗತಪರಿಪಾಲಕ । ಕರುಣಾಕರ ಶ್ರೀರಾಮ ॥ ಪ ॥ ಸೆರಗೊಡ್ಡುತ್ತ ಬೇಡಿಕೊಂಬೆ । ಧರಣೀತನುಜಾಕಾಂತ ॥ ಅ. ಪ ॥ ನೆರೆವ ನಿನ್ನ ರೂಪವೆನ್ನ । ಎರಡೂ ನಯನಂಗಳಲ್ಲಿ ॥ ಪರಿಪೂರ್ಣವಾಗಿ ತುಂಬಿ । ಭರದಿಂ—ಮಿನುಗು—ತ್ತಿರುವಂ—ತೊಲಿ ನೀಂ । ಸರಸಿರುಹಾಂಬಕ ॥ ೧ ॥ ಎನ್ನ ಕಿವಿಯು ನಿನ್ನ ಕೀರ್ತಿ । ಯನ್ನೇ ಕೇಳುತ್ತಲಿ ॥ ನಿನ್ನ ಪದಾಂಬುರುಹದಲಿ । ಎನ್ನೀ—ಹಣೆ ತಾ—ನಿರುವಂ—ತೊಲಿಸೀ । ಸನ್ನುತಗುಣಗಣ ॥ ೨ ॥ ಎನ್ನ ಮೂಗು ನಿನ್ನ ಮಾಲ್ಯ । ವನ್ನೇ ಮೂಸುತ್ತಲಿ ॥ ನಿನ್ನ ಸುಪ್ರಸಾದದಿಂದ । ಎನ್ನೀ—ಜೀವನ—ವಿರುವಂ—ತೊಲಿಸೀ । ಚಿನ್ಮಯಮೂರುತಿ ॥ —(ಭಕ್ತಿ.ಗೀ)

ಈ ಪ್ರಾರ್ಥನೆಯನ್ನು ಮಾಡಿ ವಾಲಿಯು ತಣ್ಣಗಾದನು. ಅವನ ಪರಿವಾರದವರೆಲ್ಲ ಓಡಿ ಹೋದರು. ಹತ್ತುದಿಕ್ಕುಗಳೂ ಶೂನ್ಯವಾದವು. ಈ ಸ್ಥಿತಿಯಲ್ಲಿ ನೀತಿಶಾಸ್ತ್ರಕಾರರು ನೆನಪುಗೊಡುವದೇನೆಂದರೆ—

ವೃ॥ ಪಲಪಲರಿರ್ಪ ಮಂದಿರದೊಳಿರ್ದಪನೋರ್ವನೆಯೋರ್ವನಿರ್ಪ ತಾನ್ನಿಲಯದೊಳಿರ್ದಪರ್ಪಲಬರಂತ್ಯದೊಳೋರ್ವನುಮಿಲ್ಲಮಿಂತು ಚಂ। ಚಲತರರಪ್ಪ ಜೀವರನೆ ಕಾಯ್ಗುಳನಾಗಿಸುತಾಡುವಂ ಧರಾ । ಫಲಕದೆ ಧೀರಕಾಲವಿಭು ಚಿಮ್ಮು ತಿರುಳ್ವಗಲೆಂಬ ನೆತ್ತವುಂ ॥ —(ಭ.ವೈ)

ಇತ್ತ ವಾಲಿಯು ಮುಕ್ತನಾದ ಸುದ್ದಿಯನ್ನು ಕೇಳಿ ತಾರೆಯು ಬಂದು ನೋಡಿ ಗೋಳಾಡುತ್ತಾಳೆ—

ಪೀಲು—ಆದಿತಾಳ

ಹಾ! ಪ್ರಾಣನಾಥ, ಹಾ! ಜೀವಿತೇಶ್ವರಾ । ಈ ಪಾಪಿಗಿನ್ನು ಮುಂದೆ ಗತಿಯೇನು? ॥ ಪ ॥ ಹೋಗ ಬೇಡವೆಂದು । ಹೇಳಲಿಲ್ಲವೆ ನಾನು? ॥ ಹೀಗಾಗಬಹುದೇನೋ ಈಗೆನ್ನ ಕಣ್ಮುಂದೆ ॥೧॥ ಅಂಗದ ಚಿಕ್ಕವ । ಸಿಂಗಿತವರಿಯನು । ಸಂಗರದೊಳು ನೀನು । ಭಂಗಪಟ್ಟೆಯ ಅಯ್ಯೋ! ॥ ೨ ॥ ಎಲ್ಲಿ ರಾಮನು ಬಂದ! । ಎಲ್ಲಿ ತಮ್ಮನ ಚೆಂದ! ॥ ಕೊಲ್ಲಬಹುದೆ ನಿನ್ನ? । ಇಲ್ಲಿ ಬಿಡುತೆ ನನ್ನ ॥ ೩ ॥

ಆಕೆ ರಾಮಚಂದ್ರನನ್ನು ಕುರಿತು ಹೇಳಿದ್ದೇನೆಂದರೆ—

ಶ್ಲೋ॥ ಕ್ಷಿತಿಪತಿತನಯಾನಾಂ ಹನ್ತ! ಗರ್ಭೇಶ್ವರಾಣಾಮ್ । ಕಿಮು ನಿರವಧಿಮೌಗ್ಧ್ಯಂ ಶೌರ್ಯವಚ್ಚಸ್ಮಸಿದ್ಧಮ್ ॥ ಮಮ ಹೃದಿ ನಿರಪಾಯೇ ವರ್ತಮಾನೇ ಕಪೀನ್ದ್ರೇ । ರಘುವರ ಯದಮುಷ್ಮೈ ತಿಷ್ಠಸೇ ಚಾಪಪಾಣಿಃ (ರಾ.ಚಂ)

ಅ॥ ಗರ್ಭದಿಂದಲೂ ಐಶ್ವರ್ಯವಂತರಾಗಿರುವಂಥ ರಾಜಪುತ್ರರಿಗೆ ಶೌರ್ಯವು ಹೇಗೋ ಹಾಗೆ ಅಪಾರವಾದ ಮುಗ್ಧತೆಯೂ ಸ್ವಭಾವವೊ ಹೇಗೆ? ಹೆ, ರಾಮಚಂದ್ರ, ವಾಲಿಯು ನನ್ನ ಹೃದಯದಲ್ಲಿ ನಿರಪಾಯನಾಗಿ ಜೀವಿಸಿರುವಾಗ ನೀನು ಕೈಯಲ್ಲಿ ಧನುಸ್ಸಿದ್ದೂ ಏಕೆ ಸುಮ್ಮನಿದ್ದಿ?

✓ ಕೀ॥ ತಾರೆಯು ಗೋಳಿಸು ಕೇಳುತಲಾ ರಘು। ವೀರಸಂಗದನ ಪ್ಯೊಡವಿ॥ ತಾರೆಗೆ ಶಾಂತಿಯನಿತ್ತನು ತತ್ತ್ವವಿ। ಸಾರಿ ಪೊಗಳಲೆಲ್ಲಾ ಪೊಡವಿ ॥

ಆಮೇಲೆ ಸುಗ್ರೀವನು ಅಣ್ಣನ ವಧೆಗೆ ದುಃಖಿಸಲು ಲಕ್ಷ್ಮಣನು ಹೇಳುತ್ತಾನೆ.—

✓ ಸಾಂ॥ ಬಂಧುವಳಿದನೆಂದು ಶೋಕಿಸುವಾತನೆ । ಮುಂದೆ ತಾನಳಿವನು ಬಿಡದೆ ॥ ಬಂಧಕವಾದಾಶೆಯನು ಬಿಡದಜ್ಞರು ! ತಂದುಕೊಳ್ಳುವರು ದೇಹವನು ॥ —(ಮ.ಉ)

ಆಮೇಲೆ—

✓ ಸಾ॥ ರಾಮನಾಜ್ಞೆಯಿಂ ಸುಗ್ರೀವನು ತಾ । ನೇಮದೊಳಂಗದನಿಂದ ॥ ಆ ಮಹಾತ್ಮಗಂತ್ಯೇಷ್ಟಿಯ ಗೈಸುತ । ಪ್ರೇಮದೊಳವರೊಳು ನಿಂದ ॥

✓ ಕೀ॥ ರವಿಜಗೆ ರಾಜ್ಯಾಭಿಷೇಕವನು ಮೇ । ಣ್ಯುವರಾಜತ್ವವನಂಗದಗೆ ॥ ರವಿಕುಲಮಣಿಯನುಜನಿಂದ ಗೈಸಿದ। ನವರಳನತ್ಕೀರುತಿಯೊಡಗೆ ॥

ಗೆಳೆಯತನವು ಹೀಗಿರಬೇಕು—

ಶ್ಲೋ॥ವನ್ಯಾನಾಮಪಿ ಕೋಶೇಷು ಸುಹೃದಾಂ ಸ್ವೋದಯಾರ್ಥಿನಾಮ್ । ಅರ್ಪ್ಯತೇ ಸ್ವೋದಯಾದೇವ ಶ್ರೀಃ ಸೇಯಂ ಮಿತ್ರತಾ ಮತಾ ॥ —(ಸು.ಲಾ)

ಅ॥ (೧) ಏಳಿಗೆಯನ್ನು ಬಯಸಿ (ವನ್ಯಾನಾಂ) ನೀರಿನಲ್ಲಿ ಹುಟ್ಟಿದಂಥ ಗೆಳೆಯರಾದ ಕಮಲಗಳಿಗಾದರೂ(ಕೋಶೇಷು)ಆಗ ತಾನೆ ಅರಳುತ್ತಿರುವ ಮೊಗ್ಗಿನಲ್ಲಿ(ಸ್ವೋದಯಾದೇವ) ತನ್ನ ಉದಯದಿಂದಲೇ(ಶ್ರೀಃ)ಯಾವ ಕಾಂತಿಯನ್ನು ಕೊಡುತ್ತಾನೊ ಅದೇ(ಮಿತ್ರತಾ)ಸೂರ್ಯತ್ವ. (೨) ತಮ್ಮ ಏಳಿಗೆಯನ್ನು ಬಯಸಿ (ವನ್ಯಾನಾಂ) ಕಾಡಿನಲ್ಲಿರುವ ಗೆಳೆಯರಿಗಾದರೂ (ಕೋಶೇಷು)ಭಂಡಾರದಲ್ಲಿ (ಸ್ವೋದಯಾದೇವ) ತಮ್ಮ ಪ್ರಭಾವದಿಂದಲೇ ಯಾವ(ಶ್ರೀಃ) ಸಂಪತ್ತನ್ನು ಕೊಡುತ್ತಾನೊ ಅದೇ (ಮಿತ್ರತಾ) ಗೆಳೆತನವೆಂದಭಿಪ್ರಾಯ.

ಆಗ ವಾಲಿಯ ಭಂಡಾರವೆಲ್ಲಾ ಸುಗ್ರೀವನದಾಯಿತು.

ಶ್ಲೋ॥ ಯಾ ಸ್ವಸದ್ಮನಿ ಪದ್ಮೇಽಪಿ ಸನ್ಧ್ಯಾವಧಿ ವಿಜೃಮ್ಭತೇ । ಇನ್ದಿರಾ ಮನ್ದಿರೇಽನ್ಯೇಷಾಂ ಕಥಂ ತಿಷ್ಠತಿ ಸಾ ಚಿರಮ್ ॥ —(ಸು)

ಅ॥ ತನ್ನ ಮನೆಯಾದ ಕಮಲದಲ್ಲಿ ಕೂಡ ಸಂಧ್ಯಾಕಾಲದವರೆಗೆ ಇರುವ ಲಕ್ಷ್ಮಿಯು (ಕಾಂತಿಯು) ಮತ್ತೊಬ್ಬರ ಮನೆಯಲ್ಲಿ ಹೇಗೆ ನಿಂತಾಳು? (ಕಮಲಗಳ ಕಾಂತಿಯು ಸಂಜೆಯವರೆಗೆ ಮಾತ್ರ ಇರುವದು)

ಈ ಪ್ರಕಾರ ಮಿತ್ರನಾದ ಸುಗ್ರೀವನ ರಕ್ಷಣೆಯನ್ನು ಮಾಡಿದ್ದನ್ನು ಕಂಡು ಜನರು ರಾಮನನ್ನು ಹೊಗಳಿದ್ದೆಂತೆಂದರೆ—

ಶ್ಲೋ॥ ಮಲಿನಯಿತುಂ ಖಲವದನಮ್ । ವಿಮಲಯತಿ ಜಗನ್ತಿ ದೇವ ಕೀರ್ತಿಸ್ತೇ ॥ ಮಿತ್ರಾಹ್ಲಾದಂ ಕರ್ತುಮ್ । ಮಿತ್ರಾಯ ದ್ರುಹ್ಯತಿ ಪ್ರತಾಪೋಽಪಿ ॥ —(ಸು)

ಅ॥ ಹೆ, ದೇವ, ನಿನ್ನ ಕೀರ್ತಿಯು ಕೆಟ್ಟ ಜನರ ಮುಖವನ್ನು ಮಲಿನ ಮಾಡುವದಕ್ಕಾಗಿ ಜಗತ್ತನ್ನು ವಿಮಲವಾಗಿ ಮಾಡುತ್ತದೆ. ಮಿತ್ರನಾದ ಸುಗ್ರೀವನಿಗೆ ಸಂತೋಷವನ್ನುಂಟುಮಾಡುವದಕ್ಕಾಗಿ ನಿನ್ನ ಪ್ರತಾಪವು ಮಿತ್ರನೆನಿಸಿಕೊಂಡಿರುವ ಸೂರ್ಯನಿಗೆ ಪ್ರತಿಭಟಿಸುತ್ತದೆ.

ಇಷ್ಟಾಗುವಾಗ ಮಳೆಗಾಲ ಬಂದಿದೆ—

ಶ್ಲೋ॥ ಅಭಿಷಿಕ್ತೇ ತು ಸುಗ್ರೀವೇ ರಾಮಶ್ಯಾಮಪಯೋಮುಚಾ। ಅಭಿಷೇಕ್ತುಂ ಸ್ಥಿತಾ ಮೇಘಾಸ್ತನ್ಮಹೀಂ ಮಹಿಷೀಮಿವ ॥ —(ಶ್ರೀ.ರಾ)

ಅ॥ ರಾಮನೆಂಬ ಕರೀ ಮೋಡವು ಸುಗ್ರೀವನಿಗೆ ಅಭಿಷೇಕವನ್ನು ಮಾಡಲಾಗಿ ಮೇಘಗಳು ಅವನ ಮಹಿಷಿಯಾದ ಭೂದೇವಿಗೆ ಅಭಿಷೇಕಮಾಡುವಂತೆ ಕಾಣಿಸಿಕೊಂಡವು.

ಅದನ್ನು ಕವಿ ವರ್ಣಿಸಿರುವದೆಂತೆಂದರೆ—

ವೃ॥ ಗಗನಶ್ರೀಯುಟ್ಟ ನೀಲಾಂಬರಮೊ, ರವಿಸುಧಾಧಾಮಬಿಂಬಂಗಳಂ
ಮು। ತ್ತಿಗೆಯಂ ಮಾಳ್ಪಂಧಕಾರಪುಜಮೊ, ಸುರನದೀಸ್ನಾತದೇವಾಂಗನಾ ವೃ॥
ಷ್ಟಿಗಳದ್ವಾರ್ಬಿಂದುಚಂಚತ್ಕಚನಿಚಯಮೊ, ಜಂಭಾರಿಕುಂಭೀಂದ್ರದಾನಾಂ।
ಬುಗೆ ಪಾಯ್ವಿಂದಿಂದಿರಾಶ್ರೇಣಿಯೊ ಎನೆ ನೆರೆದತ್ತಭ್ರನೀಲಾಭ್ರಜಾಲಂ ॥
—(ರಾ.ಚ.ಪು)

ಟಿ॥ ಗಳದ್ವಾರ್ಬಿಂದು ...ಚಯಮೊ—ಉದುರುತ್ತಿರುವ ನೀರಿನ ಹನಿಗಳಿಂದ ಮಿರುಗುತ್ತಿರುವ ಮುಂಗುರುಳುಗಳ ಮೊತ್ತವೊ. ಇಂದಿಂದಿರಾ ಶ್ರೇಣಿ—ಭ್ರಮರಗಳ ಸಾಲು.

ಮಳೆಯು ಸರ್ವರಿಗೂ ಹಿತಕರವಾದದ್ದು—

ವೃ॥ ಮಳೆಯೇ ಸರ್ವಜನಾಶ್ರಯಂ; ಶಿವನೆ ದೇವರ್ಕಳ್ಗೆ ತಾನಾಶ್ರಯಂ;।
ಬೆಳೆಯೇ ಸರ್ವರ ಜೀವನಂ; ಬಡವನೇ ಸರ್ವರ್ಗೆ ಸಾಧಾರಣಂ; ॥ ಒಳಿಯೇ
ಸರ್ವವಿಭೂಷಣಕ್ಕೆ ಮೊದಲೈ; ಪುತ್ರೋತ್ಸವಂ ಸೂತ್ಸವಂ; । ಕೆಳೆಯೇ ಸರ್ವ
ರೊಳುತ್ತಮಂ ಹರಹರಾ! ಶ್ರೀಚೆನ್ನಸೋಮೇಶ್ವರಾ ॥ —(ಸೋ.ಶ)

ಆದರೆ ಅದು ರಾಮಚಂದ್ರನಿಗೆ ವಿರಹವ್ಯಥೆಯನ್ನು ಹೆಚ್ಚಿಸಿತು. ಇದು ಆ ಕಾಲದ ಸ್ವಭಾವವಾಗಿದೆ—

ಶ್ಲೋ॥ ದೋಷೋಪಚಯಸ್ತಾವ। ಜ್ವಘನ್ಯಕರ್ಮಣಿ ನರಂ ನಿಯೋಜ-
ಯತಿ ॥ ಸುದಿನಂ ತು ಶೌಚಕರ್ಮಣಿ। ಸದಸದ್ವಸ್ತುಸ್ವಭಾವ ಏವಾಯಂ ॥
—(ಸು.ಲಾ)

ಅ॥ ಹಗಲು ಪ್ರಜ್ವಲಿಸುತ್ತಿದ್ದರೆ ಅದು ಮನುಷ್ಯನನ್ನು ಒಳ್ಳೆ ಕರ್ಮದಲ್ಲಿ ತೊಡಗಿಸುತ್ತದೆ. ಕತ್ತಲೆ ಹೆಚ್ಚಿದ ಹೊತ್ತಾದರೆ ಅದು ಅವನನ್ನು ನೀಚಕರ್ಮದಲ್ಲಿ ಮುಂದುವರಿಸುತ್ತದೆ. (ಇಲ್ಲಿ ಮಳೆಗಾಲವು ಮೋಡಗಳಿಂದ ಕತ್ತಲೆ ಕವಿದಂತೆ ಇರುವದರಿಂದ ಅದು ರಾಮನಿಗೆ ವಿರಹವ್ಯಥೆಯನ್ನುಂಟುಮಾಡಿದ್ದು ಸಹಜವೆಂದರ್ಥ). ಒಳ್ಳೆ ಮತ್ತು ಕೆಟ್ಟ ವಸ್ತುಗಳ ಸ್ವಭಾವವೆ ಹೀಗೆ.

ಈ ಸಮಯದಲ್ಲಿ ಸೀತೆಯನ್ನು ನೆನೆಸಿಕೊಂಡ ರಾಮನು ರಾವಣನ ವಿಷಯದಲ್ಲಿ ಹಲ್ಲು ಕಡಿಯುತ್ತ ಹೇಳುತ್ತಾನೆ—

ಷ॥ ಕುಡಿಸುವೆನು ಕಡಲೇಳ ಸರಳಿನ । ಕಡೆಗೆ; ಕಮಲಭವಾಂಡಭಾಂಡವ । ನೊಡೆಪೆ; ಸುರನರನಾಗರಾಕ್ಷಸಕುಲವ ಸದೆಬಡಿವೆ; ॥ ಮಡದಿಯಿಲ್ಲದ ಬಳಿಕ ಲೋಕದ । ಗೊಡವೆಯೇತಕೆ ತನಗೆನುತ ಘುಡು । ಘುಡಿಸುತಿದ್ದನು ವಿಲಯ ರುದ್ರನ ಪರಿಯೊಳಾ ರಾಮಾ ॥ —(ರಾ.ಕ.ಕು)

ಆಗ ಲಕ್ಷ್ಮಣನು ಹೇಳಿದ್ದು—

✓ಸಾ॥ ಉಮ್ಮಳಿಸದಿರಣ್ಣನೆ ತಾ ಜರ್ವುದು । ಎಮ್ಮಯ ಕಾರ್ಯದ ಕಾಲ ॥ ಸುಮ್ಮನೀ ಪ್ರವರ್ಷಣಾದ್ರಿವಾಸವೇ । ಧರ್ಮವೆಸಿಪುದು ಸುಶೀಲ ॥

ಇದು ಧರ್ಮಾಭ್ಯುದಯಕ್ಕೆ ಪ್ರಶಸ್ತವಾಗಿರುವದೆಂತೆಂದರೆ—

ಷ॥ ಹರಿಯವೊಲು ಸುಮನೋನುರಾಗ । ಸ್ಫುರಿತ; ಶಂಕರನಂತೆ ನಾಗಾ । ಭರಣವಿಶ್ರುತ; ಪುಂಡರೀಕಾವಾಸ ಸರಸಿಯೊಲು; । ಸುರಭಿಪರಿವೃತ ಸುರಪ ನೊಲು; ಹಿಮ । ಕಿರಣನೊಲು ಮೃಗಶೋಭಿ; ತಟಿನೀ । ಪರನವೊಲು ರತ್ನಾಕರಂ ತಾನೆನಿಸಿತಾ ಕುಧರಾ ॥ —(ರಾ.ಕ.ಕು)

ಟಿ॥ ಸುಮನೋನುರಾಗಸ್ಫುರಿತ—ಹರಿಯು ದೇವತೆಗಳ ಪ್ರೀತಿಗೆ ಪಾತ್ರನಾದವನು; ಪರ್ವತವು ಹೂಗಳ ಮೇಲಿನ ಅನುರಾಗವನ್ನು ಹುಟ್ಟಿಸುವಂಥದ್ದು. ನಾಗಾಭರಣ—ಈಶ್ವರನು ಹಾವನ್ನು ಆಭರಣವಾಗಿ ಧರಿಸಿರುವನು; ಪರ್ವತಕ್ಕೆ ಹಾವುಗಳು ಆಭರಣಪ್ರಾಯವಾಗಿರುವವು. ಪುಂಡರೀಕಾವಾಸ—ಸರಸ್ಸು ಕಮಲಗಳಿಗೆ ಮನೆಯಾಗಿರುವದು; ಪರ್ವತವು ಹುಲಿಗಳಿಗೆ ಮನೆಯಾಗಿರುವದು. ಸುರಭಿಪರಿವೃತ—ಇಂದ್ರನು ಕಾಮಧೇನುವಿನಿಂದ ಕೂಡಿದ್ದಾನೆ; ಪರ್ವತವು ಸುವಾಸನೆಯಿಂದ ಕೂಡಿದೆ. ಮೃಗಶೋಭಿ—ಚಂದ್ರನು ಜಿಂಕೆಯ ಗುರ್ತಿನಿಂದ ಶೋಭಿಸುತ್ತಿದ್ದಾನೆ; ಪರ್ವತವು ಮೃಗಗಳಿಂದ ಶೋಭಾಯಮಾನವಾಗಿದೆ. ರತ್ನಾಕರಂ—ಸಮುದ್ರವು ರತ್ನಗಳ ಆವಾಸಸ್ಥಾನವಾಗಿದೆ; ಪರ್ವತವೂ ರತ್ನಗಳ ಆವಾಸಸ್ಥಾನವಾಗಿದೆ.

ಈ ಪರ್ವತದಲ್ಲಿ ವಾಸಮಾಡುತ್ತ ಆ ಕಾಲವನ್ನು ಸದ್ವಿನಿಯೋಗ ಮಾಡಿಕೊಳ್ಳಬೇಕೆಂದು ಲಕ್ಷ್ಮಣನು ರಾಮನನ್ನು ಕೇಳಿದ್ದೇನೆಂದರೆ—

ಕಂ॥ ತಾಮರಸೇಕ್ಷಣ, ಪದವಿನ । ತಾಮರಸಂದೋಹಮಕುಟತಟಜಟಿಲಿತವು ॥ ಕ್ಷ್ಮಾಮರಕತರುಚಿರಂಜಿತ । ತಾ ಮರದಂತೆ ಜಡನೆನಿಸಿದೆನಗೊಳ್ಪರಿವಂ॥ —(ಸೂ.ತಾ)

ಟಿ॥ ಜಟಿಲಿತ—ಕೆತ್ತಿರುವಂಥ. ತಾ—ಕೊಡು.

ನಾನು ಬಯಸುವ ಈ ಜ್ಞಾನೋಪದೇಶವು ಜನಮಂಡಲಿಗೆಲ್ಲ ಉಪಯೋಗವಾಗಬೇಕೆಂದು ಅವನು ಇನ್ನೂ ಕೇಳಿದ್ದೇನೆಂದರೆ—

ಕಂ॥ ಸತಿಸುತಬಾಂಧವಧನಪಶು । ತತಿಗಂ ವಶರಾಗಿ ಜಾತಿಧರ್ಮಮನುಳಿದುಂ ॥ ಮತಿಗೆಟ್ಟು ನಿರಯಕೈದುವ । ಪತಿತರ್ಗೆಂತಕ್ಕುಮೈದೆ ಮೋಕ್ಷಂ ಸುಪಥಂ? ॥ —(ಹ.ರಾ)

ಈ ಪ್ರಕಾರ ರಾಮಲಕ್ಷ್ಮಣರು ಪರಮಾರ್ಥವಿಚಾರತತ್ಪರರಾಗಿರಲು ಅತ್ತ ಸುಗ್ರೀವನು ತನ್ನ ಪತ್ನಿಯಾದ ರುಮೆಯನ್ನು ಪಡೆದು ವಾನರರಾಜ್ಯವನ್ನು ಏಕಚ್ಛತ್ರಾಧಿಪತ್ಯವನ್ನಾಗಿ ಅನುಭವಿಸುತ್ತ ರಾಮಸೇವೆಗೆ ಮಳೆಗಾಲವು ಕಳೆಯುವದನ್ನು ನಿರೀಕ್ಷಿಸುತ್ತಿದ್ದಾನೆ. ಹೀಗೆ ಸುಗ್ರೀವನಿಗಾದಂತೆ ಇಷ್ಟಸಿದ್ಧಿಯಾಗುವದನ್ನು ಲಕ್ಷ್ಯದಲ್ಲಿಟ್ಟುಕೊಂಡೇ ಪೀಠಿಕೆಯಲ್ಲಿ ''ಸಖ್ಯವಗೈವುದು ಮನುಜ'' ಎಂದು ಮುಂತಾಗಿ ಹೇಳಿದ್ದು.



# ಸೀತಾಕ್ಷೇಮಲಾಭ

## ಪೀಠಿಕೆ—ಸ್ವಾಮಿದಾಸ್ಯ

**ತೋಡಿ—ಅಟತಾಳ**

ಸ್ವಾಮಿದಾಸ್ಯಮಾಡೊ । ಶ್ರದ್ಧೆಯೊಳ್ । ನೇಮಸಿಷ್ಠೆಗೂಡೊ ॥ ಪ ॥
ನಾಥನ ಕಾರ್ಯವ । ಪ್ರೀತಿಯೊಳೆಸಗುವ॥ರೀತಿಯರಿತವನೆ । ದೂತನೆಂದರಿತು ॥೧॥
ಒಡೆಯನ ಕಾರ್ಯಕೆ । ನಡೆಯನೆ ಹರುಷದಿ ॥ ಅಡಿಯನೊಡನೆ ಮುಂ । ದಿಡುತಲಿ
ಧೈರ್ಯದಿ ॥ ೨ ॥ ನಡುನಡುವೆಯೆ ಬಲು । ಎಡರುಗಳಡಸಲು ॥ ಬಿಡದವುಗಳ
ಹಿಂ । ದಿಡುತ ನಡಗರದಿ ॥ ೩ ॥ ಹೇಳಿದುದಲ್ಲದೆ । ಹೇಳಿದುದಕೆ ಮತ್ತೆ ॥ ಮೇಲೆನೆಗೆ
ಯ್ಯುವ । ಶೀಲಮ ತಾಳುತ ॥ ೪ ॥

**ಇದನ್ನು ಅನುಷ್ಠಾನಕ್ಕೆ ತಂದುಕೊಳ್ಳದೆ ವಿಷಯಗಳನ್ನೇ ಶಾಶ್ವತವೆಂದು ಅವಲಂಬಿಸಿ ಕೊಂಡಿರುವವರನ್ನು ನೋಡಿ ಭಗವದ್ಭಕ್ತರು ಕನಿಕರಪಡುತ್ತಾರೆ—**

ವೃ॥ ಸುರಚಾಪಂ, ಮುಗಿಲೊಡ್ಡಣಂ, ಬರಸಿಡಿಲ್, ಬಾಳ್ಮಿಂಚಿವೆಲ್ಲಂ
ವಸುಂ । ಧರೆಯೊಳ್ರಾಗಗೆ ಭೋಗಮಸ್ಥಿರಮೆನುತ್ತಂ ಸಾರೆ ಪಂಚೇಂದ್ರಿಯೋ ॥
ತ್ಕರಮಂ ಗೆಲ್ದು ವಿರಕ್ತಿಯಂ ಪಡೆವಿನಂ ಯೋಗೀಂದ್ರವೃಂದಕ್ಕೆ ಪೂ । ಣ್ದೊರೆಯ
ಲ್ಕಾಲದೆ? ಲೋಕಕೇಂ ತಿಳಿಯದೇ? ಸೌಧರ್ಮವಜ್ರಾಂಕಿತಂ ॥ —(ಮ.ನಂ.ಶ)

**ಟಿ॥ ಪೂಣ್ದು—ಪ್ರತಿಜ್ಞೆಮಾಡಿ. ಸೌಧರ್ಮವಜ್ರಾಂಕಿತಂ—ಉತ್ತಮವಾದ ಧರ್ಮ ಮಾರ್ಗವು.**

**ಹೀಗಿದ್ದರೂ ಕೂಡ—**

ಶ್ಲೋ॥ ನನ್ದನ್ತ್ಯುದಿತ ಆದಿತ್ಯೇ ನನ್ದನ್ತ್ಯಸ್ತಮಿತೇ ರವೌ । ಆತ್ಮನೋ
ನಾವಬುಧ್ಯನ್ತೇ ಮನುಷ್ಯಾ ಜೀವಿತಕ್ಷಯಮ್ ॥ —(ಶ್ರೀ.ರಾ)

**ಅ॥ ಸೂರ್ಯನು ಹುಟ್ಟಿದರೆ ಸಂತೋಷಪಡುತ್ತಾರೆ; ಸೂರ್ಯನು ಮುಳುಗಿದರೆ ಸಂತೋಷಪಡುತ್ತಾರೆ. ಮನುಷ್ಯರು ತಮ್ಮ ಆಯುಸ್ಸು ಕಡಿಮೆಯಾದದ್ದನ್ನು ತಿಳಿಯುವದಿಲ್ಲ.**

**ಇದನ್ನು ತಿಳಿಯದೆ ಶರೀರದ ಮೇಲೆ ಅಭಿಮಾನವನ್ನುಮಾಡಿಕೊಂಡಿರುವದನ್ನು ನೀತಿಶಾಸ್ತ್ರಕಾರರು ಬಹು ತುಚ್ಛವಾಗಿ ಕಾಣುವದೆಂತೆಂದರೆ—**

ಶ್ಲೋ॥ ತ್ವಚಾಸ್ಥಿಮಾಂಸರುಧಿರಸ್ನಾಯುಮೇದೋಮಜ್ಜಾಸ್ಥಿಸಂಹತೌ ।
ವಿಣ್ಮೂತ್ರಪೂಯೇ ರಮತಾಂ ಕ್ರಿಮೀಣಾಂ ಕಿಯದನ್ತರಮ್ ॥ —(ಸು)

**ಅ॥ ಚರ್ಮ, ಮಾಂಸ, ರಕ್ತ, ನರ, ಕೊಬ್ಬು, ಎಲುಬಿನ ತಿರುಳು, ಎಲುಬಿನ ಚಿಪ್ಪು—ಇವುಗಳಿಂದ ಕೂಡಿ ಮಲಮೂತ್ರಗಳಿಂದ ದುರ್ಗಂಧವಾಗಿರುವ ಶರೀರದಲ್ಲಿ ರಮಿಸುವವರಿಗೂ ಕ್ರಿಮಿಗಳಿಗೂ ಏನು ಭೇದ?**

ಇದರ ವಿಷಯದಲ್ಲಿ ಭಾಗವತೋತ್ತಮರು ಎಚ್ಚರಿಕೆಯನ್ನು ಕೊಟ್ಟಿರುವದೇನೆಂದರೆ—

ನಾದರಾಮಕ್ರಿಯೆ—ಆದಿತಾಳ

ನಂಬಬೇಡವೊ । ಮನುಜ । ನಂಬಬೇಡವೊ ॥ ಪ ॥ ನಂಬಿ ಕೆಡುವರುಂಟೆ? ಮಣ್ಣಿ । ಬೊಂಬೆಯಂಥ ತನುವಸಿದನು ॥ ಅ.ಪ ॥ ಮಾಯದಿಂದ ಜನಿಸಿ ಬೆಳೆದು ಕಾಯವೆನಿಸಿ ಸತ್ತು ಕಡೆಗೆ ॥ ನಾಯಿನರಿಯು ತಿಂದು ಕೆಡುವ । ಹೇಯವೆನಿಸಿ ದೊಡಲನಿದನು ॥ ೧ ॥ ಸೂರು ಬಾಳ್ವೆನೆಂದು ತನ್ನ । ಸೇರಿ ಸಲಿವರಾಸೆಯನ್ನು ॥ ನೀರ ಕಲಸಿ ನಿಮಿಷದಲ್ಲಿ । ತೋರಿಯಳಿವ ದೇಹವಿದನು ॥ ೨ ॥ ಧರೆಯ ಭೋಗ ಕೆಳಸಿ ಸರಸ । ಮರೆದು ತನ್ನ ನೆಚ್ಚಿದವರ ॥ ನರಡುವಿಧದಿ ಕೆಡಿಸಿ ಯಮನ । ಪುರಕೆ ಕೆಡಹುವಂಗವಿದನು ॥ ೩ ॥ ಸತ್ತು ಹುಟ್ಟಿ ತಾನು ತನ್ನ । ನಿತ್ಯವೆಂದು ಹೊಂದಿದವರ ॥ ಕತ್ತೆಯಂತೆ ಇಹಕೆ ಪರಕೆ । ಸುತ್ತಿ ಸುಳಿಪ ಗಾತ್ರವಿದನು ॥ ॥ ೪ ॥ ಒಡೆಯದುಡಿಯದಮಲಸುಖವ । ಪಡೆಯೆ ಶ್ರೀಗುರುಸಿದ್ಧನಿಂದ ॥ ಕೊಡದ ತೆರದೊಳೊಡೆದು ಧರೆಯೊ । ಳಡಗಿ ಕೆಡುವ ಜಡತನುವನು ॥ ೫ ॥ —(ಕೈ.ಕ)

ಟಿ॥ಒಡೆಯದೆ+ಉಡಿಯದೆ (ಚೂರಾಗದೆ). ಕೊಡದ ತೆರದೊಳು—ಗಡಿಗೆಯಂತೆ.

ಶರೀರದ ಹಣೆಯ ಬರೆಹವೇ ಇಷ್ಟಾದ್ದರಿಂದ—

ಶ್ಲೋ॥ ಪುತ್ರಮಿತ್ರಕಲತ್ರೇಷು ಸಕ್ತಾಃ ಸೀದನ್ತಿ ಜನ್ತವಃ । ಸರಃ ಪಙ್ಕಾರ್ಣವೇ ಮಗ್ನಾ ಜೀರ್ಣಾ ವನಗಜಾ ಇವ ॥ —(ಸು)

ಅ॥ ಮಗ, ಗೆಳೆಯ, ಹೆಂಡತಿ—ಮೊದಲಾದವರಲ್ಲಿ ಆಸಕ್ತರಾದ ಪ್ರಾಣಿಗಳು ಸರೋವರದ ಬಲವತ್ತಾದ ಕೆಸರಿನಲ್ಲಿ ಮುಳುಗಿದ ಕಾಡಾನೆಗಳಂತೆ ಕ್ಷಯವನ್ನು ಹೊಂದುತ್ತಾರೆ.

ಏಕೆಂದರೆ ಅವರು ಶಾಶ್ವತವಲ್ಲವೆಂಬುದನ್ನು ಗೀತೆಯೂ ಹೇಳುತ್ತದೆ—

ಶ್ಲೋ॥ ಅವ್ಯಕ್ತಾದೀನಿ ಭೂತಾನಿ ವ್ಯಕ್ತಮಧ್ಯಾನಿ ಭಾರತ । ಅವ್ಯಕ್ತ ನಿಧನಾನ್ಯೇವ ತತ್ರ ಕಾ ಪರಿವೇದನಾ ॥ —(ಭ.ಗೀ)

ಅ॥ ಪ್ರಾಣಿಗಳೆಲ್ಲ ಮೊದಲು ಎಲ್ಲಿದ್ದರೆಂಬುದು ಗೊತ್ತಿಲ್ಲ; ಸತ್ತಮೇಲೆ ಏನಾಗುತ್ತಾರೆಂಬುದು ಗೊತ್ತಿಲ್ಲ; ನಡುವೆ ಮಾತ್ರ ಕಾಣುತ್ತಾರೆ. ಅದಕ್ಕಾಗಿ ಏಕೆ ಅಳಬೇಕು?

ಇಂಥವರ ಪೋಷಣೆಗಾಗಿ ಬೇಕಾದ ದುಡ್ಡಿಗಾಗಿ ದೇವರನ್ನು ಕಳೆದುಕೊಳ್ಳುವವರ ವಿಷಯದಲ್ಲಿ ಒಬ್ಬ ಕವಿಯು ಅಭಿಪ್ರಾಯಪಟ್ಟಿರುವದೇನೆಂದರೆ—

ಶ್ಲೋ॥ ಕೋಽಯಂ ಹನ್ತ ಮಹಾಮೋಹಗ್ರಹಗ್ರಸ್ತೋಽಖಿಲೋ ಜನಃ । ಅರ್ಥಸ್ಯಾರ್ಥೇ ಕಪರ್ದಸ್ಸನ್ ಪರಮಾರ್ಥಂ ತ್ಯಜತ್ಯಹೋ! ॥ —(ಸು.ಲಾ)

ಅ॥ ಅಯ್ಯೊ! ಎಲ್ಲರೂ ಮಹಾಮೋಹವೆಂಬ ಮೊಸಳೆಯ ಬಾಯಿಗೆ ತುತ್ತಾಗಿದ್ದಾರಲ್ಲ!! ದುಡ್ಡಿಗಾಗಿ ದೈನ್ಯವನ್ನು ಹೊಂದಿ (ಪರಮ+ಅರ್ಥ) ಹೆಚ್ಚಿನ ಧನವಾದ ಮೋಕ್ಷವನ್ನು ಕೈಬಿಡುತ್ತಾರಲ್ಲ!!!

ಆ ಪರಮಾರ್ಥಕ್ಕೇನು ಮಾಡಬೇಕೆಂದರೆ—

ಶ್ಲೋ॥ ಆದರೇಣ ಯಥಾ ಸ್ತೌತಿ ಧನವನ್ತಂ ಧನೇಚ್ಛಯಾ । ತಥಾ ಚೇದ್ವಿಶ್ವಕರ್ತಾರಂ ಕೋ ನ ಮುಚ್ಯೇತ ಬನ್ಧನಾತ್ ॥ —(ಸು)

ಅ॥ ಹಣವನ್ನು ಬಯುಸುವವನು ಹಣಗಾರನನ್ನು ಆದರದಿಂದ ಹೊಗಳುವಂತೆ ಜಗನ್ನಾಯಕನ ಸ್ತೋತ್ರವನ್ನು ಮಾಡಿದರೆ (ಕಷ್ಟಸುಖಗಳ) ಕಟ್ಟಿನಿಂದ ಯಾರು ತಾನೆ ಬಿಡುಗಡೆಯನ್ನು ಹೊಂದುವದಿಲ್ಲ?

ಇದೇ ಅರ್ಥವನ್ನೇ ರಾಮಾಯಣಕಾರರೂ ಹೇಳಿದ್ದಾರೆ—

ಕಂ॥ ತನುವಿದು ಶಾಶ್ವತವೇ? ಸತಿ। ತನುಜಾದ್ಯರ್ಕಷ್ಟಕಾಲಕೊದಗುವರೇ? ಸು ॥ ಮ್ಮನೆ ಮಾಯಾವಶನಾಗದೆ। ಮನಗುಂದದೆ ರಾಮನಂಘ್ರಿಗಾನತನಾಗಾ ॥ —(ಹ.ರಾ)

ಹಾಗೆ ಶರಣುಹೋಗುವದರಲ್ಲಿಯೂ ದಾಸ್ಯತ್ವವನ್ನು ವಹಿಸಬೇಕೆಂದು ಜ್ಞಾನಿಗಳು ಉಪದೇಶಿಸಿರುವದೇನೆಂದರೆ—

ಸಾಂ॥ ತನುಪನು ದೇವಕಾರ್ಯದಿ ದಂಡಿಸುತ ರಾಮ। ನಸು ನುಡಿಯುತ ವೈಖರಿಯಿಂ ॥ ಮನದಿ ಸ್ವಧರ್ಮಪ ಬಿಡದಿಹ ಹರಿಪದ । ವನಜದಾಸನೆ ಧನ್ಯನಿಳೆಯೊಳ್ ॥ —(ಮ.ಉ)

ಇದೇ ಮನುಷ್ಯನ ಭಾಗ್ಯವೆಂದು ಭಗವದ್ಭಕ್ತರ ಅಭಿಪ್ರಾಯ. ನೋಡಿರಿ—

ಕಾಂಬೋದಿ — ಝಂಪೆ

ಇದು ಭಾಗ್ಯವಿದುಭಾಗ್ಯವಿದುಭಾಗ್ಯವಯ್ಯ । ಪದುಮನಾಭನ ಪಾದ ಭಜನೆ ಸುಖವಯ್ಯ ॥ಪ॥ ಕಲ್ಲಾಗಿರಲು ಬೇಕು ಕಠಿನಭವತೊರೆಯೊಳಗೆ। ಬಿಲ್ಲಾಗಿರಲು ಬೇಕು ಬಲ್ಲವರ ಬಳಗೆ ॥ ಮೆಲ್ಲಗೇ ಸಾಧನಸ ಮನವ ಮೆಚ್ಚಿಸಬೇಕು। ಬೆಲ್ಲವಾಗಲುಬೇಕು ಬಂಧುಜನರೊಳಗೆ ॥ ೧ ॥ ಬುದ್ಧಿಯಲಿ ತನುಮನವ ತಿದ್ದಿಕೊಳ್ಳಲುಬೇಕು । ಮುದ್ದಾಗಬೇಕು ಮುನಿಯೋಗಿಗಳಿಗೆ ॥ ಸಿದ್ಧಜನರಬ್ಧಿಯೊಳು ಮೀನಾಗಿರಲು ಬೇಕು । ಶುದ್ಧನಾಗಿರಬೇಕು ಕರಣ ಮೂರರಲಿ ॥ ॥ ೨ ॥ ವಿಷಯಭೋಗದ ತೃಣಕೆ ಉರಿಯಾಗಿರಲು ಬೇಕು । ನಿಶಿದಿನವು ಶ್ರೀಹರಿಯ ನೆನೆಯಬೇಕು ॥ ವಸುಧೀಶ ಪುರಂದರವಿಠಲನಿಗೆ ಪ್ರಿಯರಾದ। ಹಸನಾದ ದಾಸರನು ಸೇವಿಸಲು ಬೇಕು ॥ ೩ ॥ —(ದಾ)

ಈ ಬಗೆಯ ಭಗವಂತನ ಕಡೆಯ ಒಲವಿಲ್ಲದವನು ಪಶುವೆಂದು ಕವಿಯು ವರ್ಣಿಸುತ್ತಾನೆ—

ಶ್ಲೋ॥ ದಿವ್ಯಾಗಮೋದಿತಮಹೋ! ಹರಿತತ್ತ್ವಮತ್ರ । ಯೇ ನಾಭಿನನ್ದತಿ ಜನಃ ಕೃಪಣಸ್ತಮೇಸಮ್ ॥ ವಕ್ತುಂ ತ್ರಪೇ ಪಶುಮಪೀತಿ ತೃಣೋದಿತೇ ತ। ದ್ಯತ್ಪಶ್ಯ ಪಶ್ಯ ಪಶವಃ ಕಿಯದಾದ್ರಿಯನ್ತೇ! ॥ —(ಸು.ಲಾ)

ಅ॥ ಯಾವ ಮನುಷ್ಯನು ಕೃಪಣನಾಗಿ ದಿವ್ಯವಾದ ವೇದದಲ್ಲಿ ಹೇಳಿರುವಂಥ (ಹರಿ+ತತ್ತ್ವ) ಹರಿಯ ಭಕ್ತಿಯನ್ನು ಮಾಡುವದಿಲ್ಲವೊ ಅವನನ್ನು ಪಶುವೆನ್ನುವದಕ್ಕೆ ಕೂಡ ನಾಚಿಕೆಯಾಗುತ್ತದೆ. ಏಕೆಂದರೆ ಪಶುಗಳು ಹುಲ್ಲಿನಲ್ಲಿ ಹುಟ್ಟಿದ ಅದನ್ನು (ಹರಿತತ್ತ್ವ—ಹಸುರನ್ನು) ನೋಡಿ ನೋಡಿ ಎಷ್ಟು ಆದರಿಸುತ್ತವೆ!!

ಈ ಭಜನೆಯು ವಿಶೇಷವಾಗಿ ಮನಸ್ಸಿಗೆ ಸಂಬಂಧಪಟ್ಟದ್ದಾದ್ದರಿಂದ ಅದನ್ನು ನೋಡುವದಕ್ಕೆ ಮನೆಮಠಗಳನ್ನೇನೂ ಬಿಡಬೇಕಾದ್ದಿಲ್ಲ. ನೋಡಿ—

ತ್ರಿ॥ ಮನದಲ್ಲಿ ನೆನೆವಂಗೆ ಮನೆಯೇನು ಮಠವೇನು । ಮನದಲ್ಲಿ ನೆನೆಯದಿರುವವನು ದೇಗುಲದ। ಕೊನೆಯಲಿದ್ದೇನು ಸರ್ವಜ್ಞ ॥ —(ಸ.ಪ)

ಈ ಪ್ರಕಾರ ಮನಃಪೂರ್ವಕವಾಗಿ ದಾಸ್ಯವನ್ನು ವಹಿಸುವದನ್ನು ಶ್ರೀ. ನಾರದರು ತಮ್ಮ ಭಕ್ತಿಸೂತ್ರದಲ್ಲಿ ದಾಸ್ಯಭಕ್ತಿಯೆಂದು ಕರೆದಿದ್ದಾರೆ. ಈ ದಾಸ್ಯವನ್ನು ಭಗವದ್ಭಕ್ತರು ಬಯಸುವದೆಂತೆಂದರೆ—

ಖರಹರಪ್ರಿಯ—ಆದಿತಾಳ

ದಾಸ್ಯವನೇ ಬೇಡುವೆ ನಿನ್ನ । ಬ್ರಹ್ಮೇಂದ್ರವಿನುತ ಸೀತಾಪತೇ ॥ ಪ ॥ ಮೌನಿಗಳು ಹೃದಯದಲಿ। ಧ್ಯಾನಿಸುವ ಪಾದಾರವಿಂದದ ॥ ಅ.ಪ ॥ ಭೂಮಿ ಭಾರವನು ಕಳೆದು ಭಕ್ತರಿಗೆ। ಪ್ರೇಮದಿಂದ ತನ್ನ ರೂಪವನ್ನು ತೋರಿ ॥ ಈ ಮಹಿಗೆಲ್ಲ ಮುಖ್ಯದೈವವಾದ । ಕೋಮಲಾಂತಃಕರಣದ ನಿನ್ನ ಪಾದ ॥ ೧ ॥ ಹುಟ್ಟುಸಾವುಗಳ ಸುಳಿಯಲ್ಲಿ ಸಿಕ್ಕಿ। ಕಷ್ಟದಿಂದ ದುಃಖಪಡುತಿರುವರ ॥ ಕಷ್ಟವನ್ನು ಹೋಗಲಾಡಿಸುವ। ಸೃಷ್ಟಿಗೆಲ್ಲ ಮುಖ್ಯದೈವವಾದ ನಿನ್ನ ॥ ೨ ॥ ಹೊಟ್ಟೆ ಬಟ್ಟೆಗಾಗಿ ನಾ ಮಾಡಿದ। ಕೆಟ್ಟ ಜನಗಳ ಸೇವೆ ಸಾಕುಮಾಡಿ ॥ ಇಷ್ಟದೈವದ ಚಿದ್ರೂಪವ। ನೆಟ್ಟನರಿಯುವ ದೃಷ್ಟಿಯೀವ ನಿನ್ನ ॥ ೩ ॥ —(ಭಕ್ತಿ.ಗೀ)

ದಾಸ್ಯಭಕ್ತಿಯಿಂದ ತನುಮನಧನಗಳನ್ನೆಲ್ಲ ಒಪ್ಪಿಸಿದ ಮೇಲೆ ನಿಶ್ಚಿಂತೆಯಾಗುವದೆಂಬರ್ಥವನ್ನು ಒಬ್ಬ ದಾಸರು ಹೇಳಿರುವದೇನೆಂದರೆ—

ಉ॥ ಕರುಣಾಳು! ತನುಮನಧನಗಳೆಲ್ಲವ ನಿನ್ನ । ಚರಣಕಮಲಕೊಪ್ಪಿಸಿದ ಬಳಿಕ ಇನ್ನು। ಮರಳಿ ಮರಳಿ ಯೆನ್ನಮರುಳು ಮಾಡುವರೆ?। ನರಕನೊಪ್ಪಿಸಿದ ಬಳಿಕ ಸುಂಕವೇತರದೊ ದೇವ। ಕರುಣಾಕರ ನಿನ್ನ ಚರಣದೆಡೆಯೊಳಿಟ್ಟು। ಮರೆಯದೆ ಕಾಯೋ ಎನ್ನ ರಂಗವಿಠಲ ॥ —(ದಾ)

ತನುಮನಗಳನ್ನು ದಾಸ್ಯಕ್ಕೆ ಕೊಡುವದರ ಫಲವನ್ನು ಕವಿಯು ವರ್ಣಿಸಿರುವದೆಂತೆಂದರೆ—

ವೃ॥ ಮೆಯ್ಯ ನಿರಾಶೆ, ಘೋರತಪಮುತ್ತಮಸಂಯಮಮಾತ್ಮತತ್ತ್ವಮಂ। ಕಯ್ಯೊಳಗಿರ್ದ ಕನ್ನಡಿಯ ನೋಳ್ಪವೊಲೀಕ್ಷಿಪ ಬೋಧೆಕೂಡಿದಾ ॥ ಸಂಯಮಿಗೆಂತು ಕಾಂಕ್ಷೆಯಿದರಿಂ ಕ್ಷಣದೊಳ್ಭವವೃಕ್ಷಮೂಲಮಂ। ಕೊಯ್ಯನೆ? ಸುಟ್ಟು ತೂರಿ ಶಿವನಾಗಿರನೇ? ಅಪರಾಜಿತೇಶ್ವರಾ ॥ —(ಅ.ಶ)

ದಾಸ್ಯಪ್ರಭಾವವು ಹೀಗಿರುವದರಿಂದ ಕಥಾರಂಭದಲ್ಲಿ "ಸ್ವಾಮಿದಾಸ್ಯ ಮಾಡೆೊ" ಎಂದು ಉಪದೇಶಮಾಡಿರುವರು. ಇದಕ್ಕುದಾಹರಣೆಯಾಗಿ ಸೀತಾಕ್ಷೇಮಲಾಭದ ಕಥೆಯು ನಿರೂಪಣಮಾಡಲಾಗುವದು.



# ಆಖ್ಯಾನ

ಶ್ರೀ ರಾಮಲಕ್ಷ್ಮಣರು ಪ್ರವರ್ಷಣಪರ್ವತದಲ್ಲಿ ತತ್ತ್ವವಿಚಾರವನ್ನು ಮಾಡುತ್ತ ಕೆಲವು ದಿವಸ ಕಾಲವನ್ನು ಕಳೆಯುತ್ತಿರುವಷ್ಟರಲ್ಲಿ—

ಷ॥ ಮುರಿದು ಸಭಕೇರಿದವು ಮುಗಿಲಿಸ। ನೆರವಿ ಸೀಗಗಳ ಹೇರಿ; ಹಾರಿದ। ವರಸುಕುಲದ ಮರಾಳತತಿ ಮಾನಸಸರೋವರಕೆ; ॥ ಹರುಷಿಸಿದವು ಬಲಾಹ ಸಂತತಿ;। ಸುರಶರಾಸನ ಮೇಘಲಕ್ಷ್ಮಿಯ। ಶಿರದ ಶಿಖರದ ಮೇಲುದಿನವೊಲು ಮೆರೆದುದಭ್ರದಲಿ ॥ —(ತೊ.ರಾ)

ಟಿ॥ ಮುರಿದು—ಹಿಂದಿರುಗಿ. ನೆರವಿ—ಸಮೂಹ. ಹೇರಿ—ಭೂಮಿಯ ಮೇಲೆ ಹೆಚ್ಚಾಗಿ ಸುರಿಸಿ. ಸುರಶರಾಸನ—ಇಂದ್ರನ ಬಿಲ್ಲು (ಕಾಮನ ಬಿಲ್ಲು). ಮೇಲುದಿನವೊಲು—ಸೆರಗಿನ ಹಾಗೆ.

ಹೀಗೆ ಪ್ರಾಪ್ತವಾದ ಶರತ್ಕಾಲದ ಒಂದು ರಾತ್ರಿ ಆದ ಚಂದ್ರೋದಯವೆಂತಿತ್ತೆಂದರೆ—

ಷ॥ ಹರಿಯವೊಲು ಕಮಲಾಂಕ; ಗಂಗಾ। ಧರನ ವೊಲು ಶುಚಿವರ್ಣ; ಭಾಷಾ। ವರನವೊಲು ಪ್ರಜ್ವಲಿತಸಕಲಕಲಾಧುರಂಧರನು; ॥ ಪರಮಮೂರ್ತಿ ತ್ರಯನೆನಲು ಹಿಮ। ಕರನು ಸ್ಥಿತಿಲಯಜನ್ಮಗಳ ವಿ। ಸ್ತರಿಸುತರ್ದ ಚಕೋರ ಕಮಲವಿಯೋಗಿಮನಗಳಿಗೆ ॥ —(ರಾ.ಕ.ಕು)

ಟಿ॥ ಕಮಲಾಂಕ—ಹರಿಯ ಪಕ್ಷದಲ್ಲಿ ಲಕ್ಷ್ಮಿಯಿಂದ ಕೂಡಿದವನು; ಚಂದ್ರನ ಪಕ್ಷದಲ್ಲಿ ಹಿಮದ ಕಲೆಯುಳ್ಳವನು. ಶುಚಿ—ಶುಭ್ರ. ಕಲಾ— ಬ್ರಹ್ಮನ ಪಕ್ಷದಲ್ಲಿ ವಿದ್ಯೆ; ಚಂದ್ರನ ಪಕ್ಷದಲ್ಲಿ ಕಾಂತಿ. ಸ್ಥಿತಿಲಯ...ಮನಗಳಿಗೆ—ಚಕೋರಕ್ಕೆ ರಕ್ಷಣೆ, ಕಮಲಕ್ಕೆ ಲಯ, ವಿಯೋಗಿಗಳಿಗೆ ಜನ್ಮ—ಇವುಗಳನ್ನು ಮಾಡುತ್ತಿದ್ದನು.

ಆಗ ರಾಮನು—

ಆನಂದಭೈರವಿ—ಅಟತಾಳ

ಎಂತಿಡ ಸೈರಿಪೆ। ಕಾಂತೆಯೆ ನೀ ॥ ಪ ॥ ಕಂತುಶರನ ಬಾಧೆಯಿಂದ। ಚಿಂತಿಸುತ್ತಲಿ ॥ ಅ.ಪ ॥ ಮಳೆಯ ಕಾಲ ಕಳೆದು ಹೋಗಿ । ಸುಳಿವ ಗಾಳಿಯೊಳಗೆ ಸಿಲುಕಿ ॥ ಬೆಳೆವ ಕಾಮಜ್ವರವ ನೀನು। ತಳೆವೆಯೆಂತಯ್ಯೋ! ॥ ೧ ॥ ವಿರಹವನ್ನು ಸಹಿಸಿ ನೀನು। ಶರೀರವನ್ನು ಧರಿಪೆಯೆಂತು? ॥ ದುರುಳಜನರ ನಡುವೆ ನೀನು । ಇರುವೆಯೆಂತಯ್ಯೋ! ॥ ೨ ॥ ನಾನು ರಾಮ ಕಠಿನಹೃದಯ । ನೀನು ನೋಡೆ ಮೃದುಲಹೃದಯೆ ॥ ನಾನು ಸಹಿಸಬಲ್ಲೆನೆಲ್ಲ। ನೀನು ಸಹಿಸುವೆಯ? ॥ ೩ ॥

ಎಂದು ಹಂಬಲಿಸುತ್ತ ಕೋಪಗೊಂಡು—

✓ ಕೀ॥ ಅನುಜನೆ, ಕೃತಘ್ನನಾಗಿಹ ಸುಗ್ರೀ। ವನ ಮೇಲಿಡೆ ತಾ ಬಾಣವನು ॥ ಎನೆ ತಾನೇ ನಿಗ್ರಹಿಸುವೆನೆನುತ। ಣ್ಣನಿಗೆ ಹೇಳಿದನು ಲಕ್ಷ್ಮಣನು ॥

**ಆ ಲಕ್ಷ್ಮಣನ ಸನ್ನಾಹವನ್ನು ಕಂಡು ರಾಮನು ಸಮಾಧಾನಗೊಂಡು ಹೇಳಿದ್ದು—**

ಶ್ಲೋ॥ ನ ಹಸ್ತವ್ಯಸ್ತ್ವಯಾ ವತ್ಸ, ಸುಗ್ರೀವೋ ಮೇ ಪ್ರಿಯಸ್ಸಖಾ। ಕಿಂ ತು ಭೀಷಯ ಸುಗ್ರೀವಂ ವಾಲಿವಸ್ಯ ಹನಿಷ್ಯಸೇ — (ಅ.ರಾ)

ಅ॥ ತಮ್ಮ, ನನ್ನ ಜೀವದ ಗೆಳೆಯನಾದ ಸುಗ್ರೀವನನ್ನು ನೀನು ಕೊಲ್ಲಬಾರದು; ಅವನನ್ನು ವಾಲಿಯಂತೆ ಕೊಲ್ಲದೆ ಸುಮ್ಮನೆ ಹೆದರಿಸು.

**ಈ ಮಾತಿನಿಂದ ಅವನು ಎಷ್ಟೋ ಶಾಂತನಾಗಿ ಹೊರಟರೂ ಕೂಡ ಅವನ ಆರ್ಭಟದ ಪರಿಣಾಮವೆಷ್ಟಾಯಿತೆಂದರೆ—**

ಷ॥ ಆರು ನಿಲುವರು ಲಕ್ಷ್ಮಣನ ಘನ। ಘೋರಗವಾರ್ಣನೆಲನ ಮುಂದೆ? ಮ। ಹೀರುಹಾವಳಿ ನೀದವಂಗದ ಝಳದ ಝಾಡಿಯಲಿ; ॥ ಭೂರಿಭೂಧರ ಬಿರಿದ ವಮುಮು! ಕ। ಠೋರಸಿಂಹಧ್ವನಿಗೆ; ಸಿಂಹಚ। ಮೂರಕರಿಶರಭಾದಿಮೃಗ ಜಾರಿದವು ದೆಸೆದೆಸೆಗೆ ॥ —(ತೊ.ರಾ)

ಟಿ॥ ಚಮೂರು—ಬಾಲವಿಲ್ಲದ ಜಿಂಕೆ. ಶರಭ—ಶರಭವೆಂಬ ಮೃಗ.

✓ ಸಾ॥ ಅನಿತರೊಳಗೆ ಸೇನೆಯು ಬರಹೇಳಿ। ದಿನಸುತ ರುಮೆಯಿಂ ಕೂಡಿ ॥ ಮನೆಯೊಳಗಿರೆ ಕಾಲಿಟ್ಟನು ಲಕ್ಷ್ಮಣ। ಘನಗರ್ಜನೆಯಿಂ ಕೂಡಿ ॥

✓ ದಿಂ॥ ಅಂಗದಂ ಮೊದಲೇ ಶರಣೆನುತ್ತ ಬಂದ; । ಹಿಂಗದಾ ಹನುಮಂ ಸಂತವಿಟ್ಟು ನಿಂದ; ॥ ಇಂಗಿತಂ ತಿಳಿದಾ ತಾರೆ ನೈನ್ಯದೋರೆ । ಅಂಘ್ರಿಸುತ್ತೈತಂದಂ ಲಕ್ಷ್ಮಣನು ಪಾರೆ ॥

**ಇನ್ನೂ ಒಳಗೆ ರುಮೆಯೊಡನೆ ಇರುವ ಸುಗ್ರೀವನನ್ನು ಕುರಿತು ಲಕ್ಷ್ಮಣನು ಕೋಪದಿಂದ ಹೇಳುತ್ತಾನೆ—**

ಶ್ಲೋ॥ ಸುಗ್ರೀವಂ ಪ್ರಾಹ ದುರ್ವೃತ್ತ, ವಿಸ್ಮೃತೋಽಸಿ ರಘೂತ್ತಮಮ್ ॥ ವಾಲೀ ಯೇನ ಹತೋ ವೀರಃ ಸ ಬಾಣೋಽದ್ಯ ಪ್ರತೀಕ್ಷತೇ ॥ —(ಅ.ರಾ)

ಅ॥ ದುರಾಚಾರವುಳ್ಳ ಸುಗ್ರೀವನೆ, ರಾಮಚಂದ್ರನನ್ನು ಮರೆತಿದ್ದಿ; ಯಾವ ಬಾಣದಿಂದ ವಾಲಿಯು ಸತ್ತನೋ ಆ ಬಾಣವು ನಿನ್ನನ್ನು ನೋಡುತ್ತಿದೆ.

**ಆಗ ಸುಗ್ರೀವನು ಶರಣು ಬರುತಾನೆ—**

**ಬೇಹಾಗ್—ಆದಿತಾಳ**

ಕರುಣವ ತೋರು ನೀ ಶರಣಾಗತರಿಗೆ ॥ ಪ ॥ ಬರಿದೇ ತಡಗೈಯದೆ ವನ। ಚರಸೇನೆಯ ನಾನೀಗಳೆ। ಬರಮಾಡಿಹೆನೈ ॥ ಅ.ಪ ॥ ಉಪಕಾರವ ಪಡೆದಿಹ ನಾ ಮಾಡಿದ। ಶಪಥವನ್ನು ಪೂರಯಿಸದೆ ಬಿಡೆನೈ ॥ ೧ ॥ ಎಲ್ಲಾ ದಿಕ್ಕುಗಳಿಂದೈತಹ ಕಪಿ । ಮಲ್ಲರ ತಂಡಗಳೆಲ್ಲವ ನೋಡೈ ॥ ೨ ॥ ರಾಮಕಾರ್ಯಕಾದೀ ಸನ್ನಾಹವ। ಪ್ರೇಮದಿ ನೋಡೈ ಸ್ವಾಮಿ ನೀನೆಮಗೆ ॥ ೩ ॥

ಆಗ ಲಕ್ಷ್ಮಣನು ಶಾಂತನಾಗಿ ಎಲ್ಲರೊಡನೆ ಕೂಡಿ ರಾಮನ ಬಳಿಗೆ ಬಂದಾಗ ಸುಗ್ರೀವನು ರಾಮನಿಗೆ ತನ್ನ ಸೇನೆಯನ್ನು ತೋರಿಸುತ್ತಾನೆ—

ಷ॥ ಜವನೊಡನೆ ಜೂಜಿಗರ, ಲಯಭೈರವನ ಜೋಡಿನ ಜಟ್ಟಿಗರ, ಮೃ। ತ್ಯುವಿನ ನೇಹದ ಗೆಣೆಯರಾ ಕಲ್ಪಾಂತನರ್ತನದ ॥ ಶಿವನೊಡನೆ ಹೊಣಕಿಗರ, ಸ್ವಾಹಾ।ಧವನನಾಹುತಿಗೊಂಬ, ಜಂಝಾ ! ಪವನನುರುಬುವ ವೀರಪಟು ಭಟರಿವರು ನೋಡೆಂದ ॥ —(ರಾ.ಕ.ಕು)

ಟೆ॥ ಗೆಣೆಯರ+ಆ ಕಲ್ಪಾಂತ....ಹೊಣಕಿಗರ—ಹೋರಾಡುವವರನ್ನು. ಜಂಝಾಪವನನ+ ಉರುಬುವ—ದೊಡ್ಡ ಗಾಳಿಯನ್ನು ಉಃಪೆಂದು ಹಾರಿಸಿಬಿಡುವ.

ರಾಮನಿಗೆ ವಾನರಸೇನೆ ನೆರವಾದ ಸಂದರ್ಭಕ್ಕೊಪ್ಪುವ ನೀತಿಯು ಮಾತೇನೆಂದರೆ—

ಶ್ಲೋ॥ ಯಾಸ್ತಿ ನ್ಯಾಯಪ್ರವೃತ್ತಸ್ಯ ತಿರ್ಯಞ್ಚೋಽಪಿ ಸಹಾಯತಾಮ್। ಅಪನ್ಥಾನನ್ತು ಗಚ್ಛನ್ತಂ ಸೋದರೋಽಪಿ ವಿಮುಞ್ಚತಿ ॥ —(ಪ್ರ.ರಾ)

ಅ॥ ನ್ಯಾಯವಾದ ಮಾರ್ಗದಲ್ಲಿರುವವನಿಗೆ ಪಶುಪಕ್ಷಿಗಳು ಕೂಡ ಸಹಾಯವಾಗುವವು; ಅಡ್ಡದಾರಿಯಲ್ಲಿ ಹೋಗುವವನನ್ನು ಒಡಹುಟ್ಟಿದವನಾದರೂ ಅಗಲುವನು.

ಆಮೇಲೆ ರಾಮನಾಜ್ಞೆಯಂತೆ ಸೀತೆಯನ್ನು ಹುಡುಕುವದಕ್ಕಾಗಿ ಸುಗ್ರೀವನು ಎಲ್ಲಾ ಕಡೆಗೂ ಸೇನೆಯನ್ನಟ್ಟಿದ್ದಲ್ಲದೆ ರಾವಣನ ಸ್ಥಾನವು ದಕ್ಷಿಣಕ್ಕಿದ್ದದ್ದರಿಂದ ಬಹುಮಟ್ಟಿಗೆ ಆ ಕಡೆಯೇ ಸೀತೆಯನ್ನು ಕಾಣಲಾಗುವದೆಂದರಿತು—

ಶ್ಲೋ॥ ದಕ್ಷಿಣಾಂ ದಿಶಮುತ್ಯರ್ಥಂ ಪ್ರಯತ್ನೇನ ಮಹಾಬಲಾನ್। ಯುವರಾಜಂ ಜಾಮ್ಬುವನ್ತಂ ಹನೂಮನ್ತಂ ಮಹಾಬಲಮ್ ॥ ನಲಂ ಸುಷೇ- ಣಂ ಶರಭಂ ಮೈನ್ದಂ ದ್ವಿವಿದಮೇವ ಚ । ಪ್ರೇಷಯಾಮಾಸ ಸುಗ್ರೀವೋ ವಚನಂ ಚೇದಮಬ್ರವೀತ್ ॥ —(ಅ.ರಾ)

ಅ॥ ವಿಶೇಷವಾಗಿ ಮಹಾಬಲಿಷ್ಠರಾದ ಅಂಗದ, ಜಾಂಬವಂತ, ಹನುಮಂತ, ನಲ, ಸುಷೇಣ, ಶರಭ, ಮೈಂದ, ದ್ವಿವಿದ—ಮೊದಲಾದವರನ್ನು ದಕ್ಷಿಣಕ್ಕೆ ಹೋಗ ಹೇಳಿ ಸುಗ್ರೀವನು ಮಾಡಿದ ಆಜ್ಞೆ—

✓ ಕೀ॥ ತಿಂಗಳೊಳಗೆ ಸುದ್ದಿಯ ತರಬೇಕೀ।ಸಂಗತಿ ಲಕ್ಷ್ಯದಿ ನೆಟ್ಟಿರಲಿ ॥ ತಿಂಗಳು ಮೀರಲು ನಿಮ್ಮಯ ಜೀವಕೆ। ಭಂಗಪೆಂದು ಮನದಟ್ಟಿರಲಿ ॥

ಹೀಗೆಂದು ಅವರು ಹುಡುಕಬೇಕಾದ ಸ್ಥಲಗಳನ್ನು ಹೇಳುತ್ತಾನೆ—

✓ ರ॥ ನೋಡಿರಿ ನೀವೀ ಸ್ಥಲಗಳನೆಲ್ಲ।ಒಂದನು ಬಿಡಸಲ್ಲ ॥ ಪ ॥ ದಾರಿಯೊಳೀಕ್ಷಿಸಿ ವಿಂಧ್ಯಾದ್ರಿಯನು।ಭೂರಿಶಿಖರಗಳಿನೊಪ್ಪಿರುವದನು।ನರ್ಮದೆ ಗೋದಾವರೀ ನದಿಗಳ।ಮರ್ಮಸ್ಥಾನವ ಹುಡುಕುತೆ ಬಹಳ।ವರದಾಕೃಷ್ಣಾನದಿಗಳ ಕಳೆದು।ನೆರೆ ಮೇಖಲೆಯುತ್ಕಲೆಗಳನುಳಿದು । ಮುಂದೆ ದಶಾರ್ಣದ ಪಟ್ಟಣಗಳಲಿ।ಚೆಂದದವಂತೀಪುರಗೃಹಗಳಲಿ।ವಂಗಕಳಿಂಗವಿದರ್ಭಾದಿಗಳ।ಕಂಗೊಳಿಸುವ ಮಾಹಿಷಿಕಾದಿಗಳ।ಸುತ್ತು ನೋಡಿ ದಂಡಕವನವನ್ನು।ಮತ್ತೆ ಪಾಂಡ್ಯ ಕೇರಳ

ದೇಶವನು । ನಡೆದು ನೀವು ಸಹ್ಯಾದ್ರಿಯ ಕಡೆಗೆ । ಬಿಡದೆ ಗೈರಿಕಾದಿಗಳಿರ್ಪೆಡೆಗೆ। ಕಾಡು ಚಿತ್ರವಾಗಿರ್ಪುದಲ್ಲಿ। ನೋಡಬೇಕು ಶಕ್ತಿಯ ನಿಮ್ಮಲ್ಲಿ। ಹುಡುಕುತೈದಿ ನೀವ್ಮಲಯದ ಕಡೆಗೆ। ಬಿಡದೆ ವಂದಿಪುದಗಸ್ತ್ಯರ ಅಡಿಗೆ। ಮುಂದೆ ತಾಮ್ರಪರ್ಣಿಯು ಕಾಣುವದು। ಅಂದದೊಳದನೆಲ್ಲವ ನೋಡುವದು । ಅದರ ಮುಂದೆ ಕಾಣುವದು ಸಮುದ್ರ। ಅದನು ದಾಟಿದರೆ ತಪ್ಪದು ಭದ್ರ । ಅಲ್ಲಿರ್ಪುದು ಮಹೇಂದ್ರಾಚಲವು। ಎಲ್ಲೆಲ್ಲಿಯು ತೋರ್ಪುದು ಬಹು ಫಲವು । ಉದಧಿಯೊಳಗೆ ಗಿರಿಯದು ಚಾಚಿಹುದು। ಮುದದೊಳಲ್ಲಿ ಚಾರಣರಿರ ಬಹುದು। ಸುರಪನು ಬರ್ಪನು ಪ್ರತಿಪರ್ವದೊಳು । ನೆರೆ ವಿಶಾಯುಲು ಸಾಗರತೀರ್ಥದೊಳು। ಲಂಕೆಯಿರುವದದರೀ ಕಡೆಯಲ್ಲಿ। ಶಂಕೆಯಳಿಯೆ ಹುಡುಕಿರಿ ನೀವಲ್ಲಿ। ಎಲ್ಲಿಟ್ಟಿರ್ಪನೊ ರಾವಣನವಳ। ಎಲ್ಲೆಡೆಯೊಳು ದೃಷ್ಟಿಸಿ ನೀವ್ ಬಹಳ । ಅದರ ಮುಂದೆ ಶತಯೋಜನದೂರ । ಅದುಬುತಪುಷ್ಪಿತಕಾಚಲತೀರ । ಅದು ನಾಸ್ತಿಕರಿಗೆ ಕಾಣುವದಿಲ್ಲ। ಅದಕೆ ನೀವು ವಂದಿಸದಿರೆ ಸಲ್ಲ। ಮುಂದೆ ಸೂರ್ಯವಂತವ ವೈದ್ಯುತವ। ಚಂದವಾದ ಕುಂಜರಪರ್ವತವ। ಅದರೊಳಗಿಹ ಭೋಗವತೀಪುರವ । ಮುದದೆ ಹುಡುಕಿ ತೋರಿರಿ ನಿಮ್ಮಿರವ। ಸಾಗೆ ಮುಂದಿಹುದು ವೃಷಭಾಚಲವು । ಆಗ ನೋಡಿ ಗಂಧರ್ವರ ಚೆಲುವು। ಅದರ ಮುಂದೆ ಪಿತೃಲೋಕವಭೇದ್ಯ । ಚದುರರೆ ಸಾಗಲು ನಿಮಗದಸಾಧ್ಯ॥

ಈ ಪ್ರಕಾರ ಮಾರ್ಗವನ್ನು ಹಿಡಿದ ಕಪಿವೀರರ ಗುಂಪಿನಲ್ಲಿ ಹನುಮಂತನನ್ನು ಕರೆದು ರಾಮನು—

ಶ್ಲೋ॥ ದದೌ ತಸ್ಯ ತತಃ ಪ್ರೀತಃ ಸ್ವನಾಮಾಙ್ಕಿತಶೋಭಿತಮ್। ಅಙ್ಗುಲೀಯಮಭಿಜ್ಞಾನಂ ರಾಜಪುತ್ರ್ಯಾಃ ಪರನ್ತಪಃ ॥ —(ಶ್ರೀ.ರಾ)

ಅ॥ ಹನುಮಂತನ ಮೇಲೆ ಪ್ರೀತನಾಗಿ ರಾಮನು ಸೀತಾದೇವಿಗೆ ಗುರ್ತುಹತ್ತುವದಕ್ಕಾಗಿ ತನ್ನ ಹೆಸರಿನ ಮುದ್ರೆಯುಂಗುರವನ್ನು ಕೊಟ್ಟನು.

ಇದನ್ನು ಪರಮಾನುಗ್ರಹವೆಂದು ಭಾವಿಸಿ ಹನುಮಂತನು ಅಂದಿನಿಂದ ಶ್ರೀರಾಮಚಂದ್ರನ ದಾಸ್ಯಭಕ್ತಿಗಾರಂಭಿಸಿದ್ದಾನೆ. ದಾಸ್ಯದಿಂದ ಚಿತ್ತಶುದ್ಧಿಯಾಗುವದೆಂಬ ವಿಷಯದಲ್ಲಿ ಕವಿ ಹೇಳಿರುವದೇನೆಂದರೆ—

ಶ್ಲೋ॥ ಜ್ಞಾನೇನ ಮುಕ್ತಿಃ ಕಿಲ ತತ್ತು ಸತ್ತ್ವತ। ಸ್ತತ್ಸಿದ್ಧಯೇ ಶ್ರಾಮ್ಯಸಿ ರೇ ವೃಥಾ ಕುತಃ । ತ್ವಂ ನಿತ್ಯದಾಸತ್ವಮುಪಾಶ್ರಯ ಪ್ರಭೋ। ಸ್ತಸ್ಮಿಂಸ್ತು ಸತ್ತ್ವಂ ಕಿಮು ನಾಸ್ತಿ ನಿತ್ಯದಾ ॥ —(ಸು.ಲಾ)

ಅ॥ ಜ್ಞಾನದಿಂದ ಮುಕ್ತಿಯಷ್ಟೆ. ಆ ಜ್ಞಾನವು ಸತ್ತ್ವಗುಣದಿಂದ ದೊರೆಯುತ್ತದೆ. ಆ ಸತ್ತ್ವಗುಣವನ್ನು ಪಡೆಯುವದಕ್ಕೆ ವ್ಯರ್ಥವಾಗಿ ಏಕೆ ಪ್ರಯಾಸಪಡುತ್ತಿ? ಪ್ರಭುವಾದ ರಾಮಚಂದ್ರನ (ನಿತ್ಯ+ದಾಸತ್ವಂ) ಅಖಂಡಸೇವೆಯನ್ನು ಮಾಡು. ಅದರಲ್ಲಿ (ನಿತ್ಯದಾ) ನಿತ್ಯತ್ವವನ್ನು ಕೊಡುವಂಥ ಸತ್ತ್ವವಿಲ್ಲವೇನು?

ಆದ್ದರಿಂದಲೇ ಪೀಠಿಕೆಯಲ್ಲಿ "ಸ್ವಾಮಿದಾಸ್ಯವಾಡೊ" ಎಂದು ಹೇಳಿರುವದು. ಜಗತ್ತಿನಲ್ಲಿ ಉತ್ತಮದಾಸನೆನಿಸುವನು ದುರ್ಲಭನು. ಸಾಮಾನ್ಯವಾಗಿ—

ಶ್ಲೋ॥ಆಹಾರೇ ವಡಬಾನಲಶ್ಚ, ಶಯನೇ ಯಃ ಕುಂಭಕರ್ಣಾಯತೇ,। ಸನ್ದೇಶೇ ಬಧಿರಃ, ಪಲಾಯನವಿಧೌ ಸಿಂಹಃ, ಶೃಗಾಲೋ ರಣೇ, ॥ ಅನ್ಧೋ ವಸ್ತುನಿರೀಕ್ಷಣೇಽಥ ಗಮನೇ ಖಞ್ಜಃ, ಪಟುಃ ಕ್ರನ್ದನೇ,।ಭಾಗ್ಯೇನೈವ ಹಿ ಲಭ್ಯತೇ ಪುನರಸೌ ಸರ್ವೋತ್ತಮಃ ಸೇವಕಃ ॥ —(ಸು)

ಟಿ॥ ಉಣ್ಣುವದರಲ್ಲಿ ಬಡಬಾಗ್ನಿ, ಮಲಗುವದರಲ್ಲಿ ಕುಂಭಕರ್ಣ, ಏನಾದರೂ ಹೇಳಿದರೆ ಕಿವುಡ, ತಪ್ಪಿಸಿಕೊಂಡು ಓಡಿಹೋಗುವುದರಲ್ಲಿ ಸಿಂಹ, ಯುದ್ಧದಲ್ಲಿ ನರಿ, ಪದಾರ್ಥಗಳನ್ನು ನೋಡುವದರಲ್ಲಿ ಕುರುಡ, ನಡೆಯುವದರಲ್ಲಿ ಕುಂಟ, ಅಳುವದರಲ್ಲಿ ಗಟ್ಟಿಗ—ಇಂಥ ಉತ್ತಮನಾದ ಸೇವಕನು ಸಿಕ್ಕುವದು ಭಾಗ್ಯವೇ ಸರಿ! ಅಥವಾ (ಶ್ರೀರಾಮಚಂದ್ರನಿಗೆ ಸಿಕ್ಕಿದ ಮಾರುತಿಯಂಥ) ಉತ್ತಮನಾದ ಸೇವಕನು ಸಿಕ್ಕುವದು ಭಾಗ್ಯವೇ ಸರಿ.

ಅತ್ತ ಉಳಿದ ದಿಕ್ಕುಗಳಿಗೆ ಹೋಗಿದ್ದವರೆಲ್ಲ ಸೀತೆಯನ್ನು ಕಾಣದೆ ತಾರಮ್ಮಯ್ಯನ್ನಾಡಿ ಕೊಂಡು ಬಂದುಬಿಟ್ಟರು. ದಕ್ಷಿಣಕ್ಕೆ ಹೊರಟವರು ಹೋಗಹೋಗುತ್ತ ಒಂದು ಕತ್ತಲೆಯಾದ ಗುಹೆಯನ್ನು ಹೊಕ್ಕು ದಾರಿಗಾಣದೆ ಮುಂದೆ ಸಾಗುತ್ತಿದ್ದಾರೆ—

ಕಂ॥ ನಾನುದ ಮಹಿಮೆಯಂದೆನಿತೋ! । ತಾವಂ ನನುಂ ಪರಿದ ಮುನಿಯ ಮನದಂದದೊಳು ॥ ಸ್ವಾನುಂ ಧಾಮುಂ ಕಣ್ಗೊಳಿ । ನೇಮದಿನಾ ಪ್ರಭೆಯೊಳ್ಪೆದಿದರ್ಕಪಿವೀರರ್ ॥ —(ಹ.ರಾ)

ಟಿ॥ ಧಾಮಂ—ಕಾಂತಿಯು. ಕಣ್ಗೊಳಿ—ಕಾಣಿಸಲು.

ಮುಂದೆ ಹೋಗಿ ನೋಡಲು—

ಕಂ॥ ತರುಲತೆಗಳ್ಕನಕಮಯಂ । ಸರಸಿಯುದುಂ ನೋಡೆ ಹೇಮಜಲಪರಿಪೂರ್ಣಂ ॥ ಧರೆಯೆಲ್ಲಂ ಸ್ವರ್ಣಮಯಂ।ಸಿರುಕಿಸೆ ಕಣ್ಗೊಳಿಪುದೆತ್ತಲುಂ ಕನಕಮೆ ತಾಂ ॥ —(ಅ.ಪ್ರ.ನಾ)

✓ಕೀ॥ ಅಲ್ಲಿ ಸ್ವಯಂಪ್ರಭೆ ತಪದೊಳಗಿರೆ ತಾ।ವೆಲ್ಲ ಬಂದ ಕಾರ್ಯವ ತಿಳಿಸೆ ॥ ತಂದಳವರ ಕಣ್ಮುಚ್ಚಿಸಿ ಬಯಲಿಗೆ।ಬಂದಳಿನಕುಲೇಂದ್ರಗೆ ನಮಿಸೆ ॥

ಸ್ವಯಂಪ್ರಭೆ ಬಂದು ರಾಮನನ್ನು ಸ್ತುತಿಸುತ್ತಾಳೆ—

### ಮುಖಾರಿ—ತ್ರಿಪುಟ

ಶ್ರೀರಾಮ ರಾಕ್ಷಸಭೀಮ ರವಿಕುಲ—ಸೋಮ ಮುನಿಜನರಂಜನ ! ಸತತಕಾಮಿತಾರ್ಥಪ್ರನಿತ್ತು ರಕ್ಷಿಸು—ಸ್ವಾಮಿ ಹರಧನುಭಂಜನ ॥ಪ॥ ರಾಜೇಂದ್ರ ರಾಘವ ರಾಮಚಂದ್ರನೆ—ರಾಮ ರಘುಕುಲಪುಂಗವ । ರಜನೀಚರಾವಳಿಹರಣ ದೀಕ್ಷಿತ—ರಾಜರಾಜಸುವೈಭವ ॥ ೧ ॥ ವೇದಾಂತಸಾರಾ ಸಪ್ತತಾಲೋ—ಚ್ಛೇದ ತ್ಯಪರಾಕ್ರಮ । ವಿದಿತಾಖಿಲಾರ್ಥ ಜಗದ್ಗುರೋ ಜಿತ—ಭಾರ್ಗವ ದೇವೋಸ

ತ್ತಮ ॥೨॥ ಶ್ಯಾಮಲಾಂಗ ಸುಂದರ ಶೂರ ಶಿವನುತ-ಸರ್ವಮುನಿಜನಸಂಸ್ತುತ। ಕಮನೀಯವೇಷ ರಘೂತ್ತಮ ದೇ-ವೇಶ ಚಿದ್ರೂಪಾನ್ವಿತ ॥ ೩ ॥ —(ಭಕ್ತಿ.ಗೀ)

ವಾನರರು ಮುಂದೆ ಸಾಗುತ್ತಲೇ ಸಮುದ್ರವು ಕಾಣಬಂದಿದೆ—

ಕಂ॥ ಹರಿಯೊಲ್ವರಚಕ್ರಯುತಂ; ।ಹರನೊಲ್ಮಾಸದ್ರಿಮಂದಿರಂ; ವಿಪಿನದವೊಲ್ ॥ ವರವಿದ್ರುಮಾನ್ವಿತಂ; ಭಾ।ಸ್ಕರನೊಲ್ಗೋಸಿಕರ ಶೋಭಿ; ತಾನೆಸಲೆಸೆಗುಂ ॥ —(ಹ.ರಾ)

ಟಿ॥ ಚಕ್ರ—ಸುಳಿ, ಚಕ್ರಾಯುಧ. ಅದ್ರಿಮಂದಿರಮ್—ಹರನು ಕೈಲಾಸಪರ್ವತವೇ ಮನೆಯಾದವನು; ಸಮುದ್ರವು ಪರ್ವತಗಳಿಗೆ ಮನೆಯಾದದ್ದು. ವಿದ್ರುಮ—ಹವಳದ ಬಳ್ಳಿ, ಬಹಳ ಮರಗಳು. ಗೋ—ನೀರು, ಕಿರಣ.

ಅದನ್ನು ನೋಡಿದ ಕೂಡಲೆ ಅಂಗದನು—

✓ಸಾ॥ ದಾಟಲಾರೆವಿದನಾ ಸುಗ್ರೀವನು।ಬೇಟೆಯನಾಡುವನೆಮ್ಮ; ॥ ಆಟವಲ್ಲ; ನಿರಶನದಿಂ ಸಾವುದೆ।ಸಾಟಿಯಿಲ್ಲದಿಹ ಧರ್ಮ ॥

ಎಂದು ಎಲ್ಲರನ್ನೂ ನಿರಾಶೆಗೊಳಿಸಿ ಪ್ರಾಯೋಪವೇಶದಲ್ಲಿ ನಿಂತನು. ಆಗ ಜಾಂಬವಂತನು—

ಶ್ಲೋ॥ ಅನಿರ್ವೇದಃ ಶ್ರಿಯೋ ಮೂಲಮನಿರ್ವೇದಃ ಪರಂ ಸುಖಮ್ ॥ ಅನಿರ್ವೇದೋ ಹಿ ಸತತಂ ಸರ್ವಾರ್ಥೇಷು ಪ್ರವರ್ತಕಃ ॥ —(ಶ್ರೀ.ರಾ)

ಅ॥ ನಿರಾಶೆಯನ್ನು ಹೊಂದದೆ ಇರುವದು ಐಶ್ವರ್ಯಕ್ಕೆ ಮೂಲವು, ಹೆಚ್ಚಿನ ಸುಖವು. ಅದೇ ಯಾವಾಗಲೂ ಎಲ್ಲಾ ಕಾರ್ಯಗಳಲ್ಲಿಯೂ ಮುಂದುವರಿಸುವದು.

ಎಂದು ಹೇಳುತ್ತಿರುವಷ್ಟರಲ್ಲಿ ಹಿಂದಿನಿಂದ ಸಂಪಾತಿಯೆಂಬ ಹದ್ದು ಕೂಗುತ್ತಿದೆ—

ನೋಟು—ಆದಿತಾಳ

ಸಿಕ್ಕಿತು ಸಿಕ್ಕಿತು ಸಿಕ್ಕಿತು ಹಾ! ।ದಕ್ಕಿತು ದಕ್ಕಿತು ದಕ್ಕಿತು ಹಾ! ॥ ಪ ॥ ರೆಕ್ಕೆಯು ಸುಟ್ಟಮೇಲೆಲ್ಲಾ ಸಿಕ್ಕಲಿ।ಹಾರ ॥ ಇಕ್ಕೋ ಈ ದಿನ ನನ।ಗಿಕ್ಕಿದ ದೇವನು ॥ ೧ ॥ ಹೊಟ್ಟೆಗಿಲ್ಲದೆ ನಾನು।ಕಷ್ಟಪಡುತಲಿದ್ದೆ ॥ ಇಷ್ಟೊಂದು ತಿಂದು ನಾನು । ಪುಷ್ಟಿಗೊಳ್ಳುವೆನಿನ್ನು ॥ ೨ ॥ ಒಂದೊಂದ ತಿನ್ನುತ।ಚೆಂದದಿ ಬಹು ದಿನ ॥ ಕುಂದನು ಕಳೆವೆನು।ಇಂದಿನ ಭಾಗ್ಯದಿಂದ ॥ ೩ ॥

ಈ ಹದ್ದಿಗೆ ಆಹಾರವಾಗಿ ನಮ್ಮ ಶರೀರವನ್ನಾದರೂ ಸಾರ್ಥಕಮಾಡಿಕೊಳ್ಳೋಣವೆಂದು ಅಂಗದನೆನ್ನಲು ಜಾಂಬವಂತನು ಹೇಳುತ್ತಾನೆ—

✓ಚೌ॥ ಹೊಗುವುದರಿನಗರವನು ನೆರೆಕೈ—ಮಿಗಿಲೆನಲು ತೋರಿಸುವದು। ಅಘಹರನ ಮೆಚ್ಚಿಪುದು ಸಮರದ—ಬಗೆಯೊಳದು ಶೋಭಿಸುವದು ॥ ಖಗಕುಲೇಂದ್ರಜಟಾಯುವಿನವೋಲ್—ಜಗದಿ ಕೀರ್ತಿಯನುಳಿಪುದು । ಸೊಗಸೆನಿಪುದೇ ಹೊರತು ಬರಿಸಾ—ವಿಗೆ ಬಯಸೆ ಬರಿದೆನಿಪುದು ॥

ಆಗ ಸಂಪಾತಿ ಹೇಳಿದ್ದು—

✓ದಿಂ|| ಆರು ನೀವೆಂದಾ ಜಟಾಯುವಿನ ಮಾತ । ಸಾರಿ ಹೇಳಿದಿರಿಂತೆನಗೆ ತಮ್ಮನಾತ ॥ ಹಾರಿ ರವಿಯಿಂ ತಮ್ಮನನು ಪೊರೆಯೆ ನಾನು । ಮೀರಿ ಸುಡೆ ಪಕ್ಕಂ ಬಿದ್ದೆ ಪೇಳಲೇನು ॥

ಎಂದು ದುಃಖಿಸುವ ಸಂಪಾತಿಗೆ ಜಾಂಬವನು ಜಟಾಯುವಿನ ವೃತ್ತಾಂತವನ್ನೆಲ್ಲ ಹೇಳಿ ಸಮಾಧಾನಗೊಳಿಸುತ್ತಾನೆ—

ಶ್ಲೋ|| ತಸ್ಯ ಚ ಪ್ರವಯಸೋ ಜಟಾಯುಷಃ । ಸ್ವರ್ಗಿಣಃ ಕಿಮಿವ ಶೋಚ್ಯತೇಽಧುನಾ ॥ ಯೇನ ಜರ್ಜರಕಲೇವರವ್ಯಯಾ। ತ್ಕ್ರೀತಮಿಂದುಕಿರಣೋಜ್ಜ್ವಲಂ ಯಶಃ ॥ —(ಸು)

ಅ|| ಸ್ವರ್ಗಸ್ಥನಾದಂಥ ಆ ಮುದುಕನಾದ ಜಟಾಯುವಿಗಾಗಿ ಈಗ ಏಕೆ ದುಃಖಿಸುತ್ತಿ? ಅವನು ತೀರ ಹಳೇದಾದ ಶರೀರವನ್ನು ಕೊಟ್ಟು ಬೆಳದಿಂಗಳಂತೆ ಬೆಳ್ಳಗಿರುವ ಕೀರ್ತಿಯನ್ನು ಕೊಂಡುಕೊಂಡಿದ್ದಾನೆ.

ಆಗ—

✓ಕೀ|| ಅನುಜನ ಬಂಧುಗಳೆಂದಾ ಸೀತಾ । ವನಿತೆಯು ಲಂಕೆಯೊಳಿರುವದನು ॥ ವನಚರರಿಗೆ ಪೇಳ್ದೊಡನೆಯೆ ಪಕ್ಕಗ । ಳನು ಪಡೆದನು ಗೃಧ್ರಾಧಿಪನು ॥

ಇನ್ನು ಮುಂದಿನ ಕಾರ್ಯವನ್ನು ನೋಡಬೇಕೆಂದು 'ಯಾರು ಸಮುದ್ರವನ್ನು ಹಾರಬಲ್ಲಿರಿ?' ಎಂದು ಜಾಂಬವಂತನು ಕೇಳಿದ್ದಕ್ಕೆ ಎಲ್ಲರೂ ಸುಮ್ಮನಿದ್ದದ್ದರಿಂದ ಅವನು ಮತ್ತೆ ಹೇಳುತ್ತಾನೆ—

ಶ್ಲೋ|| ಕಿಮಿತಿ ಭಜಥ ಮೌನಂ ವಾನರಾ ಮಾನಹೀನಾಃ । ಸಗರರಚಿತಕುಲ್ಯೋಲ್ಲಙ್ಘನೇ ಕುಣ್ಠಿತಾಶಾಃ ॥ ಅಕಲಶಭವಲೇಹ್ಯಾಂ ದುಶ್ಯಮಂ ಬಾಡಬಾದ್ಯೈ । ರನವಧಿಮಯಶೋಬ್ಧಿಂ ಕಿಂ ಸಮರ್ಥಾಸ್ತ್ವರೀತುಮ್ ॥ —(ರಾ.ಚಂ)

ಅ|| ಮಾನಹೀನರಾದ ಕಪಿಗಳೆ, ಏಕೆ ಸುಮ್ಮನಿದ್ದೀರಿ? ಸಗರನ ಮಕ್ಕಳು ತೋಡಿದ ಒಂದು ಕಾಲುವೆಯನ್ನು ಹಾರುವದಕ್ಕೆ ನಿರಾಶರಾದ ನೀವು ಅಗಸ್ತ್ಯರು ಕುಡಿಯಲಾಗದೆ ಇರುವಂಥ ಬಡಬಾಗ್ನಿಯಿಂದ ಇಂಗದಂಥ ಅಪಾರವಾದ ಅಪಕೀರ್ತಿಯೆಂಬ ಸಮುದ್ರವನ್ನು ಹೇಗೆ ದಾಟುವಿರಿ?

ಇದಲ್ಲದೆ ಲಂಕೆಗೆ ಹೋಗಬೇಕಾದವರಿಗೆ ಇರಬೇಕಾದ ಹೆಚ್ಚಿನ ಯೋಗ್ಯತೆಯೇನೆಂದರೆ—

✓ರ|| ಇರಬೇಕವನಲ್ಲಿ ಬಹು ಸಾಮರ್ಥ್ಯ । ಅದು ಹೆಚ್ಚಿನ ಕೃತ್ಯ ॥ ಪ ॥ ದಾಟಬೇಕು ಶತಯೋಜನಜಲವ । ಸಾಟಿಯಿಲ್ಲವೆನೆ ತಳೆವುದು ಚಲವ । ಹುಡುಕಲಿಬೇಕಣುವಾಗುತ್ತಲ್ಲಿ । ಕೆಡುಕರೆಲ್ಲ ತುಂಬಿಹ ಪುರದಲ್ಲಿ। ಅರಿಯಬಾರದಿತರರು ತಾವಾಗಿ । ಬೆರಗುಗೊಳಿಸುತೆಲ್ಲರ ಬಹುವಾಗಿ । ಇರುಳೊಳಲ್ಲಿ ಬಿಡದರಸಲುಬೇಕು । ಪರಿಪರಿ ಕೌಶಲ ತಿಳಿದಿರಬೇಕು । ಸಮಯದಿ ಮಾತರಿತಾಡಲುಬೇಕು । ಶ್ರಮೆಯಿಂದಾಯಸಗೊಳದಿರಬೇಕು । ಒಡೆಯನ ಮಡದಿಯ ನುಡಿಸಲುಬೇಕು । ತೊಡರಿದವರ ಸುಟ್ಟುರುಹಲುಬೇಕು ॥

ಇದಕ್ಕೆ ಅಂಗದನ ಉತ್ತರ—

✓ಚೌ॥ ಜೀಯ, ಜವನಿಕೆಯೇಕೆ? ನೀವೆಂ–ಬೀಯಶೇಷಗುಣಂಗಳು। ದಾಯಗೊಂಡಿಹವೀಶ್ವರನೊಳುಂ–ವಾಯುತನುಜನೊಳೀಗಳುಂ ॥ ಈಯಶೇಷರೊಳಾರುಮದಕೆ ಸ–ಮರ್ಥರಪ್ಪುದ ಕಾಣೆ ನಾಂ । ರಾಯಕಟಕದೊಳಿರ್ಪ ನಾಯಕ–ರಾಯತಂಗಳ ಬಲ್ಲೆ ನೀಂ ॥

ದಾಸ್ಯಭಕ್ತಿಯಲ್ಲಿರಬೇಕಾದ ಈ ಗುಣಗಳನ್ನು ಸೂಚಿಸುವದಕ್ಕೇ ಪೀಠಿಕೆಯಲ್ಲಿ "ನಾಥನ ಕಾರ್ಯ್ಯವ" ಎಂಬ ನುಡಿ ಬಂದಿರುವದು.

ಇತ್ತ ಆದೇ ಸರಿಯೆಂದು ಜಾಂಬವಂತನು ಭುಜವನ್ನು ತಟ್ಟಲು ಹನುಮಂತನು ಎದ್ದು ನಿಂತಿದ್ದಾನೆ.

ಕಂ॥ ಪರಿಕಿಸೆ ಸುಶೀಲಮುಳ್ಳಗೆ। ಹರಿ ಹರಿಣಂ; ಶರಧಿ ಕುಲ್ಯಮನಲಂ ಸಲಿಲಂ; ॥ ಸುರಗಿರಿ ಮೊರಡಿ; ವಿಷಂ ಸುಧೆ । ಯುರಗಂ ತಾಂ ಕುಸುಮಮಾಲೆಯಪ್ಪುದು ಜಗದೊಳ್ ॥ —(ಸು)

ಟಿ॥ ಹರಿ—ಸಿಂಹ. ಮೊರಡಿ—ದಿಬ್ಬ.

ಒಡನೆ ಪುಷ್ಪವೃಷ್ಟಿಯಾಗಿದೆ. ಹನುಮಂತನು ಮಹೇಂದ್ರಾಚಲವನ್ನು ಹತ್ತಿ ಬಾಲವನ್ನು ನಿಗುರಿಸಿಕೊಂಡು ಹೆಜ್ಜೆಯನ್ನೂರಿ ಹಾರುತ್ತಲಿ—

ಷ॥ ಪೊಡವಿಗಿಳಿದುದು ಶೈಲ; ಫಣಿಪನ । ಪೆಡೆಗಳದುರಿದವಷ್ಟಗಜಗಳು। ಕೊಡಹಿದವು ಮಕುಟಗಳ; ಕಿಟಿ ಲಟಕಟಿಸಿದುದು; ಕಮಠಾ ॥ ಉಡುಗಿಯುಸಿರಿಡದಾಯ್ತು; ಬಲಿ ಕಂಗೆ। ಡುತ ಕಳವಳಗೊಂಡನಮಮಾ!। ಕಡುಜವದೊಳಂಜನಿಯ ಸುತ ಲಂಘಿಸಿದ ಭಾರದಲಿ ॥ —(ರಾ.ಕ.ಕು)

ಟಿ॥ ಶೈಲ—ಮಂದರಾಚಲ. ಕಿಟಿ—ಆದಿವರಾಹ. ಉಡುಗಿ—ಸುಕ್ಕಿಕ್ಕೊಂಡು.

ಹೀಗೆ ಹೊರಟ ನಡೆವಳಿಕೆಯನ್ನು ಲಕ್ಷ್ಯದಲ್ಲಿಟ್ಟುಕೊಂಡೇ ಪೀಠಿಕೆಯಲ್ಲಿ "ಒಡೆಯನು ಕಾರ್ಯಕೆ ನಡೆಯೆನೆ ಹರುಷದಿ" ಎಂದು ಮುಂತಾಗಿ ಹೇಳಿರುವದು.

ಮುಂದೆ ನಡೆದದ್ದೇನೆಂದರೆ—

ವೃ॥ ಉದಧಿಯುಪೇಕ್ಷಿಸಲ್ಮದದೊಳೇಳ್ದುರೆ ಸಂತಯಿಪಾ ನಗೇಂದ್ರನಂ। ಮುದದೊಳೆ ಮುಟ್ಟಿ, ಸಾಗಿ, ಸುರಸಾಖ್ಯೆಯ ಗರ್ಭವ ಪೊಕ್ಕು ಬಂದು ತಾಂ ॥ ತ್ರಿದಶರನೊಪ್ಪಿಸುತ್ತೆ, ನೆಳಲಂ ನೆರೆನುಂಗುವ ಸಿಂಹಿಕಾಖ್ಯೆಯಂ। ಸದೆದು, ಸಮೀರಜಂ ನೋಣದ ರೂಪದೆ ಸಾರಿದನಾಗ ಲಂಕೆಯಂ ॥

ಟಿ॥ ನಗೇಂದ್ರನಂ—ಮೈನಾಕಪರ್ವತವನ್ನು.

✓ಸಾ॥ ಲಂಕಿಣಿಯವಸಸು ತಡೆಯಲಸಳ ಬಲು। ಜಿಂಕವಳಿಯಲವನಿಂದ ॥ ಭೋಂಕನವಳು ಸದ್ಗತಿಪಡೆಯಲು ನಿ। ಶ್ಯಂಕೆಯಿಂದ ತಾ ಬಂದ ॥

ಮಾರುತಿಯ ಈ ನಡೆವಳಿಕೆಯನ್ನು ನೋಡಿಯೇ ಪೀಠಿಕೆಯಲ್ಲಿ "ನಡುನಡುವೆಯೆ ಬಲು" ಎಂಬ ನುಡಿಯನ್ನು ಹೇಳಿರುವದು.

**ಹನುಮಂತನು ಲಂಕಾಪ್ರವೇಶ ಮಾಡಿದಾಗ—**

ಷ|| ಅಂಡಲೆಯೆ ಬಲುಸಿದ್ರೆ, ಸಳಿಸಭ। ವಾಂಡಭವನದ ತಿಮಿರರಕ್ಕಸಿ। ಚಂಡ ಕರದೀಪವನು ತೊಲಗಿಸಿ, ಮಣಿಯ ಮಂಚದಲಿ || ಮಂಡಿಸಿದಳೆನೆ ತಗಡುಗತಲೆ। ಚಂಡಿಸಿತು ತತ್ಸಮಯದಲಿ ಕೋ । ದಂಡದೀಕ್ಷಾಚಾರ್ಯಚರಸಿದು ಸಮಯ ತನಗೆಂದ || —(ತೊ.ರಾ)

**ಟಿ|| ಚಂಡಕರ—ಸೂರ್ಯ. ತಗಡುಗತ್ತಲೆ—ಹರಡಿದ ಕತ್ತಲೆ.**

✓ ರ|| ಹೊಕ್ಕ। ಹನುಮಂತನು ಲಂಕೆಯ ಹೊಕ್ಕ || ರಾಕ್ಷಸರಿಗೆ ಸಿಕ್ಕ ||ಪ|| ತೋರಿಕೊಳದೆ ಕಾವಲುಗಾರರಿಗೆ। ಚೋರಗಂಡಿಯಲಿ ಪೊಕ್ಕನು ಪುರಿಗೆ । ಎಡ ಬಲಪಕ್ಕದೊಳಿಹ ವೀಧಿಗಳ । ಬಿಡದೆ ಹುಡುಕಿದನು ಯೋಚಿಸಿ ಬಹಳ । ಗೀತ ವಾದ್ಯನರ್ತನಶಾಲೆಗಳ । ಮಾತನಾಡಿಸಿದನರಿಯಲ್ಕವಳ । ಅಂಗಡಿಗಳ ದೇವ ಗೃಹಾದಿಗಳ। ಅಂಗಳಗಳ ಮೇಣ್ ಪ್ರಾಕಾರಗಳ। ಹಿಂಗದೆ ಸಂದುಗಳೆಲ್ಲವ ನೋಡಿ। ಅಂಗನೆಯನು ಕಾಣದೆ ಬಲುಬಾಡಿ। ಮುದ್ರೆಯುಂಗುರದ ಬಲು ಬೆಳಕಿನಲಿ। ಸದ್ದಿಲ್ಲದೆಹುಡುಕಿದನಲ್ಲಲ್ಲಿ। ನೂರು ಯೋಜನದಪುರದಗಲದಲಿ। ವಿಾರಿ ಹುಡುಕಿದನು ಕಟ್ಟೆರಕದಲಿ । ಮನೆಮನೆಗಳೊಳೊಳಹೊಕ್ಕರಸುತ್ತ । ತೊನೆದನು ಶೂರ್ಪನಖಿಯ ಮನೆಯತ್ತ। ಅವಳ ಭಯಂಕರ ಸಖಿಯರ ನೋಡಿ। ಪವನಜನಚ್ಚರಿಯಿಂದಲಿ ಕೂಡಿ। ಮದ್ಯಮಾಂಸಪಿಡಿದಡಿಗೆಯ ಮನೆಯ । ವಧ್ಯಸ್ಥಲದೊಳಗಿಹ ವಾಸನೆಯ। ನೋಡಿ ಥೂಂಕರಿಸಿ ಮುಂದಕೆ ಸಾಗಿ । ಕೋಡಗನೀಕ್ಷಿಸಿದನು ಬಲು ಬಾಗಿ ||

**ಅಲ್ಲಿ ಕುಂಭಕರ್ಣನನ್ನು ಕಂಡು—**

✓ ಚೌ|| ಜಗದ ಕೊಲೆಗೆಲಸದಲಿ ಬಳಲಿಕೆ—ಬಿಗಿದ ಭೈರವರೂಪನೋ। ಮಿಗಿಲು ರತಿಸುಖವಡೆದು ನಿದ್ರಿಪ—ಬಗೆಯ ವಿಲಯಕೃತಾಂತನೋ || ಉಗಿಯ ನೀರ್ದುರಂಬಿರ್ದು ಬೆಳೆದಿಹ—ಮುಗಿಲ ತಂಡಕೆ ಮೂಲನೋ। ವಿಗಡರಕ್ಕಸನಾಗಿ ಲಂಕೆಯೊಳೊಗೆದಿರುವ ಘಟಕರ್ಣನೋ ||

✓ ದಂ|| ಕೊಲ್ಲಲೆಂದವನಂ ನೋಡಿ ರೋಷದಿಂದ। ಹಲ್ಲ ಕಡಿದುಂ ಧರ್ಮವನು ಮನಕೆ ತಂದ || ಕೊಲ್ಲೆ ನಿದ್ರಿತನಂ ಯೋಗ್ಯವಲ್ಲವೆಂದು। ಬಲ್ಲತನದಿಂದಂ ಮುಂದೆ ಹೋದನಂದು ||

**ಆದರ ಮುಂದಿನ ಮನೆಯಲ್ಲಿ—**

ಷ|| ಹರಿಕಥಾಸಂಗತಿಯ ಚಿತ್ರೋ। ತ್ಕರದಮಯ ಭಿತ್ತಿಗಳು ನೋಡಲು;। ಹರಿಯ ನಾಟಕದಂಗನಾವಿಭ್ರಮವಿಲಾಸಮಯ; || ಹರಿಯ ಗೀತದ ಗಾಯಕರ ವಿಸ್ತರಣಮಯವಾಗಿರ್ದುದೈ; ಜಾ । ಗರದಲಿರ್ದನು ವರವಿಭೀಷಣದೇವ ಹರಿದಿನದ || —(ತೊ.ರಾ)

**ಅವನನ್ನು ನೋಡಿ—**

✓ಚೌ॥ ಘೋರವಿಷಕಾಸಾರಪಂಕದ–ಸಾರಸದ ಸುಮದಂದದಿ । ಚಾರು ರತ್ನವು ಕಾಡುಗಲ್ಲೊಳು–ತೋರಿಕೊಂಡಿರುವಂದದಿ ॥ ವಿಾರಿ ದುರ್ಜನರೆನಿಪರೆಲ್ಲರು–ಸೇರಿಕೊಂಡಿಹ ಸಂಘದಿ । ತೋರುತಿಹ ಹರಿಶರಣನೆಂದನು – ಮೀರೆ ದಪ್ಪಿದ ಮೋದದಿ ॥

**ಅದರ ಮುಂದಿನ ಮನೆಗೆ ಬರಲು—**

✓ಸಾ॥ ಪರವಧುಗಳನುಪಭೋಗಿಪ ರಕ್ಕಸ । ಸರಮನೆಯೊಳಹೊಗೆ ಸೀನು ॥ ತರವಲ್ಲೆಂದವು ಬಾಗಿಲ ಗಿಳಿಗಳು । ಬೆರಗಾಗಲು ಕಪಿ ತಾನು ।

**ಆಮೇಲೆ ಅದನ್ನು ರಾವಣನ ಮನೆಯೆಂದು ತಿಳಿದು—**

ಷ॥ ಬಡಗಿಯರು ಮಯವಿಶ್ವಕರ್ಮರು । ಮೃಡಸರೋಜಚರಿವಗೆ ಬೇಡಿದ ಕೊಡುವವರು; ಭಂಡಾರಿ ಧನಪತಿ; ಗುರು ಮುಹೂರ್ತಿಕನು; ॥ ಎಡೆಗಳಿಂದ್ರಾದಿಗಳು; ಸಿರಿಯಲಿ । ಬಡವನೇ? ಬೆರಗೇನೆನುತ ಕೆಲ । ಸಿಡಿದು ಕಾಲಿಂದೊದೆದು ಕದವನು ಹೊಕ್ಕನಾ ಹನುಮ ॥ —(ತೊ.ರಾ)

**ಟಿ॥ ಎಡೆಗಳು—ಹತ್ತಿರ ಅಡ್ಡಾಡುವವರು.**

**ಹೀಗೆ ಅವನ ಸಜ್ಜೆಯ ಮನೆಗೆ ನುಗ್ಗಿ—**

✓ರ॥ ಕಂಡ ಹನುಮಂತನಾ ರಾವಣನ । ಸಜ್ಜನದಲ್ಲಣನ ॥ ಪ ॥ ತೊಡರಿನ ಪರ ತಲೆಯನು ಮೆಟ್ಟುತ್ತ । ಪೊಡವಿಯ ಕುವರಿಯನಾರೈವುತ್ತ । ಬೀರುವ ದಿವ್ಯಸುಗಂಧವನರಿದು । ಭೂರಿವೈಭವದೊಳಿಂದ್ರನ ಜರಿದು । ಅಲ್ಲಿಯ ಹೆಂಗುಸರೆಲ್ಲರ ನೋಡಿ । ಬಲ್ಲತನದಿ ಬಲುನಾಚಿಕೆಗೂಡಿ । ಕಂಡನಲ್ಲಿ ಕಪಿಯಾ ದಶಮುಖನ । ಭಂಡತನಕೆ ದೀಕ್ಷೆಯ ವಹಿಸಿಹನ । ನೀರುತುಂಬಿರುವ ಮುಗಿಲಂತಿಹನ । ಚಾರು ತನುರುಚಿಯ ನಗೆಮೊಗದವನ । ಹೊಳೆಯುವ ಕದಪಿನ ಕುಂಡಲದವನ । ಬೆಳೆದಿಹ ಭುಜದಂಡದಿ ಶೋಭಿಪನ । ಚಂಡಶಾಸನದಿ ಹೆಸರಾದವನ । ಮಂಡೋದರಿಯೊಡಗೂಡಿರ್ಪವನ ॥

**ಮಂಡೋದರಿಯಲ್ಲಿ ಸೀತೆಯ ಲಕ್ಷಣಗಳೆಂದು ರಾಮನು ಹೇಳಿದ್ದ ಕೆಲವು ಕಾಣಬರಲು ಚೆನ್ನಾಗಿ ನಿಟ್ಟಿಸಿ.—**

✓ಚೌ॥ ಕಂಡು ಕಾಲೊಳು ಕಾಕರೇಖೆಯ ಭಂಡೆ ಇವಳೆಂದೆನುತಲಿ । ಚಂಡಕಪಿ ಮನದರ್ಧಚಿಂತೆಯ–ತುಂಡುಗೈದಾಕ್ಷಣದಲಿ ॥ ಗಂಡುಗಲಿ ಹುಡುಕುತ್ತ ನೆರೆ ಶಶಿ -ಖಂಡವನು ತಾ ನೊಸಲಲಿ । ಕಂಡು ಕರಿಗೂದಲಿನ ಸುಳಿಯನು–ಪುಂಡಳೆಂದನು ಭರದಲಿ ॥

**ಹೀಗಾಗಿ ಸೀತೆಯು ಎಲ್ಲಿಯೂ ಕಾಣದ್ದರಿಂದ ಆತ್ಮಹತ್ಯೆಯನ್ನು ಮಾಡಿಕೊಳ್ಳಬೇಕೆಂದು ಯೋಚಿಸಿ ಧರ್ಮವನ್ನು ಸ್ಮರಿಸುತ್ತಾನೆ.**

ಶ್ಲೋ॥ ವಿನಾಶೇ ಬಹವೋ ದೋಷಾಃ ಜೀವನ್ ಪ್ರಾಪ್ನೋತಿ ಭದ್ರಕಮ್ । —(ಶ್ರೀ.ರಾ)

ಅ|| ಸತ್ತರೆ ಬಹಳ ದೋಷ; ಬದುಕಿದ್ದರೆ ಮಂಗಲವಾಗುತ್ತದೆ.

ಆಮೇಲೆ—

✓ ಕೀ|| ಅಲಸುತ್ತೆ ಹುಡುಕುವದರೊಳು ತ್ರಿಕೂಟಾ|ಚಲವನೆ ಕಿತ್ತೊಯ್ದಪೆನೆನುತ || ಬಲಿದ ಯತ್ನವನು ಮಾಡುವಷ್ಟರಲಿ| ಸುಳಿದುದಶೋಕಾವನಸಮರುತ||

ಅದರ ಗಂಧಕ್ಕೆ ಮನಸೋತು ಅಶೋಕವನಕ್ಕೆ ಬಂದು ನೋಡುತ್ತಾನೆ—

✓ ರ|| ಕಂಡ ಹನುಮಂತನಶೋಕವನವನು|ನಂದನನ ಜರಿವುದನು || ಪ || ಗಾಳಿಯೊಳಲುಗುತ್ತಿಹ ಹೊಂಬಾಳೆ|ಸಾಲ ಹಿಡಿದು ಬಾಯ್ದೆರೆದಿಹ ಬಾಳೆ| ಬಿರಿದು ಮರವ ತುಂಬಿಹ ದಾಳಿಂಬ|ಸುರಸವಾದ ಮಾಗಾಯ್ಗಳು ತುಂಬ| ಬಗೆಬಗೆ ಪಣ್ಣುಗಳಿಡಿದ ಮರಗಳು| ಬಗೆಬಗೆ ಹೂವುಗಳಿಡಿದ ಸರಗಳು|ಎಲ್ಲಿ ನೋಡಿದರೆ ಸುಮಪಲ್ಲಿಗಳು|ಮೊಲ್ಲೆ ಜಾಜಿಚಂಪಕಕುಸುಮಗಳು|ಅಲ್ಲಲ್ಲಿಯೆ ವಿಶ್ರಾಮಸ್ಥಲಗಳು|ಪಲ್ಲವದಿಂ ತುಂಬಿರುತಿಹ ನೆಲಗಳು | ಕಣ್ಗಿಂಪಾಗಿಹ ಕೃತಕಾಚಲಗಳು| ತಣ್ಣಗೆ ಸುಳಿವನಿಲನ ವಾಸನೆಗಳು| ಮೆರೆಯುತ್ತಿರ್ಪ ವಿಹಾರದ ಗೃಹಗಳು | ಮೊರೆಯುತ್ತಿಹ ಬಹುವಿಧವಿಹಗಂಗಳು ||

ಆ ವನಕ್ಕೆ ಹನುಮಂತನು ಬಂದದ್ದನ್ನು ಕವಿ ವರ್ಣಿಸಿರುವದೆಂತೆಂದರೆ—

ಶ್ಲೋ|| ಅಸೌ ಜನಕಸನ್ನಿಸೀಂ ತತ ಇತೋ ವಿಚಿನ್ವನ್ನ್ಸಹಾ|ದಶೋಕವನಿಕಾಮಗಾದಪಗತಾನ್ಯಮಾರ್ಗಭ್ರಮಃ || ಪರಾಮಖಿಲಪನ್ನತಿಂ ಶಮಧನೋ ಯಥಾ ನಿರ್ಮಮ | ಸ್ತ್ರಯಿರಾಮಖಿಲಕಿಲ್ಬಿಷಪ್ರಶಮನೈಕದಿವ್ಯೌಷಧೀಮ್ ||

—(ರಾ.ಚಂ)

ಅ|| ಉತ್ತಮಗತಿಯನ್ನು ಹುಡುಕುತ್ತ ಮನೋನಿಗ್ರಹವುಳ್ಳವನಾಗಿರುವ ನಿರಭಿಮಾನಿಯು ಸಮಸ್ತಪಾಪಗಳನ್ನೂ ಹೋಗಲಾಡಿಸುವಂಥ ದಿವ್ಯೌಷಧರೂಪವಾದ ವೇದವನ್ನು ಹೊಂದುವಂತೆ ಸೀತೆಯನ್ನು ಹುಡುಕಿದ ಹನುಮಂತನು ಬೇರೆ ಮಾರ್ಗಗಳ ಭ್ರಮೆಯನ್ನು ಕಳೆದುಕೊಂಡು ಅಶೋಕವನವನ್ನು ಹೊಂದಿದನು.

ಅಲ್ಲಿ ಅವನು ಮಾಡಿದ್ದೇನೆಂದರೆ—

✓ ಸಾ|| ಮರಗಿಡಗಳ ಲಂಘಿಸುತಲಿ ಮಾರುತಿ|ಸರಸಿಗಳನು ದಾಟುತ್ತ || ತಿರುತಿರುಗುತೆ ಬಂದಗರಮರವ ಕಂ|ಡರಸಿದನದ ನೋಡುತ್ತ ||

ಟಿ|| ಅಗರ–ಶಿಂಶಪಾ ಎಂಬ ಹೆಸರಿನ

ಅಲ್ಲಿ ಅವನಿಗೆ ಸೀತೆಯು ಕಾಣಬಂದದ್ದೆಂತೆಂದರೆ—

ಕಂ|| ಘನಕುಲಮಧ್ಯದೊಳೊಂದೆಡೆ| ಮಿನುಗುವ ಚಂಚಲೆಯೊ! ರಾಹುವಲೆ ಸೋಂಕಿದ ಚಂ|| ದ್ರನ ಕಲೆಯೋ! ಎನೆ ರಾಕ್ಷಸ | ವನಿತಾಜನಮಧ್ಯದಬ್ಜಮುಖಿಯಂ ಕಂಡಂ ||

—(ಹ.ರಾ)

ಆಕೆ ಹೇಗಿದ್ದಳೆಂದರೆ—

ಷ॥ ಏಕವೇಣೀಧರೆಯುನಶ್ರುಜ । ಲಾಕುಲಾಯುತಲೋಚನೆಯನು । ದ್ರೇಕಶೋಕಾಸ್ವಿತೆಯಸಂತಸಾಪವಿಹ್ವಲೆಯ ॥ ಶೋಕವನದಡಿಯಧಿಕಪುಣ್ಯಾ। ಶ್ಲೋಕಚರಿತೆಯ ಮಲಿನಪಟಪರಿ। ದಾಕ್ರತಿಯುಸವಿರಳಕೃಶಾಂಗಿಯ ಕಂಡನಾ ಹನುಮ ॥ —(ತೊ.ರಾ)

ಟಿ॥ ಶೋಕವನದಡಿಯ— ಅಶೋಕವನದಲ್ಲಿರುವಂಥ. ಮಲಿನಪಟ+ಪರಿದ(ಪರೀತ)+ ಆಕೃತಿಯ—ಮಾಸಿದ ಬಟ್ಟೆಗಳಿಂದ ಸುತ್ತಿದ ದೇಹವುಳ್ಳಂಥ.

ಸೀತೆಯನ್ನು ನೋಡಿದೊಡನೆ ಹನುಮಂತನಿಗೆ ಬಂದ ಕಲ್ಪನೆಯೇನೆಂದರೆ—

ಶ್ಲೋ॥ ಕಲ್ಯಾಣೀ ಬತ ಗಾಥೇಯಂ ಲೌಕಿಕೀ ಪ್ರತಿಭಾತಿ ಮೇ । ಏತಿ ಜೀವನ್ತಮಾನನ್ದೋ ನರಂ ವರ್ಷಶತಾದಪಿ ॥ —(ಶ್ರೀ.ರಾ)

ಅ॥ ಲೋಕದಲ್ಲಿ ಜನರು ಹೇಳುವ ಗಾದೆಯು ಮಂಗಲಕರವೆಂದು ನನಗೆ ತೋರುತ್ತದೆ. ಅದೇನೆಂದರೆ ಮನುಷ್ಯನಿಗೆ ಬದುಕಿದ್ದರೆ ನೂರುವರ್ಷಗಳ ಮೇಲಾದರೂ ಆನಂದವಾಗುತ್ತದೆ.

ಆದರೆ ಅದೇ ಸಮಯದಲ್ಲಿ ಸೀತೆಯನ್ನು ನೋಡಿ ವ್ಯಸನವಾಗಿದೆ. ಏಕೆಂದರೆ—

ಶ್ಲೋ॥ ಕಷ್ಟಂ ಖಲು ಮೂರ್ಖತ್ವಮ್ । ಕಷ್ಟಂ ಖಲು ಯೌವನೇಷು ದಾರಿದ್ರ್ಯಮ್ ॥ ಕಷ್ಟಾದಪಿ ಕಷ್ಟತರಮ್ । ಪರಗೃಹವಾಸಃ ಪರಾನ್ನಂ ಚ ॥—(ಸು)

ಅ॥ ಮೂರ್ಖನಾಗಿರುವುದು ಕಷ್ಟ; ಯೌವನದಲ್ಲಿ ಬಡತನವು ಕಷ್ಟ. ಕಷ್ಟಗಳೊಳಗೆಲ್ಲ ಮತ್ತೊಬ್ಬರ ಮನೆಯಲ್ಲಿರುವುದೂ ಮತ್ತೊಬ್ಬರ ಅನ್ನಕ್ಕೆ ಕೈ ಒಡ್ಡುವದೂ ಕಷ್ಟ.

ಆದರೂ ಆಕೆಯನ್ನು ಸೀತೆಯೆಂದರಿತು ಮನಸ್ಸಿನಲ್ಲಿಯೇ ಸ್ತೋತ್ರಮಾಡುತ್ತಾನೆ—

ಪುನ್ನಾಗವರಾಳಿ—ಏಕತಾಳ

ಧನ್ಯೆ ಧನ್ಯೆ ಸೀ । ದೇವೀ । ಧನ್ಯೆ ಧನ್ಯೆ ಸೀ ॥ ಪ ॥ ಮಾನ್ಯರೊಳಗೆ ಮಾನ್ಯೆ ರಘುಪ । ರೇಣ್ಯಮೋಹಿಸೀ॥ ಅ.ಪ ॥ ಪತಿಯನಗಲಿ ದೂರ ಬಂದ। ಸತಿಯ ಚರ್ಯೆಯ ॥ ಕ್ಷಿತಿಗೆ ತೋರಿಸುತ್ತಲಿರುವೆ। ಮತಿಯುತಾಗ್ರಗಣ್ಯೆ ಸೀನು ॥ ೧ ॥ ರಾಮ ನಾಮವನ್ನೆ ಸತತ। ನೇಮದಿಂದಲೀ ॥ ಪ್ರೇಮದಿಂದ ಧ್ಯಾನಿಸುತಿಹೆ। ಶ್ಯಾಮ ಸುಂದರಾಂಗಿ ಸೀನು ॥ ೨ ॥ ಎಷ್ಟು ತೋರ್ಪೆ ಸೀ ಅನುರಾಗ! । ಎಷ್ಟು ತೋರ್ಪೆ ಸೀ ವಿರಾಗ! ॥ ದುಷ್ಟಜನರ ಶಿಕ್ಷಕಳೆ। ಶಿಷ್ಟಜನರ ರಕ್ಷಕಳೆ ॥

ಆ ಹೊತ್ತಿಗೆ ಸರಿಯಾಗಿ—

✓ಸಾ॥ ಜನಕಜೆಯನು ಕಪಿ ಸಂತಯಿಪುದನೇ। ಕನಸ ಕಂಡು ದಶಕಂಠ ॥ ತನಗಾಕೆಯನೊಲಿಸಲು ತಾನೇ ಬಂ। ದನು ತಾ ಕಾಮನ ಬಂಟ ॥

ಅನೇಕ ರಕ್ಕಸಿಯರಿಂದ ಕೂಡಿ ಬಂದ ರಾವಣನು ಅವಳನ್ನು ಒಲಿಸುವದಕ್ಕಾಗಿ ಇಟ್ಟಿದ್ದ ರಕ್ಕಸಿಯರನ್ನು ವಿಚಾರಿಸಿದಾಗ ಅವರಲ್ಲೊಬ್ಬಳಾದ ಸರಮೆಯೆಂಬಾಕೆ ಹೇಳಿದ್ದೇನೆಂದರೆ—

ಷ॥ ಆಗುಳಿಕೆಯಲಿ, ಸೀನಿನಲಿ, ಸಡೆ । ವಾಗ, ನುಡಿವಾಗಲಸಿಕೆಗಳಲಿ, । ತಾಗುಗಳಲೆಡಹುಗಳಲೆಚ್ಚರಿಕೆಯಲಿ, ಮರೆವೆಯಲಿ,॥ ಜಾಗರದಲಿ, ಸ್ವಪ್ನದಲಿ,

ಸಂ। ರಾಗದಲಿ, ಚಿಂತೆಯಲಿ ರಘುಕುಲ । ಸಾಗರನ ನೆನಹಲ್ಲದಿಲ್ಲನ್ಯತ್ರ ಗತಿ ಸತಿಗೆ ॥ —(ತೊ.ರಾ)

ಟಿ॥ ತಾಗುಗಳಲಿ—ಏನಾದರೂ ತಾಕಿದಾಗ.

ಆದ್ದರಿಂದ್ಯ ಆಕೆಯನ್ನೊಲಿಸುವದಾಗಲಿಲ್ಲವೆನಲು ಸೀತೆಗೆ ರಾವಣನು ತಾನೇ ಹೇಳಿದ್ದೇನೆಂದರೆ—

ಶ್ಲೋ॥ ಇನ್ದ್ರಂ ಮಾಲ್ಯಕರಂ; ಸಹಸ್ರಕಿರಣಂ ದ್ವಾರಿ ಪ್ರತೀಹಾರಕಮ್; । ಚನ್ದ್ರಂ ಛತ್ರಧರಂ; ಸಮೀರವರುಣೌ ಸಮ್ಮಾರ್ಜಯನ್ತೌ ಗೃಹಾನ್;॥ ಪಾಚಕ್ಯೇ ಪರಿನಿಷ್ಠಿತಂ ಹುತವಹಂ; ಕಿಂ ಮದ್ಗೃಹೇ ನೇಕ್ಷಸೇ? । ರಕ್ಷೋ ಭಕ್ಷ್ಯಮನುಷ್ಯಮಾತ್ರವಪುಷಂ ತಂ ರಾಘವಂ ಸ್ತೌಷಿ ಕಿಮ್ ॥ —(ಹ.ನಾ)

ಅ॥ ಇಂದ್ರನು ಮಾಲೆಯನ್ನು ಮಾಡುವವನು; ಸೂರ್ಯನು ಬಾಗಿಲ ಕಾಯುವವನು; ಚಂದ್ರನು ಕೊಡೇ ಹಿಡಿಯುವವನು; ವರುಣನು ಮನೆಯನ್ನು ಸಾರಿಸುವವನು; ವಾಯು ಗುಡಿಸುವವನು; ಅಗ್ನಿಯು ಅಡಿಗೆಯುವನು; ನನ್ನ ಮನೆಯಲ್ಲಿ ಇದನ್ನೆಲ್ಲ ಕಾಣೆಯಾ? ರಾಕ್ಷಸರಿಗೆ ಆಹಾರಪ್ರಾಯನಾದ ಮನುಷ್ಯಶರೀರದ ರಾಮನನ್ನೇನೆಂದು ಹೊಗಳುತ್ತಿದ್ದಿ?

ಝುಂಜೋಟಿ—ರೂಪಕ

ನೋಡು ನನ್ನನು; ಕೂಡು ಬೇಗನೆ; ಗಾಡಿಕಾತಿಯೆ । ನಾರಿಯೆ ॥ ಪ ॥ ಮಾಡು ಮನಸ; ಬೇಡು ಧನವ; ನಾಡನೆಲ್ಲವ ॥ ಅ.ಪ ॥ ನಲುಗಿ ಯೌವನವನು ಬಿಂದೆ । ಕಳೆನೆಯೇತಕೆ? ॥ ಚೆಲುವನಲ್ಲವೇ ನಾನು? । ನಳಿನನೇತ್ರೆಯೇ ॥ ೧ ॥ ಎಲ್ಲಿ ಹೋದನೋ ತಲ್ಲಣಿಸುತಾ । ನಲ್ಲನೆನಿಸುವನು ॥ ಸೊಲ್ಲುತೋರದವನ ಹಂಬಲಿಲ್ಲಿ ಫಲವೇನು? ॥ ೨ ॥ ಬಂದರವನ ಸಂಧಿಸುವೆನು; । ಕೊಂದೇ ಬಿಡುವೆನು ॥ ಇಂದಿನಿಂದಲವನ ಬಿಟ್ಟು । ಹೊಂದು ನನ್ನನು ॥ ೩ ॥

ಈ ಮಾತಿನಿಂದ ಹನುಮಂತನಲ್ಲೇನು ಪರಿಣಾಮವಾಯಿತೆಂದರೆ—

✓ ದಿಂ॥ ಇದನು ಕೇಳ್ದಾ ರಾವಣನ ಕೊಲ್ಲಲೆಂದು । ಪದನನಾರಯ್ದಂ ವಾನರೇಂದ್ರನಂದು ॥ ಇದಕೆ ರಾಮಂ ತಾನೊಪ್ಪಲಾರನೆಂದು । ಸುದತಿಯುತ್ತರಮಂ ಕೇಳ್ದನಲ್ಲಿ ನಿಂದು ॥

ಆಗ ಸೀತೆ ನಡುವೆ ಕಡ್ಡಿಯನ್ನಿಟ್ಟು ಹೇಳುತ್ತಾಳೆ—

ಕಂ॥ ಪುಲಿಗಿದಿರೇಂ ಬಡನೂಣಗಂ? । ಖಲಾಧಮಾ, ಸಿಂಹಕಿದಿರೆ ಸಾಮ್ಯನ್ನರಿಗಳಾರ್ಪ್ಪಂ?॥ ಶಲಭಂ ದಿನಮಣಿಗಿದಿರೇ? । ನೆಲೆ ಮರುಳೇ, ರಾಘವಂಗೆ ನೀನೇನಿದಿರೆ? —(ಅ,ಪ್ರ.ನಾ)

ಟಿ॥ ಶಲಭ—ದೀಪದ ಹುಳು.

ಕಮಾಚು—ಆದಿತಾಳ

ಛೀ, ದೂರಕೆ ಹೋಗಿಲ್ಲಿಗೆ ಬರಬೇಡ । ಜೀವಿಗಳೊಳು ಮೂಢ ॥ ಪ ॥ ಈ ದುರಾಗ್ರಹವ ಸಾಧಿಸೆ ನಿನ್ನನು । ನೀಮುಬಿಡುವನೆನ್ನಯ ಪತಿ ನೋಡಾ॥ಅ.ಪ॥

ಇನಿತು ಗುಣವಿರಲು ತ್ರಿಣಯನಧನುವನು। ಮಣಿಸಲಿಲ್ಲವೇಕೋ?। ಸಾಕೋ ॥ ಹೆಣದಿನಿಯಾದನೆ ಈಗಲೆ ಮರಣವು ಬೇಕೋ? ॥ ಬಣಗುನಾಯಿ ಹವಿಯನು ಕದ್ದಂತೆ। ನ್ನನು ನೀ ಕಳ್ಳತನದಿ ತರಬಹುದೇ? ॥ ೧ ॥ ಹರಟುತಿರುವೆ ನೀನರಿತ ತೆರದಿ ಬಹುಸೊಲ್ಲ। ಖುಲ್ಲ। ತರಿಯುವರಿಲ್ಲವೆ ನಿನ್ನ ನಾಲಿಗೆಯನೆಲ್ಲ? ॥ ಸರಿ, ಸರಿ, ಹಿಂದಕೆ ದುರುಳಾಗ್ರೇಸರ,। ಸರಿಯೆ ನೀನು ರಾಮನ ಸೇವಕರಿಗೆ? ॥ ೨ ॥

**ಸೀತೆಯ ಈ ದಿಟ್ಟತನವನ್ನು ಕಂಡು ರಾವಣನು ಆಕೆಯನ್ನು ಕೊಲ್ಲಹೋಗಲು ಮಂಡೋದರಿಯು ಪತಿಯನ್ನು ಸಂತಯಿಸುತ್ತಾಳೆ—**

ಷ॥ ಅಹಹ! ರಕ್ಕಸರಾಯ, ಪುರುಳೇ,। ವಿಹಿತವೇ ನಿನಗಿದು? ಜಯಶ್ರೀ। ಮಹಿಳೆ ನಗನಿಹಳೇ? ಯಶೋರಮೆ ನಾಚಿ ತಲೆಗೊಡಹಿ ॥ ಬಹಿಕರಿಸದಿಹಳೇ? ಧರಾಂಗನೆ । ಗಹಗಹಿಸದಿಹಳೇ? ವಿಚಾರಿಸ । ವಹಿಸದಳಿಪರೆ ಸತಿಯನೆಂದಳು ಮಯನ ಸುತೆ ಪತಿಯ ॥ —(ತೊ.ರಾ)

**ಇದರಿಂದ ಸಮಾಧಾನಗೊಂಡ ರಾವಣನು ರಕ್ಕಸಿಯರಿಗೆ ಸೀತೆಯನ್ನು ಒಲಿಸಹೇಳಿ ಮನೆಗೆ ಹೋಗಲು ಆಸ್ತ್ರೀಯರು ಸೀತೆಗೆ ಹೇಳುತ್ತಾರೆ—**

**ಪೀಲು—ರೂಪಕ**

ಹೇ ನಾರಿ, ನೀನು ರಾವಣನನು। ಸೇರು ಸುಮ್ಮನೆ ॥ ಪ ॥ ಈ ಭೂಮಿ ಭಾಗವನೆಲ್ಲ ನಿನಗೆ। ಸೂರೆಗೈವನೆ ॥ ಅ.ಪ ॥ ಪಟ್ಟದರಸಿಯಾಗು ನೀನು। ಕಷ್ಟ ತಪ್ಪಲು ॥ ಈಗ। ಪಟ್ಟುಹಿಡಿಯಬೇಡ ಬರಿದೆ। ದಿಟ್ಟತನದಲಿ ॥ ೧ ॥ ನುಡಿಯ ಕೇಳದಿರಲು ನಿನ್ನ। ಕಡಿವೆವೀಗಲೆ ॥ ಬೇಗ। ಬೆದಗ ಬಟ್ಟು ಪುಡದಿಯಾದರೆ। ಒಡತಿಯೆಂಬೆವು ॥ ೨ ॥ ಕಾಡಬೇಡ ಬರಿದೆಯೆಮ್ಮ। ಮೂಢಹೆಂಗುಸೆ॥ ನೀನು। ಕೂಡು ಲಂಕಾಧೀಶನೊಡನೆ। ಆಡಲೇನ ನಾ ॥ ೩ ॥

**ಆಗ ಆ ದಾನವಿಯರನ್ನು ಕುರಿತು ತ್ರಿಜಟೆಯೆಂಬಾಕೆ ಹೇಳುತ್ತಾಳೆ—**

✓ಸೀ॥ ಎಲೆ ದಾನವಿಯರೆ, ನೀವಿಂತು ಜನಕಜೆಯನ್ನು—ಬಲುಕಷ್ಟಕೀಡು ಮಾಡುವದು ಸರಿಯೇ?। ಮಲಗಿದ್ದ ನಾನೀಗ ಕನಸ ಕಂಡೆನದೊಂದ-ಜಲಜಾಯತಾಕ್ಷಿಗಭ್ಯುದಯವಹುದ ॥ ಬಿಳಿಯಾನೆಯನು ಹತ್ತಿ ಲಕ್ಷ್ಮಣನೊಡನೆ ರಾಮ-ನಿಳಿದನುಜ್ಜ್ವಲಸೇನೆಯೊಡನೆ ಕೂಡಿ। ನಲೆ ರಾವಣನ ಸಪರಿವಾರನನು ಕೊಂದು ತಾ—ನಿಳೆಯಣುಗಿಯನು ತನ್ನ ತೊಡೆಯೊಳಿಟ್ಟ ॥ ಬಳಿದು ತೈಲವ ರಾವಣೇಶ ತಾನು। ನೆಲೆಗೆಟ್ಟು ದಕ್ಷಿಣಕ್ಕೋಡಿಹೋದಂ। ತಿಳಿಯಿರೀ ಸ್ವಪ್ನವನು ಚಿತ್ತದಲ್ಲಿ। ತಳೆಯಿರತಿ ಕರುಣವನು ಸೀತೆಯಲ್ಲಿ ॥

**ಇಷ್ಟರಲ್ಲಿ ಸೀತೆಯು ದಾನವಿಯರಿಗೆ ಉತ್ತರವನ್ನು ಹೇಳುತ್ತಾಳೆ—**

✓ಸಾ॥ ದಾನವಿಯರೆ, ಎನ್ನೆಡಗಾಲಿಂದವು। ಮಾ ನೀಚನ ನಾ ಮುಟ್ಟೆ ॥ ಈ ನಿಮ್ಮುಪಟಳವನು ತಡೆಯದೆ ಇದೊ। ಪ್ರಾಣವನೇ ನಾ ಬಿಟ್ಟೆ ॥

**ಎಂದು ಹೇಳಿ ಸೀತೆಯು ತನ್ನಲ್ಲಿಯೇ ಯೋಚಿಸುತ್ತಾಳೆ—**

ಶ್ಲೋ॥ ದೀರ್ಘಾ ವೇಣೀ ಮಮಾತ್ಯರ್ಥಮುದ್ಬದ್ಧಾಯ ಭವಿಷ್ಯತಿ ॥
—(ಅ.ರಾ)

ಅ॥ ನನ್ನ ಉದ್ದವಾದ ಜಡೆಯು ನೇಣುಹಾಕಿಕೊಳ್ಳುವದಕ್ಕೆ ಸರಿಯಾಗಿದೆ.

ಎಂದು ಪ್ರಯತ್ನಿಸುವದನ್ನು ನೋಡಿ ಇನ್ನು ಸುಮ್ಮನಿರಬಾರದೆಂದು ಹನುಮಂತನು ಮರದ ಮೇಲಿಯೇ ಇದ್ದು ತನ್ನ ವೃತ್ತಾಂತವನ್ನು ಹೇಳುತ್ತಾನೆ—

ಹಿಂದುಸ್ಥಾನಿತೋಡಿ—ರೂಪಕ

ನೆರೆ ಸೌಖ್ಯದಿಂದಲಿಹನು ರಾಮ।ನನುಜನೊಂದಿಗೆ ॥ ಭರದಿಂದ ಬಂದು ನಿಮ್ಮ ಕರೆದು ಕೊಂಬನಲ್ಲಿಗೆ ॥ ೧ ॥ ದನುಜೇಂದ್ರನಂದು ನಿಮ್ಮ ಕದ್ದು।ತಂದ ಮೇಲೆ ತಾ ॥ ಮನುಜೇಂದ್ರರಿರದೆ ಗೈದ ಯತ್ನವ।ಕೇಳ್ವುದತಿ ಹಿತ ॥ ೨ ॥ ನೆರೆ ಮುಕ್ತಿಯಂ ಜಟಾಯುವಿಗೆ।ದೊರಕಿಸುತ್ತಲಿ ॥ ಭರದಿಂ ಸುಗ್ರೀವಸಖ್ಯವನ್ನು। ವಿರಚಿಸುತ್ತಲಿ ॥ ೩ ॥ ವಧೆಗೈದು ವಾಲಿಯನ್ನು ಕಪಿಗ।ಳನ್ನುಕೂಡಿಸೆ ॥ ಮುದದಿಂದ ನಿಮ್ಮನೀಗ ಹುಡುಕಲೆಂದು ಕಳುಹಿಸೆ ॥ ೪ ॥ ಜಲರಾಶಿಯನ್ನು ದಾಟಿ ನಾನು।ಬಂದೆನಿಲ್ಲಿಗೆ ॥ ನಳಿನಾಕ್ಷಿ ನಿಮ್ಮ ಕಂಡು ಧನ್ಯ।ನಾದೆನಿಂದಿಗೆ ॥ ೫ ॥

ಇದನ್ನು ಕೇಳಿ ಸೀತೆಯು ಹೇಳಿದ್ದು—

✓ಕೀ॥ ಇದು ರಾಕ್ಷಸಮಾಯೆಯೊ ಮೇಣ್ಕನಸೋ।ಇದರಂದವು ತಿಳಿಯದು ತನಗೆ ॥ ಇದು ನಿಜವಾದರೆ ಹೇಳಿದವರು ತ।ನ್ನೆದುರಿಗೆ ಕಾಣಿಸಿಕೊಳಲೆನಗೆ ॥

ಹೀಗೆನ್ನುತ್ತಲೇ ಹನುಮಂತನು ಕಪಿಯಾಗಿ ಮುಂದೆ ಬಂದು ವಂದಿಸಿದನು. ಆದರೂ ಸಂಶಯದಿಂದ ಸೀತೆಯು ಮಾತಾಡಿಸಲಿಲ್ಲ. ಅದಕ್ಕೆ ಹನುಮಂತನ ಮಾತು—

✓ಸಾ॥ ದನುಜನಲ್ಲ ನಾ; ರಾಮನ ದೂತನು । ವನಚರನ್ ಹನುಮಂತ ॥ ಎಣಿಸಬೇಡ ಬೇರೊಂದ; ನೋಡು ನಾ।ದನುಜರಿಗೆಲ್ಲ ಕೃತಾಂತ ॥

ಅದಕ್ಕೆ ಸೀತೆಯ ಉತ್ತರ—

✓ದಿಂ॥ ನೀನು ನೋಡಲ್ಪಾನರನು ಜನ್ಮದಲ್ಲಿ।ಕಾಣಲೆನ್ನಾಣ್ಮಂ ನರನು ಲೋಕದಲ್ಲಿ ॥ ನೀನದೆಂತ್ಯೆ ಸೇವಕನು? ಮತ್ತೆ ನೋಡೆ।ಪಾಣದಬ್ಧಿಯ ದಾಟುವದು ನಿನ್ನ ಪಾಡೇ?

ಆಗ ಸೀತೆಗೆ ವಿಶ್ವಾಸವನ್ನುಂಟುಮಾಡುವದಕ್ಕಾಗಿ ಹನುಮಂತನು ತನ್ನ ರೂಪವನ್ನು ಬೆಳೆಸಿದ್ದಾನೆ—

ಷ॥ ಶಿವನ ಕಾಯದ ಕಾಂತಿ ಮೆಯ್ಯಲಿ।ಖವಖವಿಸಿದುದು; ವದನ ಉದಯದ।ರವಿಯ ವೊಲು ರಂಜಿಸಿತು; ತಾರಾಗಣದ ಹರಿಯಂತೆ ॥ ದಿವವನಣದುದು ಬಾಲ;।ಬಳಿಕಾ ಹವಣ ಕಾಣುತ ಕಾಂತೆ ಕರಗಳ।ನೆವೆಗಳಲಿ ಮುಚ್ಚಿದಳು ರಘುಪತಿ, ರಾಮ, ರಾಮೆನುತ ॥
—(ತೊ.ರಾ)

ಟಿ॥ ಖವಖವಿಸಿದುದು—ಥಳಥಳಿಸಿತು. ಹರಿ—ಸಿಂಹ. ಎವೆಗಳಲಿ ರೆಪ್ಪೆಗಳ ಮೇಲೆ.

ಹಾಗಾದರೆ ರಾಮನ ಲಕ್ಷಣಗಳನ್ನು ಹೇಳೆನ್ನಲು ಹನುಮಂತನು ಹೇಳುತ್ತಾನೆ—

✓ಚೂ॥ ಹೇಳಲಳವೇ ರಾಮಲಕ್ಷ್ಮಣರ ತೀರ, ಕೇಳಿದುದಕೊಂದೆರಡ ಹೇಳು ಘನೆ ಭಾರ, ಹಗಲು ಕಾಣುವದು ವಿಸ್ತಾರ, ಸೊಗಸಾಗಿ ಭುಜದ ಕೀಲುಗಳು ಬಲುತೋರ, ಬಗೆಯೆ ತೋಳುಗಳು ನೀಡಿಹವು ಪೂರ, ಬಿಗೆ ಹೊಕ್ಕುಳೊಳು ನಡೆನುಡಿಗಳೊಳಗೆ ಗಂಭೀರ, ಮೋಹನಾಕಾರ, ಸೌಂದರ್ಯಸಾರ। ಎದೆಯು ಮಣಿಕಟ್ಟುಮುಷ್ಟಿಗಳು ಬಿಗಿಯುತಿರೆ, ಪದಪಿನಾ ಕಂಠಧ್ವನಿಯು ಭೇರಿಯನು ಮೀರೆ, ಉದಿಸುತಂಗುಷ್ಠಮೂಲದಿ ಚತುರ್ವೇದರೇಖೆಸಾರೆ, ಮುದವಾಗೆ ಹಣೆಯೊಳಂಗಾಲಿನೊಳಗಾಯುಷ್ಯರೇಖೆ ನೆರೆ ಜೀರೆ, ಎದೆಮೂಗುತುಟಿಗಳುಬ್ಬಿರ್ದು ತೋರೆ। ಅಂಗಯ್ಯೊಳಂಗಾಲೊಳುಗುರೊಳುಂ ಕಡೆಗಣ್ಣೊಳುಂ ಕೆಂಪು, ಮಂಗಲಪ್ರದವಾದ ಪಾದರೇಖೆಯದೊಂದು ಪೆಂಪು, ಭೃಂಗದಂತಿಹ ಕೂದಲಿನ ಮಾರ್ದವದ ಸೊಂಪು, ಸಂಗಡಿಸೆ ಚರ್ಮದೊಳು ನುಣ್ಪು, ಷಣ್ಣವತ್ಯಂಗುಲದ ಕಾಯದಿಂಪು। ದುಂಡುದಲೆ ಛತ್ರಿಯಂತಿರ್ಪುದು ವಿಶಾಲ, ಮಂಡಿಸಿರ್ದವಯವಗಳೊಂದೊಂದು ತಕ್ಕಂತಿರುವ ಮೇಳ, ಕಂಡಕಂಡವರ ಬೆರಗುವಡಿಸುತ್ತಗಲವಾಗಿರುವ ಫಾಲ। ಉದರಕಂಠಗಳೊಳಗೆ ತ್ರಿವಳಿ, ಚದುರತಲೆಯೊಳಗೆ ಮೂರೆಳ್ಳ ಸುಳಿ, ಹದವರಿಯುತುದ್ದವಿಹ ಹುಬ್ಬುಗಳ ಜವಳಿ। ಕಮಲ ನಾಚುವದು ನೋಡದರವನಕಣ್ಣು, ಅಮಮ! ಹೊಳಹೊಳೆಯುತಿಹ ಮೈಯ ಶ್ಯಾಮಲದ ವರ್ಣ, ಸಮದಿ ಥಳಥಳಿಸುತಿಹ ಹಲ್ಲುಗಳ ಸಣ್ಣ। ಆವನ ಕೂದಲುಗಳೆಲ್ಲಕ್ಕೊಂದೆ ಆಳತೆ, ಆವನ ಮೊಳಕಾಲೊಳುಂ ತೋರ್ದಪುದು ಸಮತೆ, ಅವನಿಗಾ ಸ್ವಜನಸ್ವರಾಷ್ಟ್ರದೊಳು ಮಮತೆ, ಆವನ ವರ್ಣಿಸಿದವರಿಗಪ್ಪುದುತ್ತಮತೆ ॥

**ಇನ್ನೂ ಸಂಶಯವು ಉಳಿದಿರುವಂತೆ ತೋರಿದ್ದರಿಂದ—**

✓ಕೀ॥ ಹನುಮನಾಗ ರಾಮಾಂಕಿತಮುದ್ರಿಯ। ಜನಕಾತ್ಮಜೆಗರ್ಪಿಸಲಾಗ॥
ಮನದೊಳಾದ ಮುದವೆನೆ ಜನಕಜೆಯಾ। ನನದೊಳು ತೋರಿತ್ತನುರಾಗ ॥

**ಅದನ್ನು ಕವಿ ವರ್ಣಿಸಿರುವುದೆಂತೆಂದರೆ—**

ಶ್ಲೋ॥ ಸೌಖ್ಯಾವಹಸ್ಯ ಪವನಾತ್ಮಜನೀಯಮಾನ । ರಾಮಾಙ್ಗುಲೀ-
ಯಕವಿಲೋಕನವಾಸರಸ್ಯ ॥ ಸತ್ಯಂ ಕಲಾಂ ಶತತಮಾಂ ಭುವಿ ನೈವ ಭೇಜೇ ।
ಪಾಣಿಗ್ರಹೋತ್ಸವದಿನಂ ಜನಕಾತ್ಮಜಾಯಾಃ ॥ —(ರಾ.ಚಂ)

**ಅ॥ ಸೀತೆಗೆ ಮದುವೆಯಾದ ದಿನವು ಹನುಮಂತನಿಂದ ಆ ಮುದ್ರೆಯುಂಗುರವನ್ನು ಪಡೆದ ದಿನದ ಸೌಖ್ಯದ ಅತ್ಯಲ್ಪಾಂಶವನ್ನು ಕೂಡ ಪಡೆಯಲಿಲ್ಲ.**

**ಆಗ ಸೀತೆ ಹನುಮಂತನನ್ನು ಕುರಿತು ಹೇಳುತ್ತಾಳೆ—**

**ಹಿಂದುಸ್ಥಾನಿಕಾಪಿ — ರೂಪಕ**

ಮಾರುತಿ, ಭವ್ಯಕೀರ್ತಿ, ಶೌರ್ಯಧೈರ್ಯಮೂರುತಿ ॥ಪ॥ ಶೌರ್ಯಧೈರ್ಯಮೂರುತಿ, ಮ। ಜ್ಜೀವಿತಕ್ಕೆ ನೀ ಗತಿ ॥ ಅ.ಪ ॥ ಎನ್ನ ಪತಿಯು ನರನೆ ನೋಡೆ?। ಇನ್ನು ನೀನು ವಾನರನೆ? ॥ ಎನ್ನ ದುಃಖವಳಿವುದೆಂ। ದಿನ್ನು ನಂಬಿದೆ ನಿನ್ನನೆ

|| ೧ || ಎರಡು ತಿಂಗಳಿರುವದಿನ್ನು । ದುರುಳರಾವಣನವಧಿತೀರೆ || ಬರಿದೆ ತಡವ ಮಾಡೆ ನಾ।ಸಿರುವೆನೆಂತು ಪೇಳಧೀರೆ || ೨ || ಎಂದು ಬರುವನೆನ್ನ ನಾಥ? । ಎಂದು ಕೇಳ್ವೆನವನ ಮಾತ? || ಎಂದಿಗೆನಗೆ ದೊರೆವನಾತ? । ಇಂದು ಪೇಳೊ ಪವನಜಾತ || ೩ ||

ಅದೇ ಸಂದರ್ಭದಲ್ಲಿ ಸೀತೆಗೂ ಹನುಮಂತನಿಗೂ ನಡೆದ ಮಾತೇನೆಂದರೆ—

✓ಸಾ|| ಮಾತೆ ನಿನ್ನನೀಗಲೆ ಕರೆದೊಯ್ವೆನು।ಕೂತರೆ ಹೆಗಲೊಳೆನಲ್ಕೆ || ಮಾತಿದು ರಾವಣಗುಚಿತವು ಮಾರುತಿ।ಸೀತೆಗಲ್ಲ ಸೌಖ್ಯಕ್ಕೆ ||

ಕೊನೆಗೆ ಸೀತೆಯು ಅಭಿಪ್ರಾಯು—

ಶ್ಲೋ||ಪಾತಿವ್ರತ್ಯಹುತಾಶನೇನ ಯದಿ ತಂ ಕುರ್ಯಾಮಹಂ ಭಸ್ಮಸಾ।ತ್ಸ್ಯಾತ್ಕಂ ದಾಶರಥೇಃ ಶರಸ್ಯ ನ ಭವೇದಾತ್ಮೋಚಿತಾ ಪಾರಣಾ || ಕಿಂಚೈತಸ್ಯ ಯಶೋ ನಿಶಾಪತಿರಪಿ ಪ್ರಮ್ಲಾನಕಾಂತಿರ್ಭವೇ । ದ್ಭ್ರಾತಃ ಶಾಸಿತರಾವಣೋ ರಘುಪತೌ ಯಾತ್ರಾ ಮಮ ಶ್ರೇಯಸೀ || —(ರಾ.ಚಂ)

ಅ|| ನಾನು ಪಾತಿವ್ರತ್ಯವೆಂಬ ಅಗ್ನಿಯಿಂದ ಅವನನ್ನು ಬೂದಿಯಾಗಿ ಮಾಡಿಬಿಟ್ಟರೆ ರಾಮ ಬಾಣಗಳಿಗೆ ತಕ್ಕ ಪಾರಣೆಯಾಗುವದಿಲ್ಲ. ಮತ್ತು ಯಶಶ್ಚಂದ್ರನೂ ಮಸುಕಾಗುವನು. ಎಲೈ ಸಹೋದರಪ್ರಾಯನಾದ ಹನುಮಂತನೆ ರಾಮನು ರಾವಣನನ್ನು ಕೊಂದು ನನ್ನನ್ನು ಕರೆದು ಕೊಂಡು ಹೋದರೆ ಅದು ನನಗೆ ಶ್ರೇಯಸ್ಕರವು.

ಮುಂದೆ ನಡೆದದ್ದೇನೆಂದರೆ—

✓ದಿಂ|| ದೇವಿ ಕರತರುವೆಂ ರಾಮನನ್ನು ಬೇಗ।ಈವುದೌ ಗುರ್ತಂ ರಾಮಗೆನ್ನಲಾಗ || ಭಾವೆ ತಾ ಚೂಡಾಮಣಿಯು ತೆಗೆದು ತಂದು।ಭಾವಿಸುತ್ತಾ ಮಾರುತಿಗೆ ಕೊಟ್ಟಳಂದು ||

ಈ ರೀತಿಯಲ್ಲಿ ಹಿಂದಿರುಗುವದಕ್ಕೆ ಅಪ್ಪಣೆಯನ್ನು ಪಡೆದ ಹನುಮಂತನ ಯೋಚನೆ—

ಶ್ಲೋ|| ಕಾರ್ಯೇ ಕರ್ಮಣಿ ನಿರ್ದಿಷ್ಟೋ ಯೋ ಬಹೂನ್ಯಪಿ ಸಾಧಯೇತ್ । ಪೂರ್ವಕಾರ್ಯಾವಿರೋಧೇನ ಸ ಕಾರ್ಯಂ ಕರ್ತುಮರ್ಹತಿ || —(ಶ್ರೀ.ರಾ)

ಅ|| ಯಾವನು ಒಂದು ಕೆಲಸವನ್ನು ಮಾಡುವದಕ್ಕೆ ಅಪ್ಪಣೆಯನ್ನು ಹೊಂದಿ ಆ ಕಾರ್ಯಕ್ಕೆ ವಿರೋಧವಿಲ್ಲದಂತೆ ಬಹುಕಾರ್ಯಗಳನ್ನು ಸಾಧಿಸುವನೋ ಅವನೇ ಕೆಲಸವನ್ನು ಮಾಡುವದಕ್ಕೆ ತಕ್ಕವನು.

ಶ್ಲೋ|| ಕಾರ್ಯಾರ್ಥಮಾಗತೋ ದೂತಃ ಸ್ವಾಮಿಕಾರ್ಯಾವಿರೋಧತಃ । ಅನ್ಯತ್ಕಿಂಚಿದಸಂಪಾದ್ಯ ಗಚ್ಛತ್ಯಧಮ ಏವ ಸಃ || —(ಶ್ರೀ.ರಾ)

ಅ|| ಒಂದು ಕೆಲಸಕ್ಕೆ ಬಂದ ಆಳು ಒಡೆಯನ ಕೆಲಸಕ್ಕೆ ವಿರೋಧವಿಲ್ಲದೆ ಬೇರೆ ಹೆಚ್ಚಿಗೆ ಮಾಡದೆ ಹೋದರೆ ಅವನು ಅಧಮನೇ ಸರಿ.

ಹನುಮಂತನ ಈ ಭಾವನೆಯನ್ನು ಮನಸ್ಸಿನಲ್ಲಿಟ್ಟುಕೊಂಡೇ ಪೀಠಿಕೆಯಲ್ಲಿ 'ಹೇಳಿದುದಲ್ಲದೆ' ಎಂಬ ನುಡಿ ಹೊರಟಿರುವದು.

ಆದ್ದರಿಂದ ಆ ವನದಲ್ಲಿರುವ ಫಲಗಳಿಂದ ಪಾರಣೆಯನ್ನು ಮಾಡುವದರ ಮೂಲಕ ತನ್ನ ಪ್ರತಾಪವನ್ನು ತೋರಿಸಬೇಕೆಂದು ಅದಕ್ಕೆ ಸೀತಾದೇವಿಯು ಸಮ್ಮತಿಯನ್ನು ಕೇಳಿದ್ದಾನೆ. ಹೊಟ್ಟೆಗಾದ ಮೇಲೆ ತಾನೆ ಉಳಿದ ಸುಖದ ವಿಚಾರ!

ಶ್ಲೋ॥ ಶಯ್ಯಾ, ವಸ್ತ್ರಂ, ಚನ್ದನಂ, ಚಾರುಹಾಸ್ಯಂ,। ವೀಣಾ, ವಾಣೀ, ಸುನ್ದರೀ ಯಾ ಚ ನಾರೀ, ॥ ನ ಭ್ರಾಜನ್ತೇ ಕ್ಷುತ್ಪಿಪಾಸಾತುರಾಣಾಮ್ । ಸರ್ವಾರಮ್ಭಾಸ್ತಣ್ಡುಲಪ್ರಸ್ಥಮೂಲಾಃ ॥ —(ಸು)

ಅ॥ ಹಸಿವುಬಾಯಾರಿಕೆಗಳಿಂದ ಪೀಡಿತರಾದವರಿಗೆ ಹಾಸಿಕೆ, ಹೊದ್ದಿಕೆ, ಗಂಧ, ವಿನೋದ, ವೀಣೆ, ಮಾತು, ಸುಂದರಸ್ತ್ರೀ— ಯಾವದೂ ಸೊಗಸುವದಿಲ್ಲ. ಎಲ್ಲಾ ಕೆಲಸಗಳೂ ಅಕ್ಕಿಯ ಬಳ್ಳವನ್ನವಲಂಬಿಸಿರುವವು.

ಸೀತೆಯಾಜ್ಞೆಯನ್ನು ಹೊಂದಿ ಹನುಮಂತನು ವನಭಂಗಕ್ಕಾರಂಭಿಸಿದ್ದಾನೆ—

✓ ರ॥ ವನಭಂಗಗೈದ ವಜ್ರಾಂಗ । ಮುನಿನುತಪದಭೃಂಗ ॥ ಪ ॥ ಹರಿದು ಹಾರಿ ನೆಲಕುರುಳಿಸಿ ಮರಗಳ. । ಮುರಿದು ಹರ್ಮ್ಯಗಳ, ತರಿದು ಬಳ್ಳಿಗಳ, । ತಿರಿದು ಹಣ್ಣುಗಳ, ಒರಸಿ ಸರಸಿಗಳ, । ಧರಣಿಜೆಯಿರುತಿಪ ಮರವೊಂದುಳಿಯಲು । ಪರಿಪರಿಫಲಗಳ ತರುತತಿಯುಳಿಯಲು । ನೊರೆದು ದಾನವಿಯರುರುಬಲು ಭರದಲಿ। ಕಿರಿದು ಹಲ್ಲನಣಕಿಸಿ ಪರಿಪರಿಯಲಿ । ಇದನರುಹಲು ಖಳರಧಿಪತಿ ಕೇಳುತ ! ಕುದಿದು ಸೇನೆಯನು ಗದರಿಸೆ ಹೇಳುತ । ಬಂದ ದಾನವರನಂದು ಕಪೀಂದ್ರನು । ಸಂಧಿಸಿ ಹುಳುಗಳೆಂದವಕೊಂದನು । ಜಂಬುಮಾಲಿ ಬಹು ಸಂಭ್ರಮದಿಂ ಬರೆ । ಸ್ತಂಬಗಳಿಂದಿಡೆ ಜಂಭವಳಿಯುತಿರೆ । ಮಂತ್ರಿಪುತ್ರರು ನಿಯಂತ್ರಗಳೈತರೆ । ತಂತ್ರಕರು ಪರತಂತ್ರರೆನಿಸುತಿರೆ । ಪಂಚಮಂತ್ರಿಗಳು ಸಂಚನು ತೀರಿಸೆ । ಪಂಚತ್ವವ ತಾ ಹೊಂಚುತ ತೋರಿಸೆ । ಅಕ್ಷಕುಮಾರನು ಶಿಕ್ಷಿಸಲೈತರೆ । ಸಾಕ್ಷಾದ್ಯಮನಿಗೆ ಭಕ್ಷ್ಯವಗೈದಿರೆ । ಪಿತನನೊಲಿಸಿ ಸುರಪತಿರಿಪು ಬರೆ ತಾ । ಹತಸಾರಥಿಗೈದತಿವಿಖ್ಯಾತಾ । ಮತ್ತಜಸಸ್ತ್ರವನೆತ್ತಿ ಸುರಪರಿಪು । ವೊತ್ತಿಡೆ ಧಾತನ ಚಿತ್ತವ ನರಿದದ । ಕಿತ್ತನು ದೇಹವನುತ್ತಮ ಕಪಿ ತಾ ॥

ಆಗ ಇಂದ್ರನು ಅವನನ್ನು ಉರಗಾಸ್ತ್ರದಿಂದ ಕಟ್ಟುತ್ತಾನೆ—

ಷ॥ ತ್ರಿದಶಾಧಿಪನಿಭಕುಂಭಸ್ಥಲಮಂ । ವಿದಳಿಸಿದೆನ್ನೀ ನಿಶಿತಾಸ್ತ್ರಂಗಳು । ತೊದಳೇ? ಹುಲುಗಪಿ, ನಿನ್ನನು ತಾಗಲು ನಾಣ್ಚುತ್ತಿರ್ದಪುವು ॥ ಬೆದರದಿರಿದರಿಂ ನಿನ್ನ ನೆಲವೊ ಕೊ । ಲ್ಲದೆ ಕಟ್ಟುವೆ ನೀಗಳೆನುತ್ತುರಗಾ । ಸ್ತ್ರದಿನೆಚ್ಚಂ ನಿಚ್ಚಟಗಲಿ ಯಿಂದಗಿಯಾರುತ್ತಿರೆ ಸೇನೆ ॥ —(ಕು.ರಾ)

ಟಿ॥ ನಿಚ್ಚಟಗಲಿ—ನಿಶ್ಚಲವಾದ ಪರಾಕ್ರಮವುಳ್ಳವನು. ಇಂದಗಿ—ಇಂದ್ರಜಿತು. ಆರುತ್ತಿರೆ—ಉಬ್ಬರಿಸುತ್ತಿರಲು.

ಈ ರೀತಿಯಲ್ಲಿ ಹನುಮಂತನು ರಾವಣನನ್ನು ನೋಡಬೇಕೆಂದು ತಾನಾಗಿ ಕಟ್ಟಿಗೆ ಸಿಕ್ಕಿ ಹೊರಟು ರಾವಣನ ಆಸ್ಥಾನವನ್ನು ಸೇರಿ—

ಶ್ಲೋ॥ ರತ್ನಸ್ತಮ್ಭೇಷು ಸಙ್ಕ್ರಾನ್ತೈಃ ಪ್ರತಿಬಿಮ್ಬಶತೈರ್ವೃತಃ ।
ಜ್ಞಾತೋ ಲಙ್ಕೇಶ್ವರಃ ಕೃಛ್ರಾದಾಞ್ಜನೇಯೇನ ತತ್ತ್ವತಃ ॥ —(ಸು)

ಅ॥ ರತ್ನಸ್ತಂಭಗಳಲ್ಲಿ ಕಾಣುವ ಅನೇಕ ಪ್ರತಿಬಿಂಬಗಳ ನಡುವೆ ಇದ್ದ ರಾವಣನನ್ನು ಹನುಮಂತನು ಬಹು ಪ್ರಯತ್ನದಿಂದ ಸರಿಯಾಗಿ ತಿಳಿದನು.

✓ ಕೀ॥ ಉನ್ನತಪೀಠದಿ ಕುಳಿತಿಹ ರಾವಣ। ನನ್ನು ನೋಡಿ ಮಾರುತಿ ಬೇಗ ॥
ಉನ್ನತಪೀಠವ ಗೈದು ಬಾಲವನೆ। ಚೆನ್ನಿನೆ ಕುಳಿತನು ತಾನಾಗ ॥

ನೀನು ಯಾರೆಂದ ಮಂತ್ರಿಯ ಮಾತಿಗೆ ಹನುಮಂತನುತ್ತರ—

ರೇಗುಪ್ತಿ—ಆದಿತಾಳ

ನಾನು ರಾಮದೂತನು ಹನುಮಂತನು। ರಾವಣ ನೀ ಕೇಳೋ। ಪೇಳ್ವೆನು ॥ ಪ ॥ ನೀನು ಸೀತೆಯನು ಕದ್ದು ತಂದುದ ಪ್ರ। ಮಾಣಿಸಿ ನೋಡಲ್ಕೆಂದು ಬಂದವನು ॥ ಅ.ಪ ॥ ನೀನು ಹಿಡಿಯಲಾರದ ಶಿವಧನುವನು। ನಾನುರಾಗದಿಂದ। ಹಿಡಿದು ॥ ಮಣಿದೆ ಮುರಿದಾ ದಶರಥರಾಮನ। ಸೈನಿಕರೊಳಗೊಬ್ಬನು ನಾನಯ್ಯ ॥ ೧ ॥ ನಿನ್ನನು ಬಾಲದಿ ಕಟ್ಟಿ ಸಮುದ್ರದಿ। ಬನ್ನಬಡಿಸುತದ್ದಿ। ತೋರಿದ ॥ ಸನ್ನುತವಾಲಿಯನೊಂದೇ ಬಾಣದಿ। ಮುನ್ನಕೊಂದ ರಾಘವ ನಾಳಯ್ಯ ॥ ೨ ॥ ನಿನ್ನ ನಗರದಭಿಮಾನದೇವತೆಯ। ಚೆನ್ನಾಗಿಯೆ ಹೊಸಕಿ। ಕಸಕಿ ॥ ಇನ್ನು ನಿನ್ನ ಮಾತಾಡಿಸ ಬಂದಿಹೆ। ನೆನ್ನ ಹದನ ನೀ ಯೋಚಿಸು ಮನದೊಳು ॥ ೩ ॥

ಆಮೇಲೆ ನಡೆದ ಮಾತೇನೆಂದರೆ—

✓ಸಾ॥ ವನವನೇಕೆ ನೀ ಮುರಿದೆಯೆಂದು ರಾ। ವಣನ ಮಂತ್ರಿ ತಾ ಕೇಳೆ ॥
ವನಚರನೆಂದನಿದೆಲ್ಲವೆಮ್ಮ ಕಪಿ। ತನ ಹೊರತಿಲ್ಲವು ಪೇಳೆ ॥

ಇಷ್ಟು ಹೇಳಿ ಹನುಮಂತನು ತನ್ನ ಉಪದೇಶವನ್ನು ರಾವಣನ ಮುಂದಿಡುತ್ತಾನೆ—

ಶ್ಲೋ॥ ಸಾಧುಧರ್ಮಮವೇಕ್ಷಸ್ವ ಸಾಧುಸಾಧುವ್ರತಂ ಚರ । ಯಥಾ
ತವ ತಥಾನ್ಯೇಷಾಂ ರಕ್ಷ್ಯಾ ದಾರಾ ನಿಶಾಚರ ॥ —(ಶ್ರೀ.ರಾ)

ಅ॥ ಉತ್ತಮವಾದ ಧರ್ಮವು ಯಾವದೆಂಬುದನ್ನು ನೋಡು. ಒಳ್ಳೊಳ್ಳೆ ನಡೆವಳಿಕೆಗಳನ್ನು ನಡೆ. ಎಲೈ ರಾಕ್ಷಸನೆ, ನಿನ್ನ ಹೆಂಡತಿ ಹೇಗೋ ಹಾಗೆ ಇತರರ ಹೆಂಡಿರೂ ರಕ್ಷೆಗೆ ಯೋಗ್ಯರು.

ಅದರಲ್ಲಿಯೂ—

ಶ್ಲೋ॥ ಬದ್ಧಾದರೋಽಪಿ ಪರದಾರಪರಿಗ್ರಹೇ ತ್ವಮ್ । ಇಕ್ಷ್ವಾಕು-
ನಾಯಕಕಲತ್ರಮನಾರ್ಯ ಮಾಗಾಃ ॥ ವಾತಾಶನೋಽಹಮಿತಿ ಕಿಂ ವಿನತಾಸು-
ತಸ್ಯ। ಶ್ವಾಸಾನಿಲಾಯ ಭುಜಗಃ ಸ್ಪೃಹಯಾಳುತಾಲುಃ ॥ —(ರಾ.ಚಂ)

ಅ॥ ನೀನು ಪರರ ಹೆಂಡಿರನ್ನು ಹಿಡಿದುಕೊಳ್ಳುವದರಲ್ಲಿ ಬಹಳ ಆಸಕ್ತನಾದರೂ ಎಲೊ ಅನಾರ್ಯನೆ, ಶ್ರೀರಾಮನ ಹೆಂಡತಿಯ ಗೋಜಿಗೆ ಹೋಗ ಬೇಡ. ಹಾವು ಗಾಳಿಯನ್ನು ತಿನ್ನು ವಂಥದ್ದಾದರೂ ಅದರ ದವಡೆಯು ಗರುಡನ ಶ್ವಾಸದ ಗಾಳಿಯನ್ನು ಬಯಸೀತೇನು?

ಹನುಮಂತನು ಎಷ್ಟು ಹೇಳಿದರೂ ರಾವಣನ ದುರ್ಬುದ್ಧಿ ತಿರುಗಲಿಲ್ಲ.

ಕಂ॥ ಇರಲೊಂದು ಜೇನೆ ಸಠರದೆ। ಕರಂ ಮಹೌಷಧಿಯದೆಂತು ರುಚಿಸ ದೊ ಸಠಗಾ ॥ ತೆರದಿ ದುರುಳಂಗೆ ಧರೆಯೊ। ಳ್ಪರಿಕಿಸೆ ಬಗೆವುಗದು ಬುದ್ಧಿ ಬೋಧನೆಯಹಹಾ! —(ಸೀ.ಸಾ)

ಮುಂದೇನಾಯಿತೆಂದರೆ—

✓ದಿಂ॥ ಇವನ ಕೊಲ್ಲೆನಲಾ ದನುಜರಾಗ ಕೇಳಿ। ಇವನು ದೂತನೆನಲ್ ವಿಭೀಷಣನು ತಾಳಿ ॥ ಇವನ ಬಾಲವನೇ ಸುಡುವ ಯತ್ನಗೈದರ್। ಇವನ ಭಂಗವನೇ ನೋಡಲೆಂದು ನೀಚರ್ ॥

✓ಕೀ॥ ಬೆಳೆಸಲು ಬಾಲವ ಹನುಮನು ಪುರದೊಳ। ಗುಳಿಯುದವೊಲ್ಮುಗಿ ಯಲು ಬಟ್ಟೆ ॥ ಇಳೆಯಣುಗಿಯು ಕಡೆಗೋಡುವರನು ಕಂ। ಡೆಳೆದನು ಬಾಲವ ಸಿರಲಷ್ಟೇ ॥

ಆ ಬಾಲವನ್ನು ಎಣ್ಣೆಯಲ್ಲಿ ಅದ್ದಿ ಬೆಂಕಿಯನ್ನು ಹಚ್ಚುತ್ತಲೇ—

ಷ॥ ಕಾಪಿನಸುರೆಯರ್ಕೈದಿ ಸೀತೆಯೊ। ಳೀಪರಿಯ ಬಿನ್ನಯಿಸೆ ಕೇಳಿ ನಿ। ರೂಪಿಸಿದಳನಲಂಗೆ ಶ್ರುತಿಗಳು ಸಿದ್ಧವಾದಡೆಯು, ॥ ತಾ ಪತಿವ್ರತೆಯಾದಡೆಯು, ಕುಲ। ದೀಪರಾಮಗೆ ಸತ್ಯಮುಳ್ಳೊಡೆ,। ಯಿಾ ಪವನನಂದನಗೆ ಶೀತಲದೋರು ನೀನೆನುತ ॥ —(ರಾ.ಕ.ಕು)

ಟೀ॥ ಕಾಪಿನ—ಕಾವಲಿನ. ನಿರೂಪಿಸಿದಳು—ಆಜ್ಞೆಮಾಡಿದಳು.

ಶ್ಲೋ॥ ವಾಯೋಃ ಪ್ರಿಯಸಖಿತ್ವಾಚ್ಚ ಸೀತಯಾ ಪ್ರಾರ್ಥಿತೋಽನಲಃ। ನ ದದಾಹ ಹರೇಃ ಪುಚ್ಛಂ ಬಭೂವಾತ್ಯನ್ತಶೀತಲಃ ॥ —(ಅ.ರಾ)

ಅ॥ ವಾಯುವಿನ ಗೆಳೆಯನಾದ್ದರಿಂದಲೂ ಸೀತೆಯ ಪ್ರಾರ್ಥನೆಯಂತೆ ಅಗ್ನಿಯು ಮಾರುತಿಯ ಬಾಲವನ್ನು ಸುಡದೆ ತಣ್ಣಗಾದನು.

ಇತ್ತ ರಾಕ್ಷಸರು ಅವನ ಮೆರವಣಿಗೆಯನ್ನು ಹೊರಡಿಸಿದ್ದಾರೆ—

ಷ॥ ಹಣೆಗೆ ಮಸಿಯನು ಬರೆದು, ನಿಡುದಾ। ಸಣದ ದಂಡೆಯ ಹಾಯ್ಕಿ, ಹಗ್ಗದ। ಕುಣಿಕೆಗಳ ಸರಿದೆರಡು ಮೈಗಳಲುಬ್ಬಿ ಬೊಬ್ಬಿರಿದು, ॥ ಕುಣಿಸಿ ಕೈ ಚಪ್ಪಳೆಗಳಲಿ, ವೀ। ರಣಕೊಳಲ್ಕೊಂಬುಗಳ ಸಬುದದ। ಲಣಿಯರದಲನಿಲಜನ ತಂದರು ರಾಜವೀಥಿಯಲಿ ॥ —(ತೊ.ರಾ)

ಟೀ॥ ವೀರಣ—ವೀರಣವೆಂಬ ವಾದ್ಯ, ಅಣಿಯರದಲಿ—ಕ್ರಮವಾಗಿ.

ಆಗ ಹನುಮಂತನೇನು ಮಾಡಿದನೆಂದರೆ—

✓ಸಾ॥ ಕಳಚಿ ಧಾತನಸ್ತ್ರವನಾ ಬಾಲದ। ಝಳದಿ ದಶಾಸ್ಯನ ತಾಕಿ ॥ ಜ್ವಲಿಸಿ ಗಡ್ಡವಿಾಸೆಗಳನು ಹಾರಿದ। ನಲಘುವಿಕ್ರಮಪಿನಾಕಿ ॥

ಅಲ್ಲಿಂದ ಅವನು ಮನೆಮನೆಗಳನ್ನು ಸುಡುತ್ತ ಬರಲು—

ಷ॥ ಪರವಧೂವ್ಯಸನಿಗಳ ಸಂಗವು। ನರಕಭಾಜನವೆಂದು ನೆರೆ ಧಿ । ಕ್ಕರಿಸಿ ದಶಕಂಧರನ ನಗರಾಂಗನೆ ವಿರಾಗದಲಿ ॥ ಪರಮಪಾತ್ರಾಯಶ್ಚಿತ್ತವಂಗೀ । ಕರಿಸಿ ಹೊಗಲುದ್ಯೋಗಿಸಿದ ನಿ । ರ್ಭರದ ನಿಡುಗಿಚ್ಚಿನ ವೊಲಿರ್ದುದು ದಹನ ರಿಪುಪುರದ ॥ ಕುಶನೆ ಕೇಳ್ಕೆ ಯುಪವಾದುದು। ಬಿಸರುಹಾಕ್ಷನ ಕೀರ್ತಿತರು; ರಾ। ಕ್ಷಸಪುರ ತ್ರೇತಾಗ್ನಿಕುಂಡಗಳಾದವವನಿಜೆಯ ॥ ವಿಷಮವಿಹ್ವಲಶೋಕಶಿಖಿ ಶೋ। ಭಿಸುವ ಹುತವಹನಾದನಸುರರು। ಪಶುಗಳಾದರು; ಯಜ್ಞದೀಕ್ಷಿತನಾದ ನಾ ಹನುಮ ॥ —(ತೊ.ರಾ)

ಶ್ಲೋ॥ ದಿಧಕ್ಷನ್ಮಾರುತೇರ್ವಾಲಂ ತಮಾದೀಪ್ಯದ್ದಶಾನನಃ । ಆತ್ಮೀಯಸ್ಯ ಪುರಸ್ಯೈವ ಸದ್ಯೋ ದಹನಮಸ್ವಭೂತ್ ॥ —(ಸು)

ಅ॥ ರಾವಣನು ಮಾರುತಿಯ ಬಾಲವನ್ನು ಸುಡಬೇಕೆಂದು ಬೆಂಕಿಯನ್ನು ಹಚ್ಚಿದನು. ಅವನು ತನ್ನಪಟ್ಟಣವೇ ಕಣ್ಣೆದುರಿಗೆ ಸುಟ್ಟದ್ದನ್ನು ಕಂಡನು.

ಲಂಕಾದಹನವಾದಮೇಲೆ ಮಾರುತಿಯು—

✓ ದಿಂ॥ ಉದಧಿಯೊಳಗಾಬಾಲವನೆ ಅದ್ದಿ ಬಂದು। ಹೆದರಿ ಸೀತೆಯನೇ ಸುಟ್ಟೆನೇನೊ ಎಂದು ॥ ಚದುರನಾ ಸತಿಯಂ ನೋಡಿ ನಮಿಸಿ ನಿಂದು। ಮುಂದದಿ ವಾರಿಧಿಯಂ ದಾಂಟಿ ಬಂದನಂದು ॥

ಜಾಂಬವಂತ ಮೊದಲಾದವರೆಲ್ಲ ಅವನನ್ನು ನೋಡಿ ಸಂತೋಷದಿಂದ ಕೃತಾರ್ಥರಾದೆವೆಂದು ಸುಗ್ರೀವನ ಬಳಿಗೆ ಬರುತ್ತ ದಾರಿಯಲ್ಲಿ ಮಧುವನವನ್ನು ಕಂಡರು. ಸಾಮಾನ್ಯವಾಗಿ ಮದ್ಯವು ಪಾನಮಾಡತಕ್ಕದ್ದಲ್ಲ. ಏಕೆಂದರೆ—

ಶ್ಲೋ॥ ಚಿತ್ತೇ ಭ್ರಾನ್ತಿರ್ಜಾಯತೇ ಮದ್ಯಪಾನಾ। ದ್ಭ್ರಾನ್ತೇ ಚಿತ್ತೇ ಪಾಪಚರ್ಯಾಮುಪೈತಿ ॥ ಪಾಪಂ ಕೃತ್ವಾ ದುರ್ಗತಿಂ ಯಾನ್ತಿ ಮೂಢಾ । ಸ್ತಸ್ಮಾನ್ಮದ್ಯಂ ನೈವ ಪೇಯಂ ನ ಪೇಯಂ ॥ —(ಸು)

ಅ॥ ಮಧ್ಯಪಾನದಿಂದ ಮನಸ್ಸಿಗೆ ಭ್ರಾಂತಿಯುಂಟಾಗುತ್ತದೆ. ಆಮೇಲೆ ಅವನು ಪಾಪವನ್ನು ಮಾಡುತ್ತಾನೆ. ಅದರಿಂದ ಮೂಢರಿಗೆ ದುರ್ಗತಿಯಾಗುತ್ತದೆ. ಆದ್ದರಿಂದ ಮದ್ಯವನ್ನು ಕುಡಿಯಬಾರದು; ಕುಡಿಯಲೇ ಬಾರದು.

ಆದರೂ ಸಂತೋಷಸೂಚಕವಾಗಿ ಅವರೆಲ್ಲರೂ ಅಲ್ಲಿ ಮದ್ಯಪಾನವನ್ನು ಮಾಡಿ ತಮ್ಮನ್ನು ತಡೆದ ಕಾವಲುಗಾರರನ್ನು ಗಾಸಿಮಾಡಿದರು. ಆ ಕಾವಲುಗಾರರು ಆ ಸುದ್ದಿಯನ್ನು ಸುಗ್ರೀವನಿಗೆ ಹೇಳುತ್ತಲೇ ಅದು ರಾಮಕಾರ್ಯಸಾಧನೆಯಾದ ಗುರ್ತೆಂದು ತಿಳಿದು ಸುಗ್ರೀವನು ಅವರನ್ನೆಲ್ಲ ಸಂತೋಷದಿಂದ ಬರಮಾಡಿಕೊಂಡ ಕಾಲದಲ್ಲಿ ಹನುಮಂತನು ರಾಮಲಕ್ಷ್ಮಣರಿಗೆ ವಂದಿಸಿ ಸೀತೆಯ ವೃತ್ತಾಂತವನ್ನು ಹೇಳಿ ಚೂಡಾಮಣಿಯನ್ನು ಮುಂದಿಡುತ್ತಲೆ ರಾಮನು ಅದನ್ನು ನೋಡಿ ಕೇಳಿದ್ದೇನೆಂದರೆ—

**ನಾದರಾಮಕ್ರಿಯೆ—ಅಟತಾಳ**

ಏನೆಂದಳಯ್ಯ ಸೀತೆ । ಹನುಮ, ನಿನಗೆ । ಏನ ನುಡಿದಿಹಳು ಪ್ರೀತೆ ॥ ಪ ॥

**ಇದಕ್ಕೆ ಹನುಮಂತನ ಉತ್ತರ—**

ಚೆನ್ನಿಗರ ಚೆಲುವನೆ ಕೇಳೊ । ಜಾನಕಿಯು । ನಿನ್ನ ಬಿಟ್ಟಿರಲಾರಳು ॥ ನಿನ್ನನೆ ನೆನೆಯುತ ಮನಸಿನಲಿ ಕನಸಿನಲಿ । ಚೆನ್ನಾಗಿ ಸಿಂತಿಹಳೊ ರಾಮ ॥ ೧ ॥ ಸ್ವಾಮಿ ರಾಯರ ಪಾದಪ । ಎಲೆ, ಕಪಿಯೆ । ನಾನೆಂತು ಬಿಟ್ಟಿರಲಿ ॥ ದಾನವನ ಶಿರವರಿದು ಲಂಕೆಯ ಪುರವನ್ನು । ದಹನವನು ಮಾಡೆಂದಳೋ ರಾಮ ॥ ೨ ॥ ಎಲ್ಲಿಂದ ಬಂದೆ ಹನುಮಂ । ನೀ ಎನ್ನ । ನೊಲ್ಲ ಕೇಳೋ ಪ್ರೇಮ ॥ ವಲ್ಲಭನ ಕಾಣದೆ ನಿಮಿಷ ಯುಗವಾಗಿದೆ । ನಿಲ್ಲಲಾರೆ ಎಂದಳು ರಾಮ ॥ ೩ ॥ ಚಿಂತಿಸುತ ಬಡವಾದಳೋ । ಜಾನಕಿಯು । ಕಾಂತೆ ತಾನಾಗಿಹಳೋ ॥ ಅಂತರಂಗದಿ ಅನಂತ ಅನಂತ ಎನುತ । ಭ್ರಾಂತಿಯಲಿ ಮರುಗುತಿಹಳೋ ರಾಮ ॥ ೪ ॥ ಅಂಜನಾತನಯ ಕೇಳೋ । ನೀ ಪೋಗಿ । ಕಂಜನಾಭನಿಗೆ ಹೇಳೋ ॥ ಕುಂಜರನ ಕಾಯ್ದ ಶ್ರೀ ಪುರಂದರ ವಿಠಲನ್ನ । ಪಂಜರದ ಅರಗಿಣಿಯೆಂದಳು ರಾಮ ॥ ೫ ॥ —(ದಾ)

ಶ್ಲೋ॥ ವತ್ಸ ಗಚ್ಛ ಮಮ ವಾಚಿಕಮೇತ । ದ್ರಾಮಚನ್ದ್ರಚರಣೇ ಕಥಯೇಥಾಃ ॥ ಆವಯೋರಿವ ಭವೇದನುರಾಗೋ । ನಾವಯೋರಿವ ವಿಧಿಃ ಪ್ರತಿಕೂಲಃ ॥ —(ಸು)

**ಅ॥ ಹನುಮಂತ, ಹೋಗಿ ಈ ನನ್ನ ಮಾತನ್ನು ರಾಮನಿಗೆ ಹೇಳು. (ಅದೇನೆಂದರೆ) ನಮ್ಮಂತೆ ಅನುರಾಗವಿರಲಿ; ನಮ್ಮಂತೆ ದೈವವು ಪ್ರತಿಕೂಲವಾಗಬಾರದು.**

**ಎಂದು ಕೊಟ್ಟ ಆ ಚೂಡಾಮಣಿಯನ್ನು ನೋಡಿ ರಾಮನು ಹಂಬಲಿಸುತ್ತಾನೆ—**

ಕಂ॥ ಜನಕನುಮಂ ಜಾನಕಿಯಾ । ಜನಕನುಮಂ ಮದ್ವಿವಾಹಸಮಯ-ಮುಮಂ ತಾಂ ॥ ನೆನೆಯಿಪುದೀ ಚೂಡಾಮಣಿ । ಮಣಿಯಿಾಗಳ್ ಮಾಗಲಬ್ಧ-ಮತಿಶಯ ಸುಖದಂ ॥ — (ಅ.ಪ್ರ.ನಾ)

**ಮುಂದೇನಾಯಿತೆಂದರೆ—**

ಷ॥ ಕುರುಹಿದಹುದೆಂದರಸನೆಳೆನೇ । ಸರಿಸವೊಲು ರಂಜಿಸುವ ರತ್ನವ । ತುರುಗಿತೊಳುವ ಹರ್ಷಪುಲಕದೊಳಿತ್ತನಸುಜಂಗೆ॥ನೆರೆಯದೀತಂಗೀವ ವಸ್ತೂ । ತ್ಕರವದಂತಿರಲೆಂದು ಬೊಮ್ಮನ । ಪರಮಪದವಿಯನಿತ್ತು ವಿಗೆ ಮನದಣಿಯೆ ಮನ್ನಿಸಿದ ॥ —(ತೊ.ರಾ)

**ಮತ್ತು ಆ ಬ್ರಹ್ಮಪದವಿಯು ಕೂಡ ಕಾಲಾಂತರದಲ್ಲಿ ಫಲಿಸತಕ್ಕದ್ದೆಂದು ಯೋಚಿಸಿ ತತ್ಕ್ಷಣದಲ್ಲಿಯೇ ಫಲಾನುಭವವಾಗುವಂತೆ—**

✓ ಸಾ॥ ಜನಕಜೆಯುರಸನು ಜಗಜ್ಜನಕನಾ । ಹನುಮನಿಗೊಲಿಯುತಲಾಗ ॥ ಮನುಮುನಿಗಳಿಗುಂ ದೊರೆತಿರದಾಲಿಂ । ಗನವನು ಕೊಟ್ಟನು ಬೇಗ ॥

ಇಷ್ಟು ಮಾಡಿ ಸಮುದ್ರವನ್ನು ದಾಟಿದ್ದೆಂತೆಂದು ರಾಮನು ಆಶ್ಚರ್ಯಗೊಂಡು ಕೇಳಿದ್ದಕ್ಕೆ ಮಾರುತಿಯು ಹೇಳುತ್ತಾನೆ—

ಶ್ಲೋ॥ತೀರ್ಣೋ ಭವತಿ ಭವಾಬ್ಧಿ । ಯೈರೇಷಾಂ ತರಣಿಸ್ತು ರಾಮ ತವ ನಾಮ ॥ ಪರಿಮಿತಮಿಮಮಹಮತರಮ್ । ಕಿಂ ಚಿತ್ರಂ ರಾಮಮುದ್ರಿಕಾ ಮುದ್ರಃ ॥ —(ರಾ.ಚ.ಚಂ)

ಅ॥ ಸಂಸಾರಸಾಗರವನ್ನು ದಾಟುವವರಿಗೆ ಹೆ, ರಾಮ, ನಿನ್ನನಾಮವೇ ನಾವೆಯು. ರಾಮ ಮುದ್ರಿಕೆಯಿಂದ ಕೂಡಿದವನಾಗಿ ಈ ಪರಿಚ್ಛಿನ್ನವಾದ ಸಮುದ್ರವನ್ನು ದಾಟುವದೇನಾಶ್ಚರ್ಯ!

ಇದರಿಂದ ಸಂತುಷ್ಟನಾದ ರಾಮಚಂದ್ರನು ಹನುಮಂತನನ್ನು ಬಹಳವಾಗಿ ಶ್ಲಾಘಿಸಿದನು. ಈಪ್ರಕಾರ ದೊಡ್ಡವರಿಂದ ಶ್ಲಾಘನೆಯನ್ನು ಪಡೆಯುವದೇ ಜನ್ಮಸಾಫಲ್ಯ.

ಶ್ಲೋ॥ ಯಜ್ಜೀವಿತಂ ಕ್ಷಣಮಪಿ ಪ್ರಥಿತಂ ಮನುಷ್ಯೈ । ರ್ವಿಜ್ಞಾನವಿಕ್ರಮಯಶೋಭಿರಭಜ್ಯಮಾನಂ ॥ ತನ್ನಾಮಜೀವಿತಮಿಹ ಪ್ರವದನ್ತಿ ತಜ್ಞಾಃ । ಕಾಕೋಽಪಿ ಜೀವತಿ ಚಿರಾಯ ಬಲಿಂ ಚ ಭುಙ್ಕ್ತೇ ॥ —(ಸು)

ಅ॥ ಯಾವನು ತಿಳಿವಳಿಕೆ, ಶೌರ್ಯ, ಕೀರ್ತಿ—ಇವುಗಳಲ್ಲಿ ತಪ್ಪದೆ ಮನುಷ್ಯರಿಂದ ಹೊಗಳಿಸಿಕೊಂಡು ಕ್ಷಣವಾದರೂ ಬದುಕಿರುತ್ತಾನೆಯೊ ಆ ಬಾಳೇ ಬಾಳೆಂದು ಪ್ರಾಜ್ಞರು ಹೇಳುತ್ತಾರೆ. ಕಾಗೆಯು ಕೂಡ ಎಷ್ಟೋ ಕಾಲ ಜೀವಿಸುತ್ತದೆ. ಮತ್ತು ಕೂಳನ್ನು ತಿನ್ನುತ್ತದೆ.

ಹನುಮಂತನು ದಾಸ್ಯದಿಂದ ಇಂಥ ಹೆಚ್ಚಿನ ಲಾಭವನ್ನು ಪಡೆದದ್ದರಿಂದ ಜನರೆಲ್ಲರೂ ಅವನನ್ನು ಅನುಕರಣಮಾಡಲೆಂದು ಭಾಗವತಶಿರೋಮಣಿಗಳು ಕೀರ್ತನಾರಂಭದಲ್ಲಿ "ಸ್ವಾಮಿದಾಸ್ಯ ಮಾಡೊ" ಎಂದುಪದೇಶಿಸಿರುವರು.



## ॥ ಭಜನಾವಲಿ ॥

(೧) ರಾಮ ಜಯರಾಮ ಜಯರಾಮ ಜಯರಾಮ

(೨) ರಾಮ ರಾಮ ರಾಮ ರಾಮ ಭಜ ರೆ ಮನ
ಸೀತಾರಾಮ ಸೀತಾರಾಮ ಭಜ ರೆ ಮನ

(೩) ದಶರಥನಂದನ ಮೇಘಶ್ಯಾಮ ರವಿಕುಲಮಂಡನ ರಾಜಾರಾಮ

(೪) ಸೀತಾರಂಜನ ಮೇಘಶ್ಯಾಮ ಕೌಸಲ್ಯಾಸುತ ರಾಜಾರಾಮ

(೫) ಕೌಸಲ್ಯಾಸುತ ರಾಮ ಸೀತಾರಂಜನ ಮೇಘಶ್ಯಾಮ

(೬) ಮಾಂ ಪಾಹ್ಯತಿದೀನಂ ರಾಘವ ತ್ವತ್ಪದಯುಗಲೀನಂ

**ಜಯಜಯರಘುವೀರ ಸಮರ್ಥ**



# ವಿಭೀಷಣನ ಶರಣಾಗತಿ

## ಪೀಠಿಕೆ—ದುಸ್ಸಂಗತ್ಯಾಗ

**ಕಾನಡಾ—ಅಟತಾಳ**

ತೊರೆಯೊ । ದುಸ್ಸಂಗವ ॥ ಪ ॥ ಪರಿಪರಿಯೊಳು ನಿನ್ನ ಕಿರಿಕಿರಿಗೊಳಿಪುದು ॥ ಅ.ಪ ॥ ಚಿಣ್ಣಾತವಮ್ಮರಸುತ್ತ । ಬಣ್ಣಗೆಡದೆ ನೀನು ॥ ಬಣ್ಣಿಸೆ ಹರಿಯನು । ಪುಣ್ಯಾತ್ಮನೆನಿಸುವೆ ॥ ೧ ॥

**ಭಗವಂತನು ಮನುಷ್ಯನಿಗೆ ಇತರ ಯಾವಪ್ರಾಣಿಗೂ ಕೊಟ್ಟಿಲ್ಲದಂಥ ಬುದ್ಧಿಶಕ್ತಿಯನ್ನು ಕೊಟ್ಟಿದ್ದರೂ ಕೂಡ ಮನುಷ್ಯನು ಅದರ ಸದುಪಯೋಗ ಮಾಡಿಕೊಳ್ಳದೆ ಇರುವದು ಕಂಡುಬರುವದನ್ನು ನೋಡಿ ಕನಿಕರದಿಂದ ಸಮಯೋಚಿತವಾದೊಂದುದಾಹರಣೆಯನ್ನು ಜನರ ನೆನಪಿಗೆ ತಂದು ಕೊಡಬೇಕೆಂದು ನೀತಿಜ್ಞರು ಹೇಳಿರುವದೇನೆಂದರೆ—**

ಶ್ಲೋ॥ ಹೃಷ್ಯಸ್ತ್ಯೃತುಮುಖಾನ್ದೃಷ್ಟ್ವಾ ನವಂ ನವಮಿಹಾಗತಮ್ ।
ಋತೂನಾಂ ಪರಿವರ್ತೇನ ಪ್ರಾಣಿನಾಂ ಪ್ರಾಣಸಂಕ್ಷಯಃ ॥ —(ಶ್ರೀ.ರಾ)

**ಅ॥ ಹೊಸಹೊಸದಾಗಿ ಬರುವಂಥ ಋತುಗಳ ಮುಖವನ್ನು ನೋಡಿ ಸಂತೋಷಪಡುತ್ತಾರೆ ಆದರೆ ಒಂದು ಋತು ಹೋಗಿ ಮತ್ತೊಂದು ಋತು ಬರುವದರಿಂದ ಪ್ರಾಣಿಗಳ ಆಯುಸ್ಸು ಕಳೆದು ಹೋಗುವದು.**

**ಇದರಿಂದ ಆಗುವ ಪರಿಣಾಮವೇನೆಂದರೆ—**

ವೃ॥ ಸೊರ್ಕಿ, ಶರೀರನಾರಿಧನವೆನ್ನವಿನೆಂಡವರಲ್ಲಿ ಕಣ್ಮನಂ । ಸಿರ್ಕಿ, ವಿವೇಕಿಗಳ್ನುಡಿದ ಧರ್ಮವನೊಲ್ಲದೆ, ಕೂಳ ಕೊರ್ಬಿನೊಳ್ ॥ ಕರ್ಕಶವೃತ್ತಿಯೊಳ್ನಡೆಪ ಕಾಮುಕರಂತಕನೊಯ್ವ ಕಾಲದೊ । ಳ್ಮರ್ಕಟನಂತೆ ಪಲ್ಗಿರಿಪರೇತರ ಬಾಳಸರಾಜತೇಶ್ವರಾ ॥ —(ಅ.ಶ)

**ಇಂಥವರಿಗೆ ಸುಖವೆನ್ನುವದು ಹೇಗೆ ಸಿಕ್ಕೀತು?**

ತ್ರಿ॥ ಮಧುವಿನೊಳು ನೊಣ ಬಿದ್ದು ಒದೆದುಕೊಂಬಂದದಲಿ । ಉದಯಾಸ್ತಮಾನ ಕುದಿದು ಕೊಟಲೆಗೊಂಬ । ಅಧಮಗೆಲ್ಲಿಯದು ನಿಜಸುಖ? —(ಸು)

**ಇದನ್ನೇ ಮಾಯೆಯೆಂದು ಒಬ್ಬ ಭಕ್ತರು ಹಾಡಿರುವದೇನೆಂದರೆ—**

**ಹಿಂದುಸ್ಥಾನಿಕಾಪಿ—ರೂಪಕ**

ಕಾಲನಾಟವ । ನೋಡಿರಿಂದ್ರ । ಜಾಲಕೂಟವ ॥ ಪ ॥ ಕಾಲನಾಟವ ನೋಡಿ ತಿಳಿಯೆ । ಕಾಲಕಾಲರಹರಾಕ್ಷಣದಿ ॥ ಅ.ಪ ॥ ಹಗಲು, ರಾತ್ರಿ, ಪಕ್ಷ, ತಿಂಗಳು, ಋತುಗಳಯನ, ವರುಷ, ॥ ಮಗುಳೆ ಮಗುಳೆ ತೋರೆ ತಿರುಗುತ ।

ತಿಗುರಿಯಿಂದವ ತಾಳುತಿರ್ಪ ॥ ೧ ॥ ಆದಿಯಂತವೆರಡು ತೋರ। ದಾದ ರೂಪಿ ಸಿಂದ ಜನರ ॥ ಬಾಧಿಸುತ್ತೆ ಕಾರ್ಯಕಾರಣ। ಭೇದಸ್ಥಿತಿಗೆ ಬೇರೆಂದೆನಿಸಿಹ ॥ ೨ ॥ ಮನಸಿನಿಂದಲೊಗೆದು ಬಹಳ। ಕನಸುಗಳನು ಕಾರಿ ಕಡೆಗೆ ॥ ಘನಸಮಾಧಿಸುಪ್ತಿ ಯಿಂದ। ಮನವ ಶಂಕರನಲ್ಲೆ ಕರಗಿಪ ॥ ೩ ॥ —(ಅ.ಗೀ)

ಟಿ॥ ಇಂದ್ರಜಾಲಕೂಟ—ಕಣ್ಣುಕಟ್ಟಿನಿಂದಾಗುವ ರೂಪು. ಮಗುಳೆ—ಮತ್ತೆ. ಬೇರು—ಕಾರಣ.

ಈ ಮಾಯೆಗೊಳಗಾಗಿ ಅಯೋಗ್ಯಕಾರ್ಯದಲ್ಲಿ ತೊಡಗುವವರು ಕೆಡುವರೆಂದು ದಾಸರು ಹೇಳಿರುವದೇನೆಂದರೆ—

ಉ॥ ಅಲ್ಲದ ಕರ್ಮವ ಆಚರಿಸಿದವ ಕೆಟ್ಟ। ಎಲ್ಲೆ ಮಾತಿನ ಸತಿಯ ನಂಬಿದವ ಕೆಟ್ಟ। ಬಲ್ಲಿದವರೊಳಗೆ ವಿರೋಧಿಸುವವ ಕೆಟ್ಟ। ಫುಲ್ಲನಾಭ ಶ್ರೀಪುರಂದರವಿಠಲನ। ಮೆಲ್ಲಡಿಗಳನು ನಂಬದವನು ಕೆಟ್ಟ ನರಗೇಡಿ ॥ —(ದಾ)

ಪುರಂದರವಿಠಲನ ಮೆಲ್ಲಡಿಗಳನು ನಂಬುವದರ ಅರ್ಥವನ್ನು ಮತ್ತೊಬ್ಬ ದಾಸರು ಸ್ಪಷ್ಟಗೊಳಿಸಿ ಹೇಳಿರುವದೇನೆಂದರೆ—

ಷ॥ ಗತಿವಿಹೀನರಿಗಾರು ನೀನೇ। ಗತಿಕಣಾ! ಪತಿಕರಿಸಿಕೊಡು ಸ। ದ್ಗತಿಯ ನೀನೆಲೆ ದೇವ, ನಿನಗಪರಾಧಿ ನಾನಲ್ಲ; ॥ ಶ್ರುತಿವಚನವಾಡುವದು ಶರಣಾ। ಗತರ ಸೇವನೆಂದು ನಿನ್ನಾ। ಮತವಿಡಿದು ನಂಬಿದೆನು ರಕ್ಷಿಸು ನಮ್ಮನನವರತ ॥ —(ಹ.ಭ)

ಟಿ॥ (ನಿನ್ನ+)ಆಮತವಿಡಿದು —(ನಿನ್ನನ್ನು) ಆ ಅಭಿಪ್ರಾಯವನ್ನು ಹಿಡಿದು.

ಅದೇ ಅಭಿಪ್ರಾಯವನ್ನು ಮತ್ತೊಬ್ಬ ದಾಸರು ವ್ಯಕ್ತಪಡಿಸಿರುವದೇನೆಂದರೆ—

ಆನಂದಭೈರವಿ—ಅಟತಾಳ

ರಾಮನಿಂದಧಿಕದೈವಗಳುಂಟೆ ತ್ರಿಜಗದಿ। ಭ್ರಾಮಕನನು ಬಿಡಿರೋ ॥ಪ॥ ತಾ ಮರೆಯದೆ ಭಕ್ತಸ್ತೋಮಕೆ ಪ್ರೇಮದಿ। ಕಾಮಿತನೀಡುವ ಕರುಣಾಳುವೆನಿಸಿದ ॥ ಅ.ಪ. ॥ ಅಂದಾಂಜನೇಯನು ಬಂದು ಶರಣನಾಗ। ಲೊಂದೆ ಮನದೊಳಾತಗೆ ॥ ಸಂದೇಹವಿಲ್ಲದೆ ಬ್ರಹ್ಮಪದವನಿತ್ತ; । ಇಂದಾರ ಭಜಿಸಿ ನೀವೇನ ಪಡೆದಿರಯ್ಯಾ ॥ ೧ ॥ ಅರಿಯ ಸೋದರನು ಬಂದು ಚರಣಕೆರಗೆ। ಕರುಣಾತಿಶಯದೊಳಗಾತನಿಗೆ ॥ದೊರೆತನವನು ಕರುಣಿಸಿ ನೀನು ಕೊಟ್ಟಂಥ। ಗುರುತಾದ ಕರುಣದ ಕುರುಹುಂಟೆ ಲೋಕದಿ? ॥ ೨ ॥ ಬ್ರಹ್ಮಾಂಡೋದರ ಶ್ರೀಪಾದಪದ್ಮಗಳನ್ನು। ಒಮ್ಮೆಯರಿದು ಭಜಿಸೇ ॥ ನಿಮ್ಮ ಇಷ್ಟಾರ್ಥ ಸಿದ್ಧಿಸುವದು ಸಟೆಯಲ್ಲ। ಘಮ್ಮ ನೀವನು ನರಸಿಂಹದಾಸನುತ ॥ ೩ ॥ —(ದಾ)

ಈ ಪ್ರಕಾರ ಶರಣೆನ್ನುವದಾದರೂ ಹೊರಗೊಂದು ಗುಡಿಗೆ ಹೋಗಿ ಮಾತ್ರ ಹಾಡಬೇಕಾದ್ದಿಲ್ಲ.

ತ್ರಿ॥ ಮನದಲ್ಲಿ ನೆನಹಿರಲು ತನುವೊಂದು ಮಠವಕ್ಕು। ಮನ ಹೋಗಿ ಹಲವ ನೆನೆದರೆ ಅದು ಹಾಳು। ಮನೆಯೆಂದು ತಿಳಿಯೊ ಸರ್ವಜ್ಞ ॥ —(ಸ.ಪ)

ಮನಸ್ಸಿನ ಸಮಾಧಾನಕ್ಕೆ ಹರಿಭಜನೆಯೇ ಕಾರಣವೆಂದು ಒಬ್ಬ ಕವಿಯು ಹೇಳಿರುವದೇನೆಂದರೆ

ಶ್ಲೋ॥ ಅಯೇ ಮನೋ ಮತ್ತಮತಙ್ಗಜೋಽಯಂ । ಇತಸ್ತತಶ್ಚಙ್ಕ್ರಮಣೋ ರಜೋಭಿಃ ॥ ಕ್ರೀಡನ್ಸದಾ ಪಿಪ್ಪಲಭೋಗತುಷ್ಟ । ಸ್ತಚ್ಛಾನ್ತ್ಯೇ ತ್ವಂ ಹರಿಮಾಶ್ರಯಸ್ವ ॥ —(ಸು.ಲಾ)

ಅ॥ ಮನಸ್ಸು ಮದ್ದಾನೆಯಂತೆ (ರಜೋಭಿಃ) ರಜೋಗುಣದಿಂದ ಕೂಡಿ ಯಾವಾಗಲೂ ಅತ್ತಿತ್ತ ಕುಣಿಯುತ್ತಿರುತ್ತದೆ. ಮತ್ತು (ಪಿಪ್ಪಲಭೋಗತುಷ್ಟಃ) ವಿಷಯೋಪಭೋಗದಿಂದ ತೃಪ್ತವಾಗಿರುತ್ತದೆ. ಅದನ್ನು ಕೊಲ್ಲಬೇಕಾದರೆ (ಹರಿಂ) ಭಗವಂತನನ್ನಾಶ್ರಯಿಸಬೇಕು. ಏಕೆಂದರೆ ಮದ್ದಾನೆಯು (ರಜೋಭಿಃ) ಮೈಮೇಲೆ ಧೂಳೆರಚಿಕೊಂಡು ಯಾವಾಗಲೂ ಅತ್ತಿತ್ತ ಕುಣಿಯುತ್ತಿರುತ್ತದೆ. ಮತ್ತು (ಪಿಪ್ಪಲಭೋಗತೃಪ್ತಃ) ಅರಳಿಕಟ್ಟಿಗೆಯನ್ನು ತಿಂದು ತೃಪ್ತವಾಗುತ್ತದೆ. ಅದನ್ನು ಕೊಲ್ಲಬೇಕಾದರೆ (ಹರಿಂ) ಸಿಂಹನನ್ನಾಶ್ರಯಿಸಬೇಕು.

ಹರಿಯನ್ನಾಶ್ರಯಿಸುವದಕ್ಕೆ ಮಾಡಬೇಕಾದ ಪ್ರಯತ್ನವೇನೆಂದರೆ—

✓ಸಾ॥ ವಿಷಯವಾಸನೆಯ ವೃತ್ತಿಯಸುಳಿ; ಅದು ಮೊದಲೆಸಗಿದ ಪಾಪದ ಫಲವು; ॥ ಬಿಸಜಾಕ್ಷನನು ನಿಷ್ಕಾಮದಿ ಚಿಂತಿಸುತ ದೂರ।ಕೆಸೆ ಕಲ್ಪನೆಗಳ ಲೇಶವನು ॥ —(ಮ ಉ)

ಈ ಅಭಿಪ್ರಾಯವನ್ನೇ ಮುಂದುವರಿಸಿ ಭಗವಾನ್ನಾರದರು ತಮ್ಮ ಸೂತ್ರದಲ್ಲಿ "ತತ್ತು ವಿಷಯತ್ಯಾಗಾತ್ಸಙ್ಗತ್ಯಾಗಾಚ್ಚ" ಎಂದರೆ 'ಅದು ವಿಷಯಗಳನ್ನು ಬಿಡುವದರಿಂದಲೂ ಸಂಗವನ್ನು ಬಿಡುವದರಿಂದಲೂ ಆಗುವದು' ಎಂದು ಹೇಳಿದ್ದಾರೆ. ಒಂದು ಪಕ್ಷ ಸರ್ವಸಂಗವನ್ನೂ ಬಿಡದಿದ್ದರೂ "ದುಸ್ಸಙ್ಗಃ ಸರ್ವಥೈವ ತ್ಯಾಜ್ಯಃ" ಎಂದರೆ ಕೆಟ್ಟವರ ಸಂಗವು ಸಂಪೂರ್ಣವಾಗಿ ಬಿಡತಕ್ಕದ್ದು' ಎಂದು ಬೇರೆ ಸೂತ್ರದಲ್ಲಿ ಹೇಳಿ ಇನ್ನೊಂದು ಸೂತ್ರದಲ್ಲಿ "ಕಾಮಕ್ರೋಧಮೋಹಸ್ಮೃತಿಭ್ರಂಶಬುದ್ಧಿನಾಶಸರ್ವನಾಶಕಾರಣತ್ವಾತ್"ಎಂದರೆ ಕಾಮ, ಕ್ರೋಧ, ಮೋಹ, ಸ್ಮೃತಿಭ್ರಂಶ, ಬುದ್ಧಿನಾಶ, ಸರ್ವನಾಶ,—ಇವುಗಳಿಗೆಲ್ಲ ಅದು ಕಾರಣವಾದ್ದರಿಂದ ಎಂದೂ ಅವರೇ ಹೇಳಿದ್ದಾರೆ. ಭಕ್ತಿಶಾಸ್ತ್ರಪ್ರವರ್ತಕರಾದ ಅವರೇ ಸಂಗವನ್ನು ಬಿಟ್ಟವನು ಮಾಯೆಯನ್ನು ದಾಟುವನೆಂದೂ (ವಿಷಯದ ಸಂಗವನ್ನು ಬಿಡಬೇಕಾದರೆ) ನನ್ನದೆಂಬದನ್ನೂ ನನ್ನವರೆಂಬದನ್ನೂ ಬಿಟ್ಟು ಮಹಾನುಭಾವರನ್ನು ಸೇವಿಸಬೇಕೆಂದೂ "ಕಸ್ತರತಿ ಮಾಯಾಂ? ಕಸ್ತರತಿ ಮಾಯಾಂ? ಯಃ ಸಙ್ಗಾಸ್ತ್ಯಜತಿ, ಯೋ ಮಹಾನುಭಾವಂ ಸೇವತೇ, ಯೋ ನಿರ್ಮಮೋ ಭವತಿ" ಎಂಬ ಸೂತ್ರದಲ್ಲಿ ಹೇಳಿದ್ದಾರೆ. ಇದಲ್ಲದೆ—

ಶ್ಲೋ॥ ಮಾಮೇವ ಯೇ ಪ್ರಪದ್ಯನ್ತೇ ಮಾಯಾಮೇತಾಂ ತರನ್ತಿ ತೇ ॥ —(ಭ.ಗೀ)

ಅ॥ ನನ್ನನ್ನೇ ಯಾರು ಶರಣೆನ್ನುತ್ತಾರೊ ಅವರು ಈ ಮಾಯೆಯನ್ನು ದಾಟುತ್ತಾರೆ.

ಶ್ಲೋ॥ ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ । ಭವಾಮಿ ನ ಚಿರಾತ್ಪಾರ್ಥ, ಮಯ್ಯಾವೇಶಿತಚೇತಸಾಮ್ ॥ —(ಭ.ಗೀ)

ಅ॥ ಅರ್ಜುನ, ನನ್ನಲ್ಲಿ ಮನಸ್ಸಿಟ್ಟವರನ್ನು ನಾನು ತಡವಿಲ್ಲದೆ ಮೃತ್ಯುರೂಪವಾದ ಸಂಸಾರ ಸಮುದ್ರದಿಂದ ದಾಟಿಸುವವನಾಗುತ್ತೇನೆ.

ಎಂದು ಸಾಕ್ಷಾತ್ಪರಮಾತ್ಮನೇ ಹೇಳಿದ್ದಾನೆ. ಪರಮಾತ್ಮನಲ್ಲಿಯೇ ಮನಸ್ಸಿಟ್ಟಿರುವದನ್ನು ಒಬ್ಬ ಭಕ್ತರು ತೋರಿಸಿಕೊಂಡಿರುವದೆಂತೆಂದರೆ—

ಅಠಾಣ—ರೂಪಕ

ಆ ರಮಣೀಯ ರೂಪ । ವೆಂದು ನಾನು ಕಾಣುವೆನೊ ॥ ಪ ॥ ನೀರಜಾತ ನಯನನೀ । ತಾರಮಣನ ಸುಂದರವಾ (ದಾ) ॥ ಅ.ಪ ॥ ಮೆರೆವ ನೀಲಮೇಘ ಸದೃಶವಾದ ನಿನ್ನ ಕಾಂತಿಯೂ । ಸುರುಚಿರನವರತ್ನಖಚಿತವರಕಿರೀಟಕಾಂತಿಯೂ ॥ ಕಿರುನಗೆಯಿಂ ಬೆಳಕ ಬೀರುತಿರುವ ದಂತಕಾಂತಿಯೂ । ಕರುಣಾರಸದಿಂದ ಮಿರುಗುತಿರುವ ಕಣ್ಣ ಕಾಂತಿಯೂ ॥ ೧ ॥ ತಿಲಕದಿಂದ ಕೂಡಿದ ಫಣಾಫಲಕಕಾಂತಿಯೂ । ತುಲಸಿಯ ಸರದಿಂದಲೆಸೆವ ಹೃದಯಕಾಂತಿಯೂ ॥ ಹಲವು ದೇವತೆಗಳ ಕಿರೀಟಗಳ ರತ್ನರಾಜಿಯಿಂದ । ಝಳಝಳ ಬೆಳಗುತಿಹ ಪಾದತಲದ ಶುಭ್ರಕಾಂತಿಯೂ ॥ ೨ ॥ ವೇದಗಳೇ ತುಂಬಿತುಳುಕುತಿರುವ ಮುಖದ ಕಾಂತಿಯೂ । ಸಾಧಕಜನಕಭಯವೀವ ವರದಹಸ್ತಕಾಂತಿಯೂ ॥ ಭೇದಬುದ್ಧಿಗಳನು ಕಳೆದು ಸಾಧುಪುರುಷಮೋಹಕಾರಿ । ಯಾದ ಚಿದ್ವಿನೋದವಿಭವವಾದ ದಿವ್ಯಕಾಂತಿಯೂ ॥ ೩ ॥ —(ಭಕ್ತಿ.ಗೀ)

ಇದನ್ನೇ ಭಕ್ತಿಮಾರ್ಗವೆನ್ನುತ್ತಾರೆ. ಈ ಪಂಥವನ್ನು ಭಾಗವತಕಾರರು ಹೊಗಳಿರುವದೆಂತೆಂದರೆ—

ಶ್ಲೋ॥ ಏಷ ನಿಷ್ಕಣ್ಟಕಃ ಪನ್ಥಾ ಯತ್ರ ಸಮ್ಪೂಜ್ಯತೇ ಹರಿಃ । ಧಾವನ್ನಿಮೀಲ್ಯ ವಾ ನೇತ್ರೇ ನ ಸ್ಖಲೇನ್ನ ಪತೇದಿಹ ॥ —(ಸಂ.ಭಾಗ)

ಅ॥ ಭಗವದಾರಾಧನರೂಪವಾದ ಇದು ತಡೆ ಇಲ್ಲದ ದಾರಿ. ಕಣ್ಣುಮುಚ್ಚಿಕೊಂಡು ಓಡಿದರೂ ಈ ದಾರಿಯಲ್ಲಿ ಎಡವುವದೂ ಇಲ್ಲ; ಬೀಳುವದೂ ಇಲ್ಲ.

ಹೀಗೆ ಭಕ್ತಿಮಾರ್ಗದಲ್ಲಿ ಮನಸ್ಸು ನಿಂತವನ ಸ್ಥಿತಿಯನ್ನು ಒಬ್ಬ ಕವಿಯು ವರ್ಣಿಸಿರುವದೇನೆಂದರೆ—

ವೃ॥ ನೀಡುಂ ದಿನಂ ನಿಜಾತ್ಮನನೆ ಭಾವಿಸಿ ಸಂಸ್ಕೃತನಾದ ಮೇಲೆ ತಾಂ । ನೋಡುವುದಲ್ಲಿಯೇ, ತಿಳಿವುದಲ್ಲಿಯೆ, ಪೊರ್ದುವುದಲ್ಲಿಯೇ, ಪ್ರಿಯಂ ॥ ಮಾಡುವುದಲ್ಲಿಯೇ, ಸುಖಿಪುದಲ್ಲಿಯೆ, ಅರ್ಚಿಪುದಲ್ಲಿಯೇ, ಮರ । ಲ್ದಾಡುವುದಲ್ಲಿಯೇ; ಪೊರಗೆ ಮೆಚ್ಚನಲಾ! ಅಪರಾಜಿತೇಶ್ವರಾ ॥ —(ಅ.ಶ)

ಟಿ॥ ನೀಡುಂ—ಬಹಳವಾಗಿ. ಪೊರ್ದುವುದು—ಆಶ್ರಯಿಸುವದು. ಮರಲ್ದು+ಆಡುವುದು ಮತ್ತೆ ವಿಹರಿಸುವದು.

‘ ಪೊರಗೆ ಮೆಚ್ಚನಲಾ ’ ಎಂಬ ಮೇಲೆ ಹೇಳಿದ ಕವಿಯ ಆಶಯವನ್ನು ಮತ್ತೊಬ್ಬ ಕವಿಯು ಪುಷ್ಟಿಗೊಳಿಸಿರುವದೆಂತೆಂದರೆ—

ಶ್ಲೋ॥ ಶ್ರೀರಾಮನಾಮಮಾಧುರ್ಯಸ್ವಾದಸಮ್ಭೃತಚೇತಸಾಮ್ ।
ಮೃದ್ವೀಕಾರಸರೂಪಂ ತು ಭಾತಿ ತುಚ್ಛತಮಂ ಭುವಿ ॥ —(ಸು.ಲಾ)

ಅ॥ ಶ್ರೀರಾಮನಾಮದ ಮಾಧುರ್ಯದ ರುಚಿಯಿಂದ ಮನಸ್ಸೆಲ್ಲ ತುಂಬಿದವರಿಗೆ (ಮೃದ್ವೀಕಾ+ರಸ+ರೂಪಂ+ತು) ದ್ರಾಕ್ಷೆಯ ರಸವಾದರೂ ಜಗತ್ತಿನಲ್ಲಿ ಬಹಳ ತುಚ್ಛವಾಗಿ (ಮೃದ್ವೀಕಾರ+ಸರೂಪಂ+ತು) ಮಣ್ಣಿನಂತೆ ಕಾಣುತ್ತದೆ.

ಆದ್ದರಿಂದ ಮನುಷ್ಯನು ಮಾಯಾರೂಪವಾದ ದುಸ್ಸಂಗವನ್ನು ಬಿಟ್ಟು ಹರಿಗೆ ಶರಣುಹೋಗಬೇಕು. ತಡಮಾಡಬಾರದು. ಏಕೆಂದರೆ—

ಶ್ಲೋ॥ ನ ಕಶ್ಚಿದಪಿ ಜಾನಾತಿ ಕಿಂ ಕಸ್ಯ ಶ್ವೋ ಭವಿಷ್ಯತಿ । ಅತಃ ಶ್ವಃ ಕರಣೀಯಾನಿ ಕುರ್ಯಾದದ್ಯೈವ ಬುದ್ಧಿಮಾನ್ ॥ —(ಸು)

ಅ॥ ನಾಳೆ ಯಾರಿಗೆ ಏನಾಗುತ್ತದೊ ಯಾರಿಗೂ ತಿಳಿಯದು. ಆದ್ದರಿಂದ ಜಾಣನಾದವನು ನಾಳೆ ಮಾಡುವದನ್ನು ಇವತ್ತೆ ಮಾಡಬೇಕು.

ಈ ಮಾತನ್ನು ಎಚ್ಚರಿಸುವದಕ್ಕಾಗಿಯೇ ಪೀಠಿಕೆಯಲ್ಲಿ "ತೊರೆಯೊ ದುಸ್ಸಂಗವ" ಎಂದು ಉಪದೇಶಮಾಡಿರುವದು. ಈ ಪ್ರಕಾರ ಭಯವನ್ನು ಕಾಣುತ್ತಲೆ ದುಸ್ಸಂಗವನ್ನು ಬಿಟ್ಟು ಹರಿಗೆ ಶರಣುಹೋಗಿ ಆತ್ಮೋದ್ಧಾರವನ್ನು ಮಾಡಿಕೊಂಡದ್ದಕ್ಕೆ ಉದಾಹರಣೆಯಾಗಿ "ವಿಭೀಷಣನ ಶರಣಾಗತಿ" ಎಂಬ ಆಖ್ಯಾನವು ನಿರೂಪಣಮಾಡಲಾಗುವದು.



# ಆಖ್ಯಾನ

ಹನುಮಂತನು ಲಂಕೆಯ ವೃತ್ತಾಂತವನ್ನು ಹೇಳಿ ಮುಗಿಸಿದೊಡನೆಯೆ ಕಪಿಗಳೆಲ್ಲರೂ ವೀರಾವೇಶವನ್ನು ಹೊಂದಿ ರಾವಣನನ್ನು ಕೊಲ್ಲುವದಕ್ಕೆ ನಾನು ಮುಂದು ತಾನು ಮುಂದೆಂದು ಹೊರಡಲು ಶ್ರೀರಾಮಚಂದ್ರನು ಲಕ್ಷ್ಮಣಸಮೇತನಾಗಿ ಮಾರುತಿಯ ಹೆಗಲ ಮೇಲೆ ಕುಳಿತು ಕಪಿಸೇನೆಯೊಡನೆ ಬರುತ್ತಿರುವ ಪರಿಸ್ಥಿತಿಯನ್ನು ನೋಡಿ ಕವಿಯು ವರ್ಣನೆಮಾಡಿರುವದೇನೆಂದರೆ—

ಷ॥ ಗಿರಿಯೆ ಖೇಟಕವಾಗೆ, ಚಿನ್ನುಮ್ಮ ವ । ತರುನೆ ಖಂಡೆಯವಾಗೆ, ಪದಹತ । ಧರಣಿತಲ ಕೆಮ್ಮಟ್ಟೆಯಾಗಲಜಾಂಡವೊಂದೆನಿಪ ॥ ಗರುಡಿಯಲಿ ಲಯಕಾಲಭೈರವ । ಹರರೊಡನೆ ಸಾಧನೆಯ ತೋರುವ । ಪರಿಯೆನಲು ಹರಿಸೇನೆ ನಡೆದುದು ಶರಧಿಯುಗಲದಲಿ ॥ —(ರಾ.ಕ.ಕು)

ಟಿ॥ ಖೇಟಕ—ಗುರಾಣಿ. ಹರಿಸೇನೆ—ಕಪಿಸೇನೆ.

✓ಕೀ॥ ಕರಡಿಗಳೇ ಕರಿಘಟೆಗಳು; ಮುಸುವಗ । ಳಿರವೇ ಅಲ್ಲಿಯ ತುರಗ ಚಯ; ॥ ಕರಿಯ ಕಪಿಗಳೇ ತೇರ್ಗಳು; ವೋಣ್ಮರು । ಚರರೆ ಪದಾತಿಯು ಹೊಸ ಪರಿಯ ॥

ಇವು ಬರುವ ಬರವನ್ನು ಮತ್ತೊಬ್ಬ ಕವಿ ವರ್ಣಿಸಿರುವದೆಂತೆಂದರೆ—

ಷ॥ ಕೀಲುಕಳೆಚಿದವಮರಶೈಲದ; । ಮೇಲು ಜಗವುಗ್ಗಡಿಸಿ, ದಿಕ್ಕಿನ । ಮೂಲೆ ಹರಿದವು; ಬಿಟ್ಟುದತಲದ ಬೆಸುಗೆ ಭೂತಳದ; ॥ ತಾಳುವವರಿನ್ನಾರೊ? ಎನುತಾಂ । ದೋಳವಸಾನಸನಾಗಿ ಬೆಂಬಿಡ । ದೋಲಗಿಸಿ ಬರುತಿರ್ದನಜನಂ-ಭೋಜಲೋಚನನ ॥ —(ತೊ.ರಾ)

ದಾರಿಯಲ್ಲಿ —

✓ಸಾ॥ ಸರಭಸದಿಂದಲಿ ಲಂಕೆಯ ಸುಗ್ಗಲು । ಬರುತಿರೆ ಸೇನೆಯಪಾರ ॥ ನೆರೆ ಕಾಣಿಸಿಕೊಂಡುದು ಮಾರ್ಗದಿ ಭೋ । ರ್ಗರೆಯುವ ಪಾರಾವಾರ ॥

ಅದನ್ನು ಕವಿ ವರ್ಣಿಸಿರುವದೆಂತೆಂದರೆ—

ಷ॥ ಒದೆದು ವೇಲಾಚಲವನಭ್ರದ । ತುದಿಗೆ ಲಂಘಿಸಿ, ಮುರಿದು ವಿತಳವ । ಸದೆದು, ಭೋರೆಂದುಲಿದು ದಿಗುಭಿತ್ತಿಗಳ ಹೊಯ್ದುಲೆದು,॥ ಮದದಹಂಕಾರದಲಿ ತನಗಿ । ಲ್ಲದಿರಹ ಪ್ರತಿಭಟರೆನುತ ಹರು । ಷದಲಿ ಮಲೆದೊಲೆದಾಡುತಿರ್ದನು ಶರಧಿ ಧೃತಿಶರಧಿ ॥ —(ತೊ.ರಾ)

ಟಿ। ಮಲೆದು—ಸೊಕ್ಕಿನಿಂದ. ಧೃತಿಶರಧಿ—ಧೈರ್ಯದಸಮುದ್ರನಾದ.

ಅದನ್ನು ದಾಟುವದಶಕ್ಯವೆಂದು ಚಿಂತೆಯನ್ನು ಹಚ್ಚಿಕೊಂಡು ರಾಮನು ಸೀತೆಗಾಗಿ ದುಃಖಿಸುತ್ತಾನೆ—

ತೋಡಿ—ಅಟತಾಳ

ಏಗೈವೆನಿದಕೆ । ಸಾಗಲು ಮುಂದಕೆ । ಸಾಗರವೇ ವಿಘ್ನ । ವಾಗಿರುವದಕೆ ॥ ಪ ॥ ಎಂದಿನ್ನು ಕಾಂಬೆನು । ಕುಂದರದನೆಯನು ॥ ಮಂದಗಮನೆಯನು । ಚಂದಿರಾನನೆಯನು ॥೧॥ ಎಷ್ಟೆಂದು ಸೊರಗುವೆ । ಎಷ್ಟೆಂದು ಕೊರಗುವೆ ॥ ಎಷ್ಟೆಂದು ಮರುಗುವೆ । ದುಷ್ಟನ ದೆಸೆಯಿಂದ ॥೨॥ ಕ್ಷಣವೊಂದು ಯುಗವಾಗಿ । ಹೆಣಗಿಸುತಿಹುದಲ್ಲ! ॥ ಚಿನುಮಯನಾಗಿಯು ಬಿಟ್ಟು । ತನುವ ಧರಿಸೆನಲ್ಲ ॥ ೩ ॥

ಇತ್ತ ಲಂಕೆಯಲ್ಲಿ ಏನು ನಡೆಯಿತೆಂದರೆ—

✓ದಿಂ॥ ಹನುಮ ತಾ ಸುಟ್ಟಾ ಲಂಕೆಯನ್ನು ಮತ್ತೆ । ಅನುವೆಸಲ್ ಮಯಸಿಂ ಸರಿಯ ಮಾಡಿಸುತ್ತೆ ॥ ದನುಜನಾಥಂ ತಾ ಸಭೆಯ ಕರೆದನಂದು । ವನಚರಾಧಿಕ್ಯಕ್ಕೇನಮಾಳ್ಪುದೆಂದು ॥

ಅದೇ ಸಮಯದಲ್ಲಿಯೇ ಸಮುದ್ರದ ತೀರದಲ್ಲಿ ರಾಕ್ಷಸನಾಯಕರು ಕಪಿಸೇನೆಯನ್ನು ನೋಡಿ ಹೆದರಿ ಸಭೆಗೆ ಬಂದು ಬಿನ್ನಯಿಸುತ್ತಾರೆ—

✓ಚೌ॥ ಜೀಯ, ಬಂದಿವೆ ಕಪಿಗಳೀಯಿಳೆ–ಬಾಯಬಿಡುತಿರ್ಪಂದದಿ । ಕಾಯಬಲದೊಳಗಿಂದ್ರಯಮರಿಗ-ಜೀಯರೆನಿಸುವ ಚಂದದಿ॥ ರಾಯ, ಕೇಳಾ ಸೈನಿಕರು ಶೈ–ಲಾಯುಧದ ಸಂಬಂಧದಿ । ಸಾಯಹೊಯ್ವಂತೊಟ್ಟುಗೂಡಿ-ಹರಾಯುತವೆನಲು ಸಾಂದ್ರದಿ ॥

**ಆಗ ರಾವಣನು ತನ್ನ ಮಂತ್ರಿಗಳನ್ನು ಕುರಿತು ಹೇಳುತ್ತಾನೆ—**

**ನೋಟ್—ಧೀರಶಂಕರಾಭರಣ—ಆದಿತಾಳ**

ಮನದೊಳು ಯೋಚಿಸಿರಕ್ರಮವ। ವನಚರ ಗೈದ ಪರಾಕ್ರಮವ ॥ ಪ ॥ ಬಂದಿತು ಕಪಿ ಜಲಧಿಯ ಹಾರಿ। ನಿಂದಿತಿಲ್ಲಿ ದರ್ಪವ ತೋರಿ ॥ ಚಂದದಿ ಹುಡುಕಿತು ಸೀತೆಯನು। ಅಂದದಿ ಗೈದಿತು ಕಾರ್ಯವನು ॥ ೧ ॥ ಮುರಿದೊಟ್ಟಿತು ನಮ್ಮ ವನವ। ತರಿದೊಟ್ಟಿತು ರಾಕ್ಷಸಕುಲವ ॥ ಉರಿಯಿಟ್ಟುರುಹಿತ್ತೀ ಪುರವ। ನೆರೆಧೀಂಕಿಟ್ಟಿತು ಸಾಗರವ ॥ ೨ ॥ ವಾನರನೊಬ್ಬನ ಸಾಹಸವ। ಮಾಣಿಸದಿಹ ನಮ್ಮಯ ಬಲವ ॥ ಜಾಣರು ಜರಿವಂತಿರ್ಪ್ಪರವ। ಕಾಣುತೆ ಮಾಡುವೇವೆನನುವ ॥ ೩ ॥ ಬರುವದಂತೆ ಬಲು ಕಪಿಸೇನೆ। ಬಿರಿಸುವಂತೆ ಭೂಭಾಗವನೆ ॥ ಇರಿವರಂತೆ ರಾಕ್ಷಸರನ್ನೇ। ಅರಿತು ಪೇಳಿ ನೀಂ ಗೈವುದನೆ ॥ ೪ ॥

ಶ್ಲೋ॥ ಪದಾಹತಂ ಸಮುತ್ಥಾಯ ಮೂರ್ಧಾನಮಧಿರೋಹತಿ। ಸ್ವಸ್ಥಾದೇವಾವಮಾನೇಽಪಿ ದೇಹಿನಸ್ತದ್ವರಂ ರಜಃ ॥ —(ಸು)

ಅ॥ **ಅವಮಾನವಾದರೂ ಸುಮ್ಮಗಿರುವ ಮನುಷ್ಯನಿಗಿಂತಲೂ ಧೂಳಿ ಹೆಚ್ಚಿನದು. ಏಕೆಂದರೆ ಕಾಲಿನಿಂದ ತುಳಿಯುತ್ತಲೆ ತಲೆಯ ಮೇಲಕ್ಕೇರುತ್ತದೆ.**

**ಇದಕ್ಕೆ ರಾಕ್ಷಸರ ಉತ್ತರ—**

✓ಕೀ॥ ಅರಳೆನೆ ಮುಕ್ಕುವೆವಾ ವಾನರರನು। ನರರನು ಕೂಡಿ ವಿನೋದದಲಿ॥ ನೆರೆ ನಮ್ಮಪೇಕ್ಷೆ ಕಪಿಯನುಳಿಸಿತೆಂ। ದರು ದೈತ್ಯರು ಬಲುಮೋದದಲಿ ॥

**ಅದರ ಜೊತೆಗೆ ಪ್ರಹಸ್ತನೇ ಮೊದಲಾದವರು ರಾವಣನನ್ನು ಹೊಗಳುತ್ತಾರೆ—**

✓ಸೀ॥ ಗೆಲಿದೆ ನೀ ಪನ್ನಗರ; ಗೆಲಿದೆ ನೀ ಯಕ್ಷರನು; ಗೆಲಿದೆ ನೀ ಸರ್ವ ದಿಕ್ಪಾಲಕರನು। ಗೆಲಿದು ನೀನೀ ವಿಮಾನವ ತಂದುಕೊಂಡಿರುವೆ; ಗೆಲಿದು ನೀ ಕ್ಷತ್ರಿಯರ ಮೆರೆಯುತಿರುವೆ ॥ ಒಲಿಸಿಕೊಂಡಿಹೆ ನೀನು ಮಯನಾತ್ಮಜಾತೆಯನು; ಒಲಿಸಿಕೊಂಡಿಹೆ ರಸಾತಲದವರನು। ಒಲಿಸಿಕೊಂಡಿಹೆ ಕಾಲಕೇಯರಾಕ್ಷಸರನ್ನು; ಒಲಿಸಿಕೊಂಡಿಹೆ ಸರ್ವಲೋಕವನ್ನು ॥ ಇಳೆಯೊಳೀರಾಮನಿನ್ನೆಷ್ಟರವನು। ಕಲಕೆ ಕಪಿಸೇನೆಯನು ಚಿಂತೆಯೇನು?! ಬಲುವೀರರಾದ ನಾವಿಲ್ಲವೇನು?। ತಿಳಿಯಿಂದ್ರಜಿತು ಒಬ್ಬ ಸಾಲದೇನು? ॥

**ಹೀಗೆಂದ ಅವರ ಯುದ್ಧೋದ್ಯೋಗವನ್ನು ತಡೆದು ವಿಭೀಷಣನು ಹೇಳುತ್ತಾನೆ—**

✓ಸೀ॥ ಸಾಮದಾನಗಳು ಕೈಗೂಡಿಸುವ ಕಾರ್ಯಕ್ಕೆ ಈ ಮಹಾದಂಡವನು ನೆನೆಯ ಸಲ್ಲ। ಕಾಮಮೋಹಿತರಾದ ಜನಗಳೆಂದೆಂದಿಗೂ ರಾಮನನು ಗೆಲ್ಲುವದು ಸಾಧ್ಯವಲ್ಲ ॥ ಆ ಮಹಾಪುರುಷನದು ತಪ್ಪಿಲ್ಲದುದರಿಂದಲೀ ಮಹಾಸಂರಂಭ ಯುಕ್ತವಲ್ಲ। ಆ ಮಹಾಬ್ಧಿಯ ದಾಂಟಿಬಂದ ವಾನರರೆಮ್ಮ ಸೀಮೆಯನೆ ಗೆಲ್ಲದೇ ಬಿಡುವದಿಲ್ಲ ॥ ತಾಮಸವ ತಾಳುತ್ತ ಬಗುಳಲೇಕೆ?। ನಾವಮಾವಶೇಷರಾ

ಗುವದದೇಕೆ? । ನೇಮುವನು ನಿರಾರಿವರ್ತಿಸುವದೇಕೆ? । ಕಾಮಿನಿಯ ಕಳುಹಿ ಬದುಕುವದು ಜೋಕೆ! ॥

**ಈ ಮಾತಿಗೆ ಅಸಹ್ಯಗೊಂಡು ರಾವಣನು ಆದಿನದ ಸಭೆಯನ್ನು ಅಷ್ಟಕ್ಕೇ ಮುಗಿಸಿ ಮರುದಿನ ದೊಡ್ಡಸಭೆಯನ್ನು ಮಾಡಿ ಕೇಳಿದ್ದೇನೆಂದರೆ—**

✓ ಸಾ॥ ಜಲಧಿಯು ದಾಟುವ ನರರು ವಾನರರು । ಬಲಿಷ್ಠರಾಗಿಹರಲ್ಲ! ಜಲಜಾಕ್ಷಿಯನೊಪ್ಪಿಸದೆ ರಾಮನನು । ಗೆಲುವದ ಪೇಳಿರಿ ಸೊಲ್ಲ ॥

**ಅದಕ್ಕೆ ಕುಂಭಕರ್ಣನು ಹೇಳುತ್ತಾನೆ—**

**ಕಮಾಚು—ರೂಪಕ**

ಅಣ್ಣಾ ಕೇಳೋ ನಿನ್ನ ಕೃತಿಯು । ಬಣ್ಣಗೆಟ್ಟುದಾಯಿತೊ ॥ ಬಣ್ಣಗೆಟ್ಟುದಾಯಿತೊ । ಸಂ । ಪನ್ನತನವೆ ಹೋಯಿತೋ ॥ ಪ ॥ ಯಾರ ನೀನು ಕೇಳಿ ತಂದೆ? । ಸೀರೆಯು ಪಂಚವಟಿಯಿಂದೆ ॥ ನಿವಾರಿಬಂತು ಜಗದಿ ನಿಂದೆ । ದಾರಿಗಾಣದೆನಗೆ ಮುಂದೆ ॥ ೧ ॥ ರಾಮಚಂದ್ರ ಮನುಜನೇನೊ? । ಭೂಮಿಪುತ್ರಿ ಮನುಜೆಯೇನೊ? ॥ ಕಾಮಚೇಷ್ಟೆ ಯೋಗ್ಯವೇನೊ? । ತಾಮಸಗುಣಪಲ್ಲವೇನೊ? ॥ ೨ ॥ ಕಳವ ಮಾಡಿ ರಾಮನಲ್ಲಿ । ಉಳಿದುದೆಮ್ಮ ಭಾಗ್ಯವಿಲ್ಲ ॥ ತಳಮಳವಹ ಕೆಲಸದಲ್ಲಿ । ತಿಳಿಯೆ ಸೌಖ್ಯವಪ್ಪುದೆಲ್ಲಿ? ॥ ೩ ॥

**ಈ ಮಾತಿಗೆ ಅಸಹ್ಯಗೊಂಡ ರಾವಣನ ಒಲುಮೆಯನ್ನುಳಿಸಿಕೊಳ್ಳುವದಕ್ಕೆ ಅವನು ಮತ್ತೆ ಹೇಳಿದ್ದೇನೆಂದರೆ—**

✓ ದಿಂ॥ ಮಾಡಬಾರದುದಾಗಿಹುದು ನಿನ್ನ ಕರ್ಮ । ಆಡಲೇನದ ಸಾಧಿಪುದೆ ನಮ್ಮ ಧರ್ಮ ॥ ಬೇಡ ಯೋಚನೆ ನಾನರಿಗಳೆಲ್ಲರನ್ನು । ಕೂಡಿಸುವೆ ಮಣ್ಣಿಂ ತೋರಿ ಶೌರ್ಯವನ್ನು ॥

**ಆಗ ವಿಭೀಷಣನು ಹೇಳುತ್ತಾನೆ—**

ಷ॥ ಆರುತಿವೆ ತ್ರೇತಾಗ್ನಿಗಳು; ತಲೆ । ದೋರುತಿವೆ ಫಣಿ ಹೋಮಕುಂಡದಿ; । ನೀರಡಗಿ ಮಂಡೂಕತತಿಯೊದರುತಿದೆ ಕೂಪದಲಿ; ॥ ತೇರುಗಳಲುರಿಮಸಗುತಿದೆ; ಮದ । ಧಾರೆಯೊಣಗಿದುದಿಭಕೆ; ಪಟ್ಟದ । ವಾರುವಂಗಳ ಕಣ್ಗಳಲಿ ಸೂಸುತಿದೆ ಜಲಧಾರೆ ॥ —(ರಾ.ಕ.ಕು)

**ಈ ಅಪಶಕುನಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ಶತ್ರುಗಳ ಪರಿಸ್ಥಿತಿಯನ್ನು ನೋಡಿದರೆ—**

✓ ಚೌ॥ ಮನುಜರಾದೊಡೆ ರಾಕ್ಷಸರ ವಧೆ—ಗೆನುತ ಬಹರೇ ಯೋಚಿಸು । ವನದ ಕಪಿಗಳು ಜನಪರಾಜ್ಞೆಗೆ ತನುವ ತೆರುವರೆ ಭಾವಿಸು ॥ ವನನಿಧಿಯ ಲಂಘಿಸುವನೆಂತಾ ಹನುಮನೆಂದಾಲೋಚಿಸು । ಘನವೆನಿಸುವಿವುಗಳನು ತಿಳಿಯುತ—ಮನುಜಗೆರಗುತ ಜೀವಿಸು ॥

**ಒಂದು ಪಕ್ಷ ಇವುಗಳಲ್ಲಿ ಮಹತ್ತ್ವವು ತೋರದಿದ್ದರೂ ಪರಸ್ತ್ರೀವ್ಯಾಮೋಹವು ಬಿಡತಕ್ಕದ್ದೆಂದು ಹೇಳುತ್ತಾನೆ—**

ಶ್ಲೋ॥ ಅಹಹ! ವಿಧಿನಿಯೋಗಾದದ್ಯ ನಕ್ತಂಚರೇಂದ್ರ, । ತ್ವಮಸಿ ಪರ-ಕಲತ್ರೇ ದುರ್ನಿವಾರಾನುರಾಗಃ ॥ ಅರುಣದವಶಿಖಾಯಾಮಾಮಿಷಗ್ರಾಸ ಮೋಹಾ । ದವಿರಳಕೃತಜಿಹ್ವಾಚಾಪಲಃ ಕೇಸರೀವ ॥ —(ರಾ.ಚಂ)

ಅ॥ ಆಹಾ! ಹೆ, ರಾಕ್ಷಸೇಂದ್ರ ಏನು ದೈವವೊ! ಮತ್ತೊಬ್ಬರ ಹೆಂಡತಿಯ ಮೇಲೆ ಇರುವ ನಿನ್ನ ಅನುರಾಗವನ್ನು ಹಿಂದಿರುಗಿಸಲಸಾಧ್ಯವಾಗಿದೆಯಲ್ಲ! ಅದು ಕೆಂಪಗಿರುವ ಕಾಳ್ಗಿಚ್ಚಿನ ಉರಿಯನ್ನು ತಿನ್ನುವ ಮಾಂಸವೆಂದು ಭ್ರಮಿಸಿ ಅತ್ಯಂತವಾಗಿ ಚಾಪಲ್ಯವನ್ನು ಹೊಂದಿದ ಸಿಂಹದಂತೆ.

ಇದಕ್ಕೆ ರಾವಣನ ಉತ್ತರ—

✓ ಕೀ॥ ಏನ ಹೇಳುತಿಹೆಯೆನ್ನ ಮುಂದೆ ನೀ । ಜಾಣನೆಂದು ತೋರಿಸಿಕೊಳುತ ॥
ಮಾಣು, ಮಾಣು, ನಾ ರಣದಿ ತೋರುವೆನು । ವಾನರನರರೆಲ್ಲರ ಕೊಲುತ ॥

ಈ ಮಾತಿಗೆ ವಿಭೀಷಣನು ಹೇಳುತ್ತಾನೆ—

ಆನಂದಭೈರವಿ—ಝಂಪೆ

ಅಣ್ಣನೆಂದುದ ಕೇಳಿ ಮರುಗಿ ವಿಭೀಷಣನು । ಬಣ್ಣಗೆಟ್ಟಿತು ಲಂಕೆಯು । ಎಂದ । ಶಿರಗ । ಳಣ್ಣೆಕಲ್ಲಾಡುವನು ರಾಮ । ವಂಶ । ಮಣ್ಣುಗೂಡುವದು ನಿರ್ನಾಮ । ಸ್ವಾಮಿ । ಅನ್ಯಾಯ ಕೋಪವೆಂಬೊ ನೇಮ । ಅಹುದು । ಕಣ್ಣಾರೆ ಕಾಣಬೇಕಾಯ್ತು ದುಃಖವನು ಮುಂ । ದುಣ್ಣಬೇಕಾಯಿತಲ್ಲೊ । ಅಣ್ಣಾ । ಬಿಟ್ಟು ಕಳುಹೊ ಸೀತೆಯ ॥ —(ವಿ.ಬು)

ಟಿ॥ ಅನ್ಯಾಯ ಕೋಪವೆಂಬೊ ನೇಮ—ಅನ್ಯಾಯ, ಕೋಪ—ಎಂಬುವದೇ ಆಚಾರವಾಗಿ.

ಅದಕ್ಕೆ ರಾವಣನ ಉತ್ತರ—

ಸೃಷ್ಟಿಯೊಳಗುಳ್ಳ ನಾರಿಯರಿವಳದೊಂದಂ । ಗುಷ್ಟತುದಿಯನು ಪೋಲ್ವರೇ । ತಮ್ಮ । ಬ್ರಹ್ಮ । ಸೃಷ್ಟಿಸಿದ ಹೆಣ್ಣು ಇವಳಲ್ಲ । ಮನವು । ನೆಟ್ಟಿತಿವಳಲ್ಲಿ ಬೇರಿಲ್ಲ । ಜಗದೊ । ಳಿಷ್ಟು ಚೆಲ್ವಿನ ಸತಿಯರಿಲ್ಲ । ಕೇಳು । ಇಷ್ಟಾರ್ಥದಷ್ಟಮಹದೈಶ್ವರ್ಯವಾಗಿ ನನ । ಗಿಷ್ಟಸತಿಯಿವಳು ಕಾಣೊ । ತಮ್ಮ । ಬಿಡೆನು ಕಾಣೊ ಸೀತೆಯ ॥ —(ವಿ.ಬು)

ಆಗ ಮಹಾಪಾರ್ಶ್ವನು ರಾವಣನಿಗೆ ಹೇಳುತ್ತಾನೆ.—

✓ ಸಾ॥ ಬರಿದೆ ವಿಚಾರವಿದೇಕೆ? ನೀ ಬಲಾ । ತ್ಕರಿಸಿ ಭೋಗಿಸಾ ಸ್ತ್ರೀಯ ॥
ನರವಾನರರನು ವಿಮುಖರ ಗೆಯ್ಯಲು । ನೆರೆ ಸಾಕಿದೊಂದುಪಾಯ ॥

ಅದಕ್ಕೆ ರಾವಣನ ಉತ್ತರ.

ಕಂ॥ ಪರಸತಿಯರನೊಲ್ಲದ ಬಲಾ । ತ್ಕರಿಸುತೆ ನೀನವರನೈದೆ ಭೋಗಿಸೆ ನಿನ್ನಾ । ಶಿರವೊಡೆದು ಪೋಳ್ಗಳಕ್ಕೆನು । ತುರೆ ಮುಳಿಸಿಂ ಶಾಪವಿತ್ತನಂಭೋಜಭವಂ ॥ (ರಾ. ಅ. ನಾ)

ಆಮೇಲೆ ನಡೆದ ಮತ್ತೊಂದಾಲೋಚನೆಯೇನೆಂದರೆ—

✓ ಕೀ|| ರಾಮನರೂಪಿಂದೆಲೆ ರಾವಣನೇ| ಭೂಮಿಜೆಯಂ ಕೂಡೆನಲೊಬ್ಬ || ಕಾಮಿಯೆಂದನೆಲೆ ರಾಮರೂಪು ಬರೆ| ಕಾಮವೆ ಹೋಗುವದಬ್ಬಬ್ಬ! ||

ನಡುವೆ ಬಾಯಿಹಾಕಿ ವಿಭೀಷಣನು ಮತ್ತೆ ಹೇಳುತ್ತಾನೆ—

ಆನಂದಭೈರವಿ—ಝಂಪೆ

ಕಡ್ಡಿಯನು ಮುರಿದು ಹೇಳುವೆನು ರಾವಣ ಕೇಳು|ಹೆಡ್ಡತನ ನಿನ್ನದಲ್ಲೊ| ಅಣ್ಣಾ| ಜಗಕೆ| ದೊಡ್ಡಭಾಗ್ಯವು ನಿನ್ನದಲ್ಲೊ| ನಿನ್ನ | ಗಡ್ಡಗಳು ಬಿಳುಪಾದವಲ್ಲೊ|ಕಡೆಗೆ|ಮುಡ್ಡಿಯಾಗಿಯೆ ಪೋಪೆಯಲ್ಲೊ | ಇನ್ನು | ಹೆಡ್ಡತನ ಬೇಡ ರಾಮರ ಮಡದಿಯನು ಕಳುಹು|ಅಡ್ಡಬೀಳುವೆನು ಕಾಣೊ|ಅಣ್ಣಾ | ಬಿಟ್ಟು ಕಳುಹೋ ಸೀತೆಯ || —(ವಿ.ಬು)

ಈ ಮಾತನ್ನು ಕೇಳಿದೊಡನೆ ರಾವಣನ ಮನಸ್ಸಿಗೆ ಬಂದ ಕಲ್ಪನೆಯೇನೆಂದರೆ—

ಶ್ಲೋ|| ನಿತ್ಯಮನ್ಯೋನ್ಯಸಂಹೃಷ್ಟಾ ವ್ಯಸನೇಷ್ವಾತತಾಯಿನಃ|ಪ್ರಚ್ಛನ್ನಹೃದಯಾ ಘೋರಾ ಜ್ಞಾತಯಸ್ತು ಭಯಾವಹಾಃ || (ಶ್ರೀ. ರಾ)

ಅ|| ಜ್ಞಾತಿಗಳು ಯಾವಾಗಲೂ ವ್ಯಸನಗಳಲ್ಲಿ ಒಬ್ಬರಿಗೊಬ್ಬರು ಹಿತರಾಗಿರುತ್ತಾರೆ. (ಆದರೆ) ಅವರ ಮನಸ್ಸನ್ನು ತಿಳಿಯಲಾಗುವದಿಲ್ಲ. ಅವರು ಭಯಂಕರರು ಮತ್ತು ಕೇಡೆಣಿಸುವವರು,

ಪ್ರಕೃತ ನನ್ನ ಸಂಬಂಧದಲ್ಲಿ—

ಶ್ಲೋ|| ಅನಾರ್ಯೇಣ ಕೃತಘ್ನೇನ ಸಙ್ಗತಿರ್ಮೇ ನ ಯುಜ್ಯತೇ|ವಿನಾಶಮಧಿಕಾಙ್ಕ್ಷನ್ತಿ ಜ್ಞಾತೀನಾಂ ಜ್ಞಾತಯಃ ಸದಾ|| (ಅ. ರಾ.)

ಅ|| ಅನಾರ್ಯನೂ ಕೃತಘ್ನನೂ ಆದವನೊಡನೆ ನನಗೆ ಸಂಗತಿಯು ಸರಿಯಲ್ಲ. ಜ್ಞಾತಿಗಳು ಜ್ಞಾತಿಗಳಿಗೆ ಯಾವಾಗಲೂ ಕೇಡನ್ನೇ ಬಯಸುತ್ತಾರೆ.

ನಿಜವಾಗಿ ಹಿತಕ್ಕಾಗಲಿ ಅಹಿತಕ್ಕಾಗಲಿ ರಕ್ತಸಂಬಂಧವೇನೂ ಮುಖ್ಯವಲ್ಲ.

ಕಂ|| ಪೆರನಾದೊಡಮೇಂ? ಹಿತಮಾ| ಚರಿಪನೆ ಸದ್ಬಂಧುವಹಿತಬಂಧುವೆ ಬಾಹ್ಯಂ || ಕರಮಹಿತಂ ದೇಹದೊಳೊಗೆ|ದುರುರೋಗಂ ಬನದೊಳುದಿಸಿದೌಷಧಮೆ ಹಿತಂ || —(ನ.ಶ)

ಟಿ|| ಕರಂ—ಚೆನ್ನಾಗಿ. (ಒಗೆದ+) ಉರುರೋಗಂ—ಹೆಚ್ಚಿನ ರೋಗವು.

ಹೀಗೆ ರಾವಣನು ವಿಚಾರಮಾಡುತ್ತಿರುವ ಸಮಯಕ್ಕೆ ಇಂದ್ರಜಿತು ವಿಭೀಷಣನನ್ನು ಕುರಿತು ಆಕ್ಷೇಪಿಸುತ್ತಾನೆ—

ಷ|| ಪಿಡಿದೆನಿಂದ್ರನ; ತೊಡೆದೆನನಲನ; | ಬಡಿದೆ ಶಮನನ; ಜಡಿದೆ ನಿರುತಿಯ;|ಕಡಿದೆ ವರುಣಮರುತ್ಕುಬೇರೇಶಾನಮುಖ್ಯರನು; || ಮೃಡನ ವರಗಳ ಪಡೆದ ಕಡುಗಲಿ|ಯೊಡನೆ ಕೋಡಗಪಡೆಯ ಮನುಜರ|ಸಡಗರವ ನೀನೆಂತು ಪೊಗಳಿದೆ? ಎನುತ ಗರ್ಜಿಸಿದ || —(ರಾ.ಕ.ಕು)

ಜಗತ್ತಿನಲ್ಲಿ ಕೀಳುಜನರು ಮಹಾತ್ಮರನ್ನು ಕ್ಷುದ್ರದೃಷ್ಟಿಯಿಂದ ನೋಡುವದು ಸಹಜವಾಗಿದೆ—

ವೃ॥ ಎರಡುಂ ಪಕ್ಷದೆ ರಾಜಿಸೆಂ; ವಿಮಲಪುಷ್ಪಾಂಗಂ, ಸದಾ ಮಿನರಾಶಿರತಂ, ನೇಸರಿನಂಜಿಸೆಲ್ಲದೆಸೆಗಂ ಪೋಪೆಂ, ದ್ವಿಜಾಧೀಶನಾಂ ॥ ಸರಿಯಲ್ಲಂ ಶಶಿಯೆನ್ನೊಳೆಂದು ಬಕಪುಂ ತಾಂ ಚಂದ್ರನಂ ನಿಂದಿಪಂ। ತಿರೆ ನೀಚಾತ್ಮಕರೇಡಿಪರ್ ಮಹಿತರಂ ಶ್ರೀಚೆಲ್ವನಾರಾಯಣಾ ॥ —(ಶ್ರೀ.ಚೆ.ಶ)

ಟಿ॥ ಪಕ್ಷ— ರೆಕ್ಕೆ, ಶುಕ್ಲಕೃಷ್ಣಪಕ್ಷಗಳು. ಮೀನರಾಶಿ— ಮೀನುಗಳ ಗುಂಪು, ಹನ್ನೆರಡು ರಾಶಿಗಳಲ್ಲಿ ಕೊನೆಯ ರಾಶಿ. ನೇಸರಿಂ+ಅಂಜೆಂ—(ಚಂದ್ರನು ಹೆದರುವನಾದರೂ ಬಕವು) ಸೂರ್ಯನಿಗೆ ಹೆದರುವದಿಲ್ಲ. ದ್ವಿಜ—ಪಕ್ಷಿ, ನಕ್ಷತ್ರ. ಏಡಿಪರ್—ತಿರಸ್ಕರಿಸುವರು.

ಇಂಥ ರಾವಣ ಮತ್ತು ಇಂದ್ರಜಿತ್ತು ಇವರ ನಡುವೆ ವಿಭೀಷಣನಿದ್ದದ್ದೆಂತೆಂದರೆ.—

ತ್ರಿ॥ ದಂತಪಙ್ಕ್ತಿಯ ನಡುವೆ ಎಂತಿರ್ಪುದದು ಜಿಹ್ವೆ। ಅಂತು ದುರ್ಜನರ ಬಳಿಸಿಸಲಿ ಸಜ್ಜನನು। ನಿಂತಿರ್ದ ನೋಡ ಸರ್ವಜ್ಞ ॥ —(ಸ.ಪ)

ಇಂದ್ರಜಿತು ಬೆಂಬಲನಾಗಿ ಎದ್ದದ್ದರಿಂದ ಉತ್ತೇಜಿತನಾಗಿ ರಾವಣನು—

ಷ॥ಘುಡುಘುಡಿಸುತಸುರೇಂದ್ರನನುಜನ।ಬಿಡೆಯದಿಂದೀಕ್ಷಿಸದೆ ಎಲವೋ। ಕಡುಗಲಿಗನೇ ರಾಮನವನೇ ನನ್ನ ಕೊಲುವವನು ॥ ಫಡ! ಫಡೆನುತಾರ್ಭಟಿಸಿ ಖಡುಗವ। ಜಡಿದು ಗದ್ದುಗೆಯಿಳಿದು ಪಾದದ। ತೊಡರು ಝಣರೆನಲೊದ್ದು ಕೆಡಹಿದನವನಿಕಂಪಿಸಲು ॥ —(ರಾ.ಕ.ಕು)

ಇದರ ಮೇಲೆ ಅವನು ಆಡಿ ತೋರಿಸಿದ್ದೇನೆಂದರೆ—

ಆನಂದಭೈರವಿ—ಝಂಪೆ

ಬಾರೊ ಮಗನೇ ಇಂದ್ರಜಿತು ಇವನ ಕೊಂಡೊಯ್ದು। ಊರ ಹೊರಡಿಸು ತಮ್ಮನಾ। ಬೇಗ। ಇವನ। ಯಾರು ಕರೆದರೊ ನಮ್ಮ ಬಳಿಗೆ। ಹೋಗಿ । ಸೇರಿಕೊಳ್ಳಲಿ ಹಗೆಯರೊಳಗೆ। ಬರಲು। ಊರ ಸೇರಿಸ ಬೇಡ ತಿರುಗಿ। ಈಗ। ಸಾರಿ ನೀ ಹೋಗಿ ನಮ್ಮೊಳಗನೆಲ್ಲವ ಹೇಳಿ । ರಾಮದಂಡನು ತಾರೆಲೊ। ತಮ್ಮ। ಬಿಡೆನು ಕಾಣೊ ಸೀತೆಯ ॥ —(ವಿ.ಬು)

ಈ ಮಾತನ್ನು ಕೇಳಿದೊಡನೆ ವಿಭೀಷಣನು—

ಶ್ಲೋ॥ ಉತ್ಪಪಾತ ಸಭಾಮಧ್ಯಾದ್ಗದಾಪಾಣಿರ್ಮಹಾಬಲಃ। ಚತುರ್ಭಿರ್ಮನ್ತ್ರಿಭಿಸ್ಸಾರ್ಧಂ ಗಗನಸ್ಥೋಽಬ್ರವೀದ್ವಚಃ ॥ —(ಅ.ರಾ)

ಅ॥ ಮಹಾಬಲಶಾಲಿಯಾದ ವಿಭೀಷಣನು ಗದಾಪಾಣಿಯಾಗಿ ನಾಲ್ವರು ಮಂತ್ರಿಗಳೊಡನೆ ಸಭಾಮಧ್ಯದಿಂದ ಆಕಾಶಕ್ಕೆ ಹಾರಿ ಹೇಳಿದ್ದೇನೆಂದರೆ—

ಆನಂದಭೈರವಿ—ಝಂಪೆ

ಸೃಷ್ಟಿಯೊಳಗುಳ್ಳ ಕಪಿಕಟಕವೆಲ್ಲವು ಕೂಡಿ। ಕಟ್ಟುವರು ಸೇತುವೆಯನು। ಅಣ್ಣಾ। ಬಳಸಿ । ಸುತ್ತುಮುತ್ತಿಗೆಯ ಹಾಕುವರು। ಲಂಕಾ। ಪಟ್ಟಣಕೆ ಕೇಡ

ಮಾಡುವರು। ನಿನ್ನ । ದುಷ್ಟದೈತ್ಯರಸು ಕೆಡಹುವರು। ಜಗದಿ। ಕಟ್ಟಾಳು ರಾಮ ಚಂದ್ರನ ಕೆಣಕಿ ಬಲ್ಲಿದರು। ಕೆಟ್ಟವರು ಬಹಳ ಮುಂದಿ। ಅಣ್ಣಾ । ಬಿಟ್ಟುಕಳುಹೋ ಸೀತೆಯ ॥ —(ವಿ.ಬು)

ಅದಕ್ಕೆ ರಾವಣನ ಉತ್ತರ—

ಆನಂದಭೈರವಿ—ಝಂಪೆ

ಒಡಹುಟ್ಟಿದವನೆಂಬ ಗರ್ವದಾ ಮದದಿ ಮುಂ। ಗೆಡೆದು ಕಾಲ್ದೆಗೆದೆಯಲ್ಲೊ। ತಮ್ಮಾ। ನಿನ್ನ। ಬಿಡದೆ ನಗೆಗೀಡು ಮಾಡುವೆನು। ನಿನ್ನ। ಕೆಡಹಿ ನಾಲಿಗೆಯ ಕೊಯ್ಯುವೆನು। ನಿನ್ನ। ಮಡದಿಮಕ್ಕಳ ಹೊರಡಿಸುವೆನು। ಮತ್ತೆ। ಕಡೆಯ ಮಾತಂತಿರಲಿ ನೀ ಹೋಗಿ ರಾಮನಾ। ಪಡೆಯನೆಲ್ಲವ ತಾರೆಲೊ। ತಮ್ಮ। ಬಿಡಿಸು ಕಾಣೊ ಸೀತೆಯ ॥ —(ವಿ.ಬು)

ವಿಭೀಷಣನಿಗಾದ ಈ ಕಿರಿಕಿರಿಯನ್ನು ಲಕ್ಷ್ಯದಲ್ಲಿಟ್ಟುಕೊಂಡೇ ಪೀಠಿಕೆಯಲ್ಲಿ "ಪರಿಪರಿಯೊಳು ನಿನ್ನ" ಎಂದು ಮುಂತಾಗಿ ಹೇಳಿದ್ದು.

ಈ ಮಾತನ್ನು ಕೇಳಿ ವಿಭೀಷಣನು ರಾಮನ ಕಡೆಗೆ ಹೊರಟು ತನ್ನಲ್ಲಿ ತಾನು ಯೋಚಿಸುತ್ತಾನೆ—

✓ ಕೀ॥ ರಾವಣನಳಿದೊಡವಿದಾ ದುಷ್ಕಾರ್ಯದ। ದಾವವು ಕುಲವನೆ ಸುಡದಂತೆ ॥ ಸೇವಿಸುತಲಿ ಸತ್ಯಕ್ಷ್ಮಪ ರಾಮನ। ಭಾವವ ಹಿಡಿವೆನು ಬಿಡದಂತೆ ॥

ಈ ಸಂದರ್ಭದಲ್ಲಿ ತೋರುವ ನೀತಿಯೇನೆಂದರೆ—

ಶ್ಲೋ॥ ಯಾಸ್ತಿ ನ್ಯಾಯಪ್ರವೃತ್ತಸ್ಯ ತಿರ್ಯಞ್ಚೋಽಪಿ ಸಹಾಯತಾಮ್ ।
ಅಪನ್ಥಾನಸ್ತು ಗಚ್ಛನ್ತಂ ಸೋದರೋಽಪಿ ವಿಮುಞ್ಚತಿ ॥ —(ಸು)

ಅ॥ ನ್ಯಾಯವಾದ ದಾರಿಯಲ್ಲಿ ಹೋಗುವವನಿಗೆ ಪಶುಪಕ್ಷಿಗಳೂ ಸಹಾಯವಾಗುವವು. ಅಡ್ಡದಾರಿಯಲ್ಲಿ ಹೋಗುವವರನ್ನು ಬೆನ್ನುಬಿದ್ದವರೂ ಬಿಡುವರು.

ಆಕಾಶಮಾರ್ಗದಲ್ಲಿ ಹೋಗುತ್ತ ವಿಭೀಷಣನು ತನ್ನಲ್ಲಿ ತಾನೆ ಯೋಚಿಸುತ್ತಾನೆ –

ಶ್ಲೋ॥ ಅಸತ್ಸಙ್ಗಾದ್ಗುಣಜ್ಞೋಽಪಿ ವಿಷಯಾಸಕ್ತಮಾನಸಃ । ಅಕಸ್ಮಾತ್ಪ್ರಲಯಂ ಯಾತಿ ಗೀತರಕ್ತೋ ಯಥಾ ಮೃಗಃ ॥ —(ಸು)

ಅ॥ ಎಷ್ಟೇ ಗುಣಜ್ಞನಾದರೂ ದುಷ್ಟರ ಸಹಾವಾಸದಿಂದ ಮನಸ್ಸಿಗೆ ವಿಷಯಾಸಕ್ತಿಯನ್ನು ಹಚ್ಚಿಕೊಂಡು—ಸಂಗೀತದ ಆಸಕ್ತಿಯಿಂದ ಮೃಗವು ನಾಶವಾಗುವಂತೆ—ನಿಷ್ಕಾರಣವಾಗಿ ನಾಶವಾಗುತ್ತಾನೆ.

ಇಂಥ ಸಂದರ್ಭದಲ್ಲಿ ಮಾಡಬೇಕಾದ್ದೇನೆಂದರೆ—

ಶ್ಲೋ॥ ಚಕ್ಷುಃಪೂತಂ ನ್ಯಸೇತ್ಪಾದಂ ವಸ್ತ್ರಪೂತಂ ಪಿಬೇಜ್ಜಲಮ್ ।
ಸತ್ಯಪೂತಾಂ ವದೇದ್ವಾಣೀಂ ಮನಃಪೂತಂ ಸಮಾಚರೇತ್ ॥ —(ಸು)

ಅ॥ ಕಣ್ಣಿಂದ ನೋಡಿ ಶುದ್ಧವಾದ ಕಡೆ ಕಾಲಿಡಬೇಕು; ಬಟ್ಟೆಯಿಂದ ಶೋಧಿಸಿದ ನೀರನ್ನು ಕುಡಿಯಬೇಕು; ಸತ್ಯದಿಂದ ಪರಿಶುದ್ಧವಾದ ಮಾತನ್ನು ಆಡಬೇಕು; ಮನಸ್ಸಿಗೆ ಯೋಗ್ಯವಾಗಿ ಕಂಡದ್ದನ್ನು ನಡೆಯಬೇಕು.

ಹೀಗೆ ವಿಚಾರಮಾಡಿ ಶ್ರೀರಾಮನ ಬಿಡಾರಕ್ಕೆ ಬಂದು ಆಕಾಶದಲ್ಲಿಯೇ ನಿಂತು ಬೇಡುತ್ತಾನೆ—

ಕಲ್ಯಾಣಿ—ಝಂಪೆ

ನಿನ್ನನಾಶ್ರಯಿಸುವೆ ನಿಗಮಗೋಚರ ನಿತ್ಯ। ಬೆನ್ನ ಬಿಡದೇ ಕಾಯೊ ಮನದಿಷ್ಟವೀಯೊ ॥ ಪ ॥ ಕುಂದಣದ ಆಶ್ರಯ ನವರತ್ನಗಳಿಗೆಲ್ಲ। ಚಂದಿರನ ಆಶ್ರಯ ಚಕೋರಗೆ ॥ ಕಂದರ್ಪನಾಶ್ರಯ ವಸಂತಕಾಲಕ್ಕೆ। ಗೋವಿಂದನಾಶ್ರಯವು ಭವಭೀತಜನಕೆ ॥ ೧ ॥ ಹಣ್ಣುಳ್ಳ ಮರಗಳು ಪಕ್ಷಿಗಳಿಗಾಶ್ರಯ। ಪುಣ್ಯನದಿಗಳು ಋಷೀಶ್ವರರಾಶ್ರಯವು ॥ ಕಣ್ಣಿಲ್ಲದಾತನಿಗೆ ಕೈಗೋಲೆ ಆಶ್ರಯವು। ತನ್ನ ಸುಖವಿಚ್ಛಿಪಗೆ ನಿನ್ನ ಆಶ್ರಯವು ॥ ೨ ॥ ಪತಿವ್ರತೆಯರಿಗೆ ಪತಿಯೊಂದೆ ಆಶ್ರಯವು। ಯತಿಗಳಿಗೆ ಶ್ರುತಿಸಿದ್ಧಪ್ರಣವದಾಶ್ರಯವು ॥ ಮತಿಯುಕ್ತನಿಗೆ ನಿನ್ನ ಸ್ತುತಿಗಳೇ ಆಶ್ರಯವು। ಹಿತತಮವು ಪುರಂದರ ವಿಠಲನಾಶ್ರಯವು ॥ —(ದಾ)

ಆಗ ನೀನು ಯಾರೆಂದು ಕಾವಲುಗಾರರು ಕೇಳಿದ್ದಕ್ಕೆ ವಿಭೀಷಣನ ಉತ್ತರ—

ಶ್ಲೋ॥ ಪೌಲಸ್ತ್ಯಮಗ್ರಜನುಷಂ ಪರುಷಂ ವದನ್ತಮ್ । ಸನ್ತ್ಯಜ್ಯ ಬಾನ್ಧವಜನಂ ಚ ವಿಭೀಷಣೋಽಹಮ್ ॥ ರಾಮಂ ವಿರಾಮಮಿಹ ವಿದ್ವಿಷತಾ- ಮವಾಪ। ಮಾಪನ್ನದೈನ್ಯಹರಣಂ ಶರಣಂ ಮಮೇತಿ ॥ —(ರಾ.ಚಂ)

ಅ॥ ನಾನು ವಿಭೀಷಣನು; ಪುಲಸ್ತ್ಯನ ಮಗನಾಗಿ ಕ್ರೂರವಾದ ಮಾತಾಡಿದಂಥ ಅಣ್ಣನನ್ನೂ ಇತರ ಬಾಂಧವರನ್ನೂ ಬಿಟ್ಟು ಶತ್ರುಸಂಹಾರಕನಾದಂಥ ಮತ್ತು ಶರಣಾಗತರ ದುರ್ಗತಿಯನ್ನು ಕಳೆಯುವಂಥ ರಾಮನನ್ನೇ ನನಗೆ ಗತಿಯೆಂದು ಬಂದಿದ್ದೇನೆ.

ಆಗ ಕಾವಲಿಗರೆಲ್ಲ ಸೇರಿ—

✓ದಿಂ॥ ಇವನು ನಮ್ಮೊಳಹೊಕ್ಕಿರಿವನೆಮ್ಮನೆಲ್ಲ । ಇವನು ಸೋದರಪಕ್ಷವನು ಬಿಡುವದಿಲ್ಲ ॥ ಇವನನೀಗಳೊಕ್ಕಂದಿಕ್ಕೆ ಯೋಗ್ಯವೆಂದು । ಜವದಿ ಕೈಗೈದರ್ ಕಪಿಗಳೆಲ್ಲವಂದು ॥

ಆಗ ಹನುಮಂತನು ಹೇಳುತ್ತಾನೆ—

✓ಕೀ॥ ಹರಿಪದಭಕ್ತನಿವನು ರಾಕ್ಷಸರೊಳು। ದುರುಳನಲ್ಲ ನೀವರಿಯಿರಿದ ॥ ಶರಣೆಂದವನಿಗೆ ಕೈದೋರುವದಿದು। ಸರಿಯೇ ಬಿಡಿ, ಬಿಡಿ ಕೊಲ್ಲುವದ ॥

ಆಗ ರಾಮನು ಆ ಗದ್ದಲವನ್ನು ನೋಡಿ ಈ ವಿಷಯದಲ್ಲೇನು ಮಾಡಬೇಕೆಂದದ್ದಕ್ಕೆ—

✓ಸಾ॥ ಹಿಡಿದು ಕೊಲ್ಲುವದೆ ಸರಿಯೆಂದೊಡನೆಯೆ। ನುಡಿಯಿತು ಕಪಿಗಳ ಭಾವ ॥ ಅಡಿಗೆರಗಿದವನ ಪೊರೆಯಬೇಕೆನುತ। ನುಡಿದನಾಗ ಸುಗ್ರೀವ ॥

ಈ ಮಾತಿಗೆ ಸಂತುಷ್ಟನಾಗಿ ರಾಮನು ಲಕ್ಷ್ಮಣನಿಗೆ ಹೇಳುತ್ತಾನೆ—

ಶ್ಲೋ॥ ಅನಧೀತ್ಯ ಚ ಶಾಸ್ತ್ರಾಣಿ ವೃದ್ಧಾನನುಪಸೇವ್ಯ ಚ । ನ ಶಕ್ಯಮೀದೃಶಂ ವಕ್ತುಂ ಯದುವಾಚ ಹರೀಶ್ವರಃ ॥ —(ಶ್ರೀ.ರಾ)

ಅ|| ಶಾಸ್ತ್ರಗಳನ್ನು ಓದದೆ ಹಿರಿಯರನ್ನು ಸೇವಿಸದೆ ಸುಗ್ರೀವನು ಹೇಳಿದಂತೆ ಹೇಳುವದಕ್ಕೆ ಶಕ್ಯವಿಲ್ಲ.

ಒಂದು ಪಕ್ಷ ವಿಭೀಷಣನಲ್ಲಿ ದೋಷಗಳಿರಬಹುದಾದರೂ—

ಶ್ಲೋ|| ದೋಷಾಕರೋಽಪಿ ಕುಟಿಲೋಽಪಿ ಕಲಙ್ಕಿತೋಽಪಿ। ಮಿತ್ರಾವಸಾನಸಮಯೇ ವಿಹಿತೋದಯೋಽಪಿ ॥ ಚನ್ದ್ರಸ್ತಥಾಪಿ ಹರವಲ್ಲಭತಾಮುಪೈತಿ। ನೈವಾಶ್ರಿತೇಷು ಗುಣದೋಷವಿಚಾರಣಾ ಸ್ಯಾತ್ ॥ —(ಸು)

ಅ|| ಚಂದ್ರನು ದೋಷದಿಂದ ಕೂಡಿದ್ದರೂ (ರಾತ್ರಿಗೆ ಕಾರಣನಾಗಿದ್ದರೂ) ವಕ್ರನಾಗಿದ್ದರೂ ಕಪ್ಪುಚುಕ್ಕೆಯಿಂದ ಕೂಡಿದ್ದರೂ ಗೆಳೆಯನ ನಾಶಕಾಲದಲ್ಲಿ (ಸೂರ್ಯನು ಮುಳುಗಿದ ಕಾಲದಲ್ಲಿ) ಹುಟ್ಟುವವನಾದರೂ ಈಶ್ವರನ ಆಶ್ರಯವನ್ನು ಪಡೆದನು. ಆಶ್ರಿತರಲ್ಲಿ ಗುಣದೋಷವಿಚಾರಣೆ ಇರುವದಿಲ್ಲ.

ದೋಷದ ಕಡೆಗೆ ಲಕ್ಷ್ಯವಿಟ್ಟು ಶರಣನನ್ನು ಬಿಟ್ಟರೆ ತನಗೆ ಅಪಕೀರ್ತಿ ಬಂದೀತೆಂದು ರಾಮನು ಯೋಚಿಸುತ್ತಾನೆ—

ಶ್ಲೋ|| ಅಭಯಾಗತೋ ಮದಪಯಾತಿ ಚೇನ್ಮದಾ। ರಘವೋ ಭವನ್ತಿ ಲಘವೋ ನ ಕಿಂ ಸಖೇ ॥ ಅನುಜೋಽಯಮಸ್ತು ತನುಜೋಽಥವಾ ರಿಪೋಃ। ಕರುಣಾಪದಂ ಹಿ ಶರಣಾಗತೋ ಜನಃ ॥ —(ರಾ.ಚಂ)

ಅ|| ಹೆ, ಸುಗ್ರೀವ, ಅಭಯವನ್ನು ಬಯಸಿ ಬಂದವನು ನನ್ನ ಕಡೆಯಿಂದ ಹಿಂದಿರುಗಿ ಹೋದರೆ ರಘುಗಳು ಲಘುಗಳಾಗುವದಿಲ್ಲವೆ? ಇವನು ಶತ್ರುವಿನ ತಮ್ಮನಾದರೂ ಆಗಲಿ, ಮಗನಾದರೂ ಆಗಲಿ; ಶರಣಾಗತರಾದವರು ನಮ್ಮ ಕರುಣೆಗೆ ಪಾತ್ರರು.

ತಾನು ಈಗ ಅಭಯಪ್ರದಾತನಾಗದಿದ್ದರೆ ತನ್ನ ಅರಸುತನವೇ ವ್ಯರ್ಥವೆನ್ನುತ್ತಾನೆ—

ಷ|| ಧುರದೊಳಿದಿರಾದವರ ನಿರಿವುದು,। ಶರಣುಹೊಕ್ಕರ ಸಲಹುವದು, ಪತಿ। ಕರಿಸುವದು ಧರ್ಮವನಧರ್ಮವನುಳಿವುದವನಿಯಲಿ, ॥ ಅರಸುಗಳಿಗಿದು ನಯವಿನಿತು ಗೋ। ಚರಿಸದಿರೆ ಹಗರಣದ ನಾಟಕ। ದರಸುತನವೀ ಜಗದೊಳೆಂದನು ನಗುತ ನರನಾಥ ॥ —(ತೊ.ರಾ)

ಇದಲ್ಲದೆ ನನ್ನ ವ್ರತವೇನೆಂದರೆ—

ಶ್ಲೋ|| ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ ॥ ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಂ ಮಮ ॥ —(ವ.ರಾ)

ಅ|| ಒಮ್ಮೆ ನಿನ್ನವನೆಂದು ಶರಣುಬಂದರೆ ಸಾಕು; ಸಮಸ್ತಪ್ರಾಣಿಗಳಿಗೂ ಅಭಯವನ್ನು ಕೊಡುವದೇ ನನ್ನ ವ್ರತ.

ಆಗ ಏನಾಯಿತೆಂದರೆ—

ದಿಂ|| ರಾಮನಾಣತಿಯಿಂ ವಿಭೀಷಣನನಾಗ। ಪ್ರೇಮದಿಂ ಸುಗ್ರೀವನೇ ಕರೆದು ಬೇಗ ॥ ರಾಮಪಾದಕ್ಕೊಪ್ಪಿಸಲು ಧನ್ಯನಾಗಿ। ರಾಮನೇ ಗತಿಯೆಂದಿರ್ದನವನು ಬಾಗಿ ॥

ಆಗ ಅವನು ರಾಮನನ್ನು ಸ್ತೋತ್ರಮಾಡಿದ್ದು—

ಕಲ್ಯಾಣಿ—ಅಟತಾಳ

ರಾಮಾ ರಕ್ಷಿಸೆನ್ನ । ಕಾರುಣ್ಯದಿ ॥ ಪ ॥ ತಾಮಸವೇತಕ್ಕೆ । ಕಾಮಸನ್ನಿಭ ನೀನು । ನಾ ಮರೆಹೊಕ್ಕೆನು । ಪ್ರೇಮದಿ ನಿಜಪಾಣಿ ॥ ತಾಮರಸವನೆನ್ನ ಶಿರದೊಳಗಿರಿಸುತ । ಕಾಮಿತಾರ್ಥಪ ನೀನು ಕಣ್ಣಿಂದಲಿ ನೋಡು ॥ ಅ.ಪ ॥ ವಂದಿಪೆ ತವ ಪಾದದ್ವಂದ್ವಗಳಿಗೆ ಇನ್ನು । ಸಂದೇಹವಿಲ್ಲದೆ ಸ್ವಾಮಿ ನೀ ಸಲಹೆನ್ನ ॥ ತಂದೆತಾಯಿ ನೀನೆ ಎಂದು ನಂಬಿದೆನಯ್ಯ । ಕಂದನಂತೆ ಕಾಯೊ ಕರುಣಿಗಳರಸನೆ ॥ ೧ ॥ ಆಪದ್ಬಾಂಧವ ರಘುಭೂಪಾಲಕ ಎನ್ನ । ತಾಪತ್ರಯದಿ ಮನ ಮಲಿನಾವಸ್ಥೆಯ ಪೊಂದಿ ॥ ಶ್ರೀಪತಿ ನಿನ್ನನು ಸ್ಮರಿಸದೆ ಇರುತಿಹ । ಪಾಪಾತ್ಮಕನ ಸಂತಾಪ ನಿವಾರಿಸಿ ॥ ೨ ॥ ಆರಿಗೊಪರಿದರೂ ದೂರಕೇಳುವರಿಲ್ಲ । ಪಾರುಗಾಣುವ ದಾರಿದೋರಲಿಲ್ಲ ॥ ನಾರಸಿಂಹದಾಸಪೋಷಕನಿನ್ನನು । ಸೇರಿದೆ ಸತ್ಕೃಪೆದೋರಿ ರಕ್ಷಿಸೀಗ ॥ ೩ ॥ —(ದಾ)

ಆಗ ರಾಮಚಂದ್ರನು ಕೊಟ್ಟ ಅಭಯ—

ಶ್ಲೋ॥ ಅಹಂ ಹತ್ವಾ ದಶಗ್ರೀವಂ ಸಪ್ರಹಸ್ತಂ ಸಬಾನ್ಧವಮ್ । ರಾಜಾನಂ ತ್ವಾಂ ಕರಿಷ್ಯಾಮಿ ಸತ್ಯಮೇತದ್ಬ್ರವೀಮಿ ತೇ ॥ —(ಶ್ರೀ.ರಾ)

ಅ॥ ನಾನು ರಾವಣನನ್ನೂ ಪ್ರಹಸ್ತನನ್ನೂ ಅವರ ಬಾಂಧವರನ್ನೂ ಕೊಂದು ನಿನ್ನನ್ನು ರಾಜನನ್ನಾಗಿ ಮಾಡುತ್ತೇನೆ. ಇದು ನಿಜವಾದ ಮಾತು.

ಆದಕ್ಕೆ ಉತ್ತರವಾಗಿ ವಿಭೀಷಣನ ಪ್ರತಿಜ್ಞೆ—

ಶ್ಲೋ॥ ರಾಕ್ಷಸಾನಾಂ ವಧೇ ಸಾಹ್ಯಂ ಲಙ್ಕಾಯಾಶ್ಚ ಪ್ರಧರ್ಷಣೇ । ಕರಿಷ್ಯಾಮಿ ಯಥಾ ಪ್ರಾಣಂ ಪ್ರವೇಕ್ಷ್ಯಾಮಿ ಚ ವಾಹಿನೀಮ್ ॥ —(ಶ್ರೀ.ರಾ)

ಅ॥ ನಾನು ಸೇನೆಗೆ ಸೇರಿ ಲಂಕೆಯನ್ನು ಹಿಡಿಯುವುದಕ್ಕೂ ರಾಕ್ಷಸರನ್ನು ಗೆಲ್ಲುವುದಕ್ಕೂ ನನ್ನ ಕೈಲಾದಷ್ಟು ಸಹಾಯವನ್ನು ಮಾಡುತ್ತೇನೆ.

ಇದರ ಪರಿಣಾಮವೇನಾಯಿತೆಂದರೆ—

✓ ಕೀ॥ ಅನುಜನಿನಬ್ಧಿಯ ಜಲದಿಂದ ವಿಭೀ । ಷಣನಿಗೆ ಲಂಕೇಶತ್ವವನು ॥ ಇನಶಶಿಯಿರ್ಪನ್ನೆಗಮಿರೆ ಗೆಯ್ಸಿದ । ನಿನಕುಲೇಶನಭಿಷೇಕವನು ॥

ಈ ಸಂಗತಿಯನ್ನು ಮನಸ್ಸಿನಲ್ಲಿಟ್ಟು ಕವಿಯು ಶ್ರೀರಾಮನ ದಾಸತ್ವವನ್ನು ವರ್ಣಿಸಿರುವದೇನೆಂದರೆ—

ಶ್ಲೋ॥ ಕುತಃ ಶ್ರಿಯೈ ತ್ವಂ ಯತಸೇ ನಿಕಾಮ । ಶ್ರೀರಾಮದಾಸೋ ಭವ ಮಾನವ ತ್ವಮ್ ॥ ಶ್ರೀರಾಮದಾಸಸ್ಯ ಪರಾಙ್ಮುಖಸ್ಯ । ಸದಾನಪಾಯಿನ್ಯುಪತಿಷ್ಠತೇ ಶ್ರೀಃ ॥ —(ಸು.ಶಾ)

ಅ|| ಎಲೊ ಮನುಷ್ಯನೆ, ನೀನು ಹಣಕ್ಕಾಗಿ ಏಕೆ ಒದ್ದಾಡುತ್ತಿ? ಶ್ರೀರಾಮನ ದಾಸನಾಗಿ ಬಿಡು; ಸಾಕು. (೧) ಶ್ರೀರಾಮದಾಸ ಎಂಬ ಮಾತನ್ನು ಹಿಮ್ಮುಖವಾಗಿ ಓದಿದರೆ ಯಾವಾಗಲೂ ಸಂಪತ್ತು ಇದ್ದೇ ಇರುತ್ತದೆ. (ಹಿಮ್ಮುಖವಾಗಿ ಓದಿದರೆ 'ಸದಾಮರಾಶ್ರೀ' ಎಂದಾಗುತ್ತದೆ. ಸದಾ+ಅಮರಾ+ಶ್ರೀ ಎಂದರೆ ಸಂಪತ್ತು ಯಾವಾಗಲೂ ಕೊರತೆಯಾಗದೆ ಇರುವದೆಂದರ್ಥ.) (೨) ಅಥವಾ ಶಿವಾಜಿಯು ತನಗೆ ದಾನಮಾಡಿದ ರಾಜ್ಯವನ್ನು ತಿರುಗಿ ಕೊಟ್ಟ ಶ್ರೀರಾಮದಾಸರೆಂಬ ಸಾಧುಗಳಿಗೆ ಐಶ್ವರ್ಯವು ಬೆನ್ನು ಹತ್ತಿಯೇ ಇದ್ದದ್ದು ಪ್ರಸಿದ್ಧವಾಗಿದೆ.

ಐಶ್ವರ್ಯದ ಆಗುಹೋಗುಗಳ ವಿಷಯದಲ್ಲಿ ನೀತಿಶಾಸ್ತ್ರಕಾರರು ಹೇಳಿರುವದೇನೆಂದರೆ—

ಶ್ಲೋ|| ಸಮಾಯಾತಿ ಯದಾ ಲಕ್ಷ್ಮೀರ್ನಾರಿಕೇಲಫಲಾಂಬುವತ್ ।
ವಿನಿರ್ಯಾತಿ ಯದಾ ಲಕ್ಷ್ಮೀರ್ಗಜಭುಕ್ತಕಪಿತ್ಥವತ್ ॥ —(ಸು)

ಅ|| ಐಶ್ವರ್ಯವು ಬರುವಾಗ ತೆಂಗಿನಕಾಯಿಗೆ ನೀರು ಬಂದಂತೆ. ಐಶ್ವರ್ಯವು ಹೋಗುವಾಗ ಆನೆ ತಿಂದ ಬೇಲದ ಹಣ್ಣಿನಂತೆ.

ರಾಮನು ವಿಭೀಷಣನಿಗೆ ತೋರಿಸಿದ ದಯೆಯನ್ನು ನೋಡಿ ಕಪಿಗಳು ತಮ್ಮದೊಂದು ಸಂದೇಹವನ್ನು ಮುಂದಿಡುತ್ತಾರೆ—

ಷ|| ರಾವಣನ ತಮ್ಮನಿಗೆ ಲಂಕೆಯ । ನೀವು ಕೊಟ್ಟಿರಿ ದೇವ, ಬಳಿಕಾ । ರಾವಣನು ಜಾನಕಿಯನೊಪ್ಪಿಸಿ ನಿಮ್ಮ ಪದಯುಗವ ॥ ಭಾವಶುದ್ಧಿಯಲೀಗ ಕಂಡರೆ । ನೀವದಾವುದ ನೀವಿರೆಂದಾ । ಪಾವಮಾನುಜರವಿಜರುರೆ ಬಿನ್ನಹವ ಮಾಡಿದರು ॥ —(ತೊ.ರಾ)

ಆದಕ್ಕೆ ರಾಮನ ಉತ್ತರ—

ಷ|| ಕೇಳು ಜಾಂಬವ, ಕೇಳು ಲಕ್ಷ್ಮಣ, । ಕೇಳಿ ನಳನೀಲಾದಿಸುಭಟರೆ, । ಕೇಳಿರೈ ದಶಮುಖನು ತಾನೇ ತನ್ನ ಪದಯುಗಕೆ ॥ ಬಾಲೆಯನು ತಂದಿತ್ತನಾದರೆ । ಕೋಳುಗೊಡುವೆನಯೋಧಿನಗರವ । ನಾಳುವವೊಲಾ ಕಮಲಜನ ಕಲ್ಪಾಂತಪರಿಯಂತ ॥ —(ತೊ.ರಾ)

ಟಿ|| ಕೋಳುಗೂಡುವೆನು— ಸೂರೆಗೊಡುತ್ತೇನೆ. ಅಯೋಧಿನಗರವ— ಅಯೋಧ್ಯಾಪಟ್ಟಣವನ್ನು.

ಆಗ ಕಪಿಗಳೆಲ್ಲರೂ ವಿಭೀಷಣನನ್ನು ಹೊಗಳುತ್ತಾರೆ—

ಶ್ಲೋ|| ವಿಭೀಷಣೋ ರಾಕ್ಷಸವಂಶದೀಪಕಃ । ಸಭಾಜನೋದ್ದಾಮ ದಶಾಸ್ಯದೂಷಕಃ ॥ ಸರ್ವೋತ್ತಮಸ್ನೇಹಭರೇಣ ಪೂರಿತ । ಶ್ಚಿರಂ ಜ್ವಲತ್ಯತ್ರ ಪರಂ ನಿರಞ್ಜನಃ ॥ —(ಸು.ಲಾ.)

ಅ|| ವಿಭೀಷಣನು (ಸ+ಭಾಜನ) ಉತ್ತಮವಾದ ಪಾತ್ರೆಯಲ್ಲಿ(ಉದ್ದಾಮ+ದಶಾ) ದಪ್ಪವಾದ ಬತ್ತಿಯ(ಆಸ್ಯ+ದೂಷಕಃ)ಮುಖವನ್ನು ಕಪ್ಪಗೆ ಮಾಡುವಂಥ(ಸರ್ವೋತ್ತಮಸ್ನೇಹಭರೇಣ ಪೂರಿತಃ) ಒಳ್ಳೆಯದಾದ ಎಣ್ಣೆಯಿಂದ ತುಂಬಿರುವಂಥ ರಾಕ್ಷಸಕುಲದ ದೀಪದಂತೆ

ಇದ್ದಾನೆ, ಹೇಗೆಂದರೆ— (ಸಭಾಜನ + ಉದ್ದಾಮಂದಶಾಸ್ಯ+ದೂಷಕಃ) ಸಭಾಜನರಲ್ಲಿ ಉದ್ಧತನಾಗಿ ನಡೆಯುವ ರಾವಣನನ್ನು ದೂಷಣೆ ಮಾಡುವವನಾಗಿ ಸರ್ವೋತ್ತಮನಾದ ರಾಮನಲ್ಲಿ (ಸ್ನೇಹ) ಪ್ರೇಮಾತಿಶಯದಿಂದ ಕೂಡಿದವನಾಗಿ (ಪರಂ ನಿರಂಜನಃ)ಕೇವಲ ವಿಷಯವಾಸನಾ ರಹಿತನಾಗಿ ಯಾವಾಗಲೂ ಶೋಭಿಸುತ್ತಿದ್ದಾನೆ.

ಈ ಸಮಾರಂಭದಿಂದ ಸಂತುಷ್ಟನಾದ ವಿಭೀಷಣನು ಶ್ರೀರಾಮಚಂದ್ರನನ್ನು ಸ್ತೋತ್ರಮಾಡುತ್ತಾನೆ—

✓ ಚೂ॥ ವಂದಿಸುವೆ ವಂದಿಸುವೆ ರಾಮರಾಜ, ಚಂದವಾಗಿಹೆ ನೀನು ಜಗದಿ ಸುರಭೂಜ,ಎಂದೆಂದಿಗೂ ಬೆಳಗುತಿಹುದು ನಿನ್ನೋಜ,ಕುಂದ ಕಳೆವುದು ನಿನ್ನ ಪದ ಯುಗಾಂಭೋಜ, ಅಂದದಿಂದಪ್ಪುವದು ನಿನ್ನ ನಾಸಿರಿಯು ಪಕ್ಕೋಜ, ಸಂದೇಹ ಗತ್ತಲೆಯ ಕಳೆಯುವದು ನಿನ್ನ ಬಲು ತೇಜ। ಮೂರುಲೋಕಗಳಿಗೂ ನೀನೆ ಗುರು ದೇವ, ದಾರಿತೋರಿಸುವಾ ಗೃಹಸ್ಥಸ್ವಭಾವ, ಸಾರಿ ಶರಣೆಂದವರನೆಲ್ಲರನು ಕಾವ, ದೂರುಗಳ ಹೋಗಲಾಡಿಸುವ ಪ್ರಭಾವ, ದೂರಗೆಯ್ಯುದು ಮಾಯೆ ಯನು ನಿನ್ನ ಪದರಾಜೀವ, ಭೂರಿಪಾಪಾಟವಿಗೆ ನೀನು ವನದಾವ, ನೀರಗೂಡಿಸು ವೆ ನೀ ನಂಬಿದರ ನೋವ, ಕೇಳಿದುದ ನೀವ। ಮಾಯೆಯಿಂ ನೀಂ ಮನುಜ ನಾಗಿ ಕಾಣಿಸುವೆ, ಕಾಯಾತ್ಮಬುದ್ಧಿಯನು ಹೋಗಲಾಡಿಸುವೆ, ಜಾಯಾದಿ ಗಳ ಪಾಶಗಳನು ಸಡಿಲಿಸುವೆ, ತಾಯಿತಂದೆಯು ತೆರದಿ ಜಗವ ರಕ್ಷಿಸುವೆ, ತೋಯಜಾಕ್ಷನೆ ನಿನ್ನ ನಂಬಿ ವಂದಿಸುವೆ, ಬಾಯಬಿಟ್ಟೊರಲುತ್ತ ಕೈಯ ಜೋಡಿಸುವೆ, ಆಯವರಿತೆನ್ನ ಪೊರೆಯೆನ್ನುತೀಕ್ಷಿಸುವೆ, ನೋಯಲಾರದೆ ಭವದಿ ಬಂದು ಪ್ರಾರ್ಥಿಸುವೆ, ಮಾಯಿನೆನ್ನಯ ಮನದ ಗಾಯವನು ಪ್ರಭುವೇ, ವಿಭುವೆ ॥

ವಿಭೀಷಣನು ಈ ರೀತಿಯಾಗಿ ರಾಮನಿಗೆ ಶರಣುಹೊಕ್ಕು ಪಡೆದ ಧನ್ಯತೆಯನ್ನು ಲಕ್ಷ್ಯದಲ್ಲಿಟ್ಟುಕೊಂಡೇ ಕೀರ್ತನಾರಂಭದಲ್ಲಿ ಭಾಗವತಶಿರೋಮಣಿಗಳು 'ತೊರೆಯೋ ದುಸ್ಸಂಗವ' ಎಂದು ಉಪದೇಶಮಾಡಿದ್ದು.

## ಭಜನಾವಲಿ

(೧) ತ್ವಂ ಮಾಂ ಪಾಲಯ ಸೀತಾರಾಮ

(೨) ರಾವಣಮರ್ದನ, ರಾಮ, ರಾಘವ, ವಾಲೀಮರ್ದನ, ರಾಮ

(೩) ಕೋದಂಡಭಂಜನ, ಸೀತಾರಾಮ, ವಾಲೀತಾಡನ, ರಾಜಾರಾಮ

(೪) ರಾಮ, ಸೀತಾರಾಮ, ಸೀತಾರಾಮ, ಸೀತಾರಾಮ

ರಾಮ, ಜಯಜಯರಾಮ ಜಯಜಯರಾಮ, ಜಯಜಯರಾಮ

(೫) ವಂದೇ ರಘುವೀರಂ ಸೀತಾಕಾಂತಂ ರಣಧೀರಂ

**ಜಯಜಯ ರಘುವೀರ ಸಮರ್ಥ**



# ರಾವಣನ ಪರಾಭವ

## ಪೀಠಿಕೆ—ಪರದಾರಲಂಪಟತ್ವ

ಹಿಂದುಸ್ಥಾನಿಕಾಪಿ—ಅಟತಾಳ

ಪರಸತಿ ಪರಧನ | ವೆರಡನು ಬಯಸಲು ॥ ಪಿರಿದಹ ಮೃತ್ಯುವು । ಬರುವದು ತಪ್ಪದು ॥ ಪ ॥ ಸಣ್ಣಸಣ್ಣವರೆ । ತಿಣ್ಣದ ಕೆಲಸವ ॥ ಮುನ್ನ ಮಾಡಿ ಕೇ| ಡನ್ನು ತರುವರು ॥ ೧ ॥ ಜಯದಿಂದೊಮ್ಮೆ ಸಿ । ರ್ಭಯವು ತೋರಿದರೂ ॥ ಭಯವೆನೆ ಕೊನೆಗಪ । ಜಯವೇ ಸಿದ್ಧ ॥ ೨ ॥ ದೈವಕೆ ಶರಣೆಂಬ । ಭಾವವ ತಡೆವುದು ॥ ಜೀವಕೆ ತಪ್ಪದೆ । ಸಾವನೆ ಕೊಡುವದು ॥ ೩ ॥

ಲೋಕದಲ್ಲಿ ಸ್ತ್ರೀಸಂಪತ್ತೂ ಧನಸಂಪತ್ತೂ ಇರುವವರು ಕೂಡ ದುಃಖಿಗಳಾಗಿರುವದನ್ನು ನೋಡಿದರೆ ಸುಖವು ಸ್ತ್ರೀಯರನ್ನು ಅಥವಾ ಧನವನ್ನವಲಂಬಿಸಿಕೊಂಡಿಲ್ಲವೆಂದು ಸ್ಪಷ್ಟವಾಗುತ್ತಿದ್ದರೂ ಜನರು ಧರ್ಮಸಮ್ಮತವಾದ ಸ್ವಸ್ತ್ರೀಸಂಪತ್ತಿನಲ್ಲಿಯೂ ಸ್ವಧನಸಂಪತ್ತಿನಲ್ಲಿಯೂ ತೃಪ್ತರಾಗದೆ ಪರಧನಪರದಾರಲಂಪಟರಾಗುವದು ಶೋಚನೀಯವಾಗಿದೆ. ಬಯಕೆಯೆಂಬುವದೇ ದುಃಖಮೂಲವಾದ್ದರಿಂದ ಬಿಡತಕ್ಕದ್ದೆಂದು ಕೆಲವು ವೇಳೆ ಹೇಳಿದರೂ ಸ್ವಸ್ತ್ರೀಯ ಮತ್ತು ಸ್ವಧನದ ಬಯಕೆಯೇನೂ ಕೆಟ್ಟದ್ದಲ್ಲ—

ಶ್ಲೋ॥ ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ

—(ಭ.ಗೀ)

ಅ॥ ಹೆ, ಅರ್ಜುನ, ಪ್ರಾಣಿಗಳಿಗೆ ಧರ್ಮಕ್ಕೆ ಅವಿರುದ್ಧವಾಗಿ ಬರುವ ಬಯಕೆಯನ್ನು ನನ್ನ ಸ್ವರೂಪವೆಂದು ತಿಳಿ.

ಇದನ್ನು ಮೀರಿ—

ಸೌರಾಷ್ಟ್ರ—ಅಟತಾಳ

ಪರಧನ ಪರಪತ್ನಿಗಳಿಗಳುಪಲು ಸಿರಿ । ತಿರುಗುವಳೆಚ್ಚರಿಕೆ । ಬರುವ ಹಾನಿ ವೃದ್ಧಿ ತನ್ನ ಕಾಲ ವಿಚಾರ । ಲರಿಯದು ಎಚ್ಚರಿಕೆ ॥ ೧ ॥ —(ದಾ)

ಶ್ಲೋ॥ ಪರಸ್ವಾನಾಂ ಚ ಹರಣಂ ಪರದಾರಾಭಿಮರ್ಶನಮ್ । ಸುಹೃದಾಮತಿಶಙ್ಕಾ ಚ ತ್ರಯೋ ದೋಷಾಃ ಕ್ಷಯಾವಹಾಃ ॥ —(ಶ್ರೀ.ರಾ)

ಅ॥ ಪರರ ಹಣವನ್ನು ಅಪಹರಿಸುವದು, ಪರರ ಹೆಂಡಿರ ಮೇಲೆ ಕಣ್ಣು ಹಾಕುವದು, ಗೆಳೆಯರ ಮೇಲೆ ಬಹಳ ಸಂಶಯಗೊಳ್ಳುವದು— ಈ ಮೂರು ದೋಷಗಳೂ ನಾಶಕ್ಕೆ ಕಾರಣ.

ಹಣದ ಸ್ವಭಾವವೇನೆಂದರೆ—

ಶ್ಲೋ॥ ಅಕಾಲಮೇಘವದ್ವಿತ್ತಂ ಅಕಸ್ಮಾದೇತಿ ಯಾತಿ ಚ ॥—(ಕ.ಸ.ಸಾ)

ಅ|| ಹಣವು ಅಕಾಲಮೇಘದಂತೆ ಕಾರಣವಿಲ್ಲದೆ ಬರುತ್ತದೆ; ಮತ್ತು ಹೋಗುತ್ತದೆ. ಕಾಮವಿಕಾರವಾದರೊ ಎಂದಿಗೂ ಮುಗಿಯತಕ್ಕದ್ದೇ ಅಲ್ಲ—

ಶ್ಲೋ|| ಅಙ್ಗಂ ಗಲಿತಂ ಪಲಿತಂ ಮುಣ್ಡಮ್ । ದಶನವಿಹೀನಂ ಜಾತಂ ತುಣ್ಡಮ್ || ವೃದ್ಧೋ ಯಾತಿ ಗೃಹೀತ್ವಾ ದಣ್ಡಮ್ । ತದಪಿ ನ ಮುಞ್ಚತ್ಯಾಶಾಪಿಣ್ಡಮ್ || —(ಚ.ಪಂ)

ಅ|| ಮೈ ಸೊರಗಿದೆ; ತಲೆ ನರೆತಿದೆ; ಬಾಯಿ ಹಲ್ಲಿಲ್ಲದ್ದಾಗಿದೆ; ಮುದುಕನಾಗಿ ಕೋಲೂರಿ ಕೊಂಡು ನಡೆಯುತ್ತಾನೆ; ಆದರೂ ಆಶೆಗಳು ಬಿಡುವದಿಲ್ಲ.

ಹೀಗೆ ಇಂದ್ರಿಯಸುಖಾರ್ಥಿಯಾಗುವದು ಹಾನಿಕರವೆಂದು ಒಬ್ಬ ಕವಿಯು ಚಮತ್ಕಾರವಾಗಿ ಹೇಳಿರುವದೇನೆಂದರೆ—

ಶ್ಲೋ|| ತ್ಯಜಾಕ್ಷವಶತಾಂ ತಾತ, ಯಾ ಮಹಾನರ್ಥಕಾರಿಣೀ । ಯಯಾ ವಿನಷ್ಟಸರ್ವಸ್ವಾ ಯುಧಿಷ್ಠಿರನಲಾದಯಃ || —(ಸು.ಲಾ)

ಅ|| ಮಗು, (೧) (ಅಕ್ಷವಶತಾಂ) ಇಂದ್ರಿಯಗಳಿಗೆ ವಶನಾಗುವದನ್ನು ಬಿಡು. ಅದು ಬಹಳ ಕೇಡುಮಾಡುವದು. ಆ ಅಕ್ಷವಶತೆಯಿಂದ (ಜೂಜಾಟಕ್ಕೆ ವಶರಾದ್ದರಿಂದ) ಯುಧಿಷ್ಠಿರ, ನಲ—ಮೊದಲಾದವರು ಸರ್ವಸ್ವವನ್ನೂ ಹಾಳುಮಾಡಿಕೊಂಡರು.

ಇಂದ್ರಿಯಪರವಶರಾಗಿ ಹುಟ್ಟುಸಾವುಗಳಲ್ಲಿ ತೊಳಲುತ್ತಿರುವವರನ್ನು ನೋಡಿ ಕನಿಕರದಿಂದ ಸತ್ಪುರುಷರು ಉಪದೇಶಿಸುವದೇನೆಂದರೆ—

ಸುರುಟಿ—ಝಂಪೆ

ಇನ್ನಾದರೀ ಭವಕೆ ಹೇಸಬಾರದೆ ಮನುಜ । ನಿನ್ನ ಮನಸಿನ ಬಲುಹನೇನೆಂಬೆನಹಹಾ! || ಪ || ಏಳು ಜನ್ಮಗಳ ಯೋನಿಗಳಲ್ಲಿ ಪೊರಮಟ್ಟು । ಏಳಬ್ಧಿಯನಿತು ಮೊಲೆವಾಲನುಂಡು || ಏಳುದ್ವೀಪದ ನೆಲನ ನಿನ್ನ ಸುಡುಗಾಡೆನಿಸಿ । ಏಳು ಕುಲಗಿರಿಗಳನಿತಸ್ಥಿಗಳ ಕೆಡಹಿ || ೧ || ಧರೆಯ ದುರಿತಂಗಳೆಲ್ಲವನು ಕಡೆಗಂಡು ಯಮ । ಪುರದ ಬಾಗಿಲನೆಲ್ಲ ತೆಗೆಸಿಹಾಕಿ || ಮೊರೆವಂತಕನಿಗೆ ಮೂರ್ಛೆಯನಿತ್ತು ದೂರುಗಳ । ನೊರೆವುತಿಹ ಚಿತ್ರಗುಪ್ತರನು ಬೇಸರಿಸಿ || ೨ || ಕೊರೆವಿರಿಪ ಯಮದೂತರಶನಸಿದ್ರೆಯ ಕಿತ್ತು । ಕರವಾಳಕೋಟಿಗಳ ಮೊಂಡಗೊಳಿಸಿ || ನರಕವಿವು ಸಾಲವೆ । ನ್ನೆರಡನಿತು ಬೇಕೆನಿಸಿ || ಗುರುಸಿದ್ಧನಡಿಯ ಮರೆದಿನಿತು ಶ್ರಮೆಬಟ್ಟು || ೩ || —(ಕೈ.ಕ)

ಹುಟ್ಟುಸಾವುಗಳಿಗೆ ಕಾರಣಗಳಾದ ಈ ಕಾಮಲೋಭಾದಿಗಳು ಬಿಡತಕ್ಕದ್ದೆಂಬ ವಿಷಯದಲ್ಲಿ ಸ್ಮೃತಿ ಹೇಳುವದೇನೆಂದರೆ—

ಶ್ಲೋ|| ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ । ಕಾಮಃ ಕ್ರೋಧಸ್ತಥಾ ಲೋಭಸ್ತಸ್ಮಾದೇತತ್ತ್ರಯಂ ತ್ಯಜೇತ್ || —(ಭ.ಗೀ)

ಅ|| ಕಾಮ, ಕ್ರೋಧ, ಲೋಭ—ಇವು ತನ್ನ ನಾಶದ ರೂಪವಾದಂಥ ನರಕದ ಮೂರು ಬಾಗಿಲುಗಳು. ಈ ಮೂರನ್ನು ಬಿಡಬೇಕು.

ಬಯಸಿ ಬಯಸಿ ಪಡೆಯುವ ಧನವಾದರೂ ನೆಲೆಯಾಗಿ ನಿಲ್ಲತಕ್ಕದ್ದಲ್ಲ—

ಕಂ॥ ಸಿರಿಯೊಂದೆಡೆಯೇ ಇಹುದೆಂ। ದರಿವುಳ್ಳವರಾರುಮೆಂದುಮಾಡರ್ಥ ರೆಯೊಳ್ ॥ ಮೆರೆವೆಲ್ಲಾ ಋತುಗಳೊಳುಂ। ಪರಿವುದೆ ಪೇಳ್ಗಾಳಿಯೊಂದೆ ಮುಖ ಮಾಗಿರುತಂ? ॥ —(ನೀ.ಸಾ)

ಧನನಿಮಿತ್ತವಾಗಲಿ ಸ್ತ್ರೀನಿಮಿತ್ತವಾಗಲಿ ಇತರರ ಮನಸ್ಸನ್ನು ನೋಯಿಸುವವರಿಗೆ ಏಳಿಗೆ ಇಲ್ಲ.

ಶ್ಲೋ॥ ಉದ್ವೇಜನೀಯೋ ಭೂತಾನಾಂ ನೃಶಂಸಃ ಪಾಪಕರ್ಮಕೃತ್। ತ್ರಯಾಣಾಮಪಿ ಲೋಕಾನಾಮೀಶ್ವರೋಽಪಿ ನ ತಿಷ್ಠತಿ ॥ —(ಶ್ರೀ.ರಾ)

ಅ॥ ಪ್ರಾಣಿಗಳ ಮನಸ್ಸನ್ನು ನೋಯಿಸುವಂಥ, ಘಾತಕರಾದಂಥ, ಪಾಪವನ್ನು ಮಾಡು ವಂಥ ಜನರು ಮೂರುಲೋಕಕ್ಕೂ ಒಡೆಯರಾಗಿದ್ದರೂ ಬಾಳುವುದಿಲ್ಲ.

ಇದಕ್ಕೆ ರಾವಣನೊಬ್ಬನ ಉದಾಹರಣೆ ಸಾಕಾಗಿದೆ—

ಶ್ಲೋ॥ ಜಾತಿರ್ಬ್ರಹ್ಮಕುಲೇಽಗ್ರಜೋ ಧನಪತಿರ್ಯಃ ಕುಮ್ಭಕರ್ಣೋಽನುಜಃ, । ಪುತ್ರಃ ಶಕ್ರಜಯೀ, ಸ್ವಯಂ ದಶಶಿರಾಃ, ಪೂರ್ಣಾ ಭುಜಾ ವಿಂಶತಿಃ, ॥ ದೈತ್ಯಾಃ ಕಾಮಚರಾ, ರಥಶ್ಚ ವಿಜಯೀ, ಪಾರೇ ಸಮುದ್ರಂ ಗೃಹಮ್ । ಸರ್ವಂ ನಿಷ್ಫಲಿತಂ ತಥೈವ ವಿಧಿನಾ ದೈವೇ ಬಲೇ ದುರ್ಬಲೇ ॥ —(ಹ.ನಾ)

ಅ॥ ಜಾತಿಯಲ್ಲಿ ಬ್ರಾಹ್ಮಣ, ಕುಬೇರನು ಅಣ್ಣ, ಕುಂಭಕರ್ಣನು ತಮ್ಮ, ಮಗನು ಇಂದ್ರನನ್ನು ಜಯಿಸಿದವನು, ತನಗೆ ಹತ್ತು ತಲೆ, ಪೂರ ಇಪ್ಪತ್ತು ಭುಜಗಳು, ಸೇವಕರಾದ ದೈತ್ಯರು ಬೇಕಾದ ಹಾಗೆ ನಡೆಯಬಲ್ಲವರು, ರಥವು ಜಯಪ್ರದವನ್ನು ಕೊಡತಕ್ಕದ್ದು, ಮನೆ ಸಮು ದ್ರದ ಆಚೆಯ ದಡದಲ್ಲಿ, ಇಂಥ ರಾವಣನ ಸಮಸ್ತವಾದ ಐಶ್ವರ್ಯವನ್ನೂ ದೈವಬಲದ ದೌರ್ಬಲ್ಯ ದಿಂದ ಬ್ರಹ್ಮನು ವ್ಯರ್ಥವಾಗಿ ಮಾಡಿದನು.

ಆದ್ದರಿಂದ ಇಂದ್ರಿಯನಿಗ್ರಹವನ್ನು ಮಾಡಬೇಕೆಂದು ಜ್ಞಾನಿಗಳು ಉಪದೇಶಿಸಿರುವವದೇ ನೆಂದರೆ—

### ಮೋಹನ—ಅಟತಾಳ

ಶಮದಮಸುಖಸಂಪತ್ತಿ। ಇರೆ। ಶಮಿತವಾಗದೆ ಸಂಸಾರಾರ್ತಿ? ॥ ಪ ॥ ಶಮಿಜನಕೆಲ್ಲಿಯ ಭೀತಿ। ನೆರೆ ನೋಡೆ। ಶಮನನೆ ನಡುಗುವನಿದುಶಾಸ್ತ್ರೋದಿತ ರೀತಿ ॥ ಅ.ಪ ॥ ವಾಜಿಯ ಕಡಿವಾಣದಿಂದ। ನೆಳೆ। ದೋಜೆಯಿಂ ನಡೆಸುವನಂದ ॥ ಮಾಜದಿಂದ್ರಿಯಗಳ ಸಂಪ। ನೆರೆ ಹಿಡಿ। ದೀ ಜಗದೊಳು ವೀರನೆನಿಪ ಬಾಳುವೆಯಿಂದ ॥ ೧ ॥ ಒಳಗೆ ಮನವ ಹಿಡಿಯುತ್ತ। ಭೋಗ। ಗಳ ಯೋಚನೆಯ ಬಿದಿಯೊತ್ತ ॥ ಚಳಿ ಸೆಖೆ ಸುಖದುಃಖ ಮತ್ತೇ। ನೆನ್ನದೆ। ಬೆಳೆದ ತಿತಿಕ್ಷೆಯ ಸುಳಿವ ಸುಖವು ಮತ್ತೆ ॥ ೨ ॥ ಗುರುಶಾಸ್ತ್ರಬೋಧೆಯ ನೆಚ್ಚಿ। ಮನ। ದುರುಸಂಶಯವನೆಲ್ಲ ಕೊಚ್ಚಿ ॥ ಶರೀರದ ಭಾನವು ತುಚ್ಛೇ। ಕೃತವಾಗೆ। ಪರಮಶಂಕರಸುಖದಲಿ ತನ್ನ ಮುಚ್ಚಿ ॥ ೩ ॥ —(ಅ.ಗ)

ಟಿ|| ಶಮಿತವಾಗದೆ–ನಾಶವಾಗುವದಿಲ್ಲವೆ.? ಶಮಿ–ಮನೋನಿಗ್ರಹವುಳ್ಳವನು. ಶಮನ–ಯಮ. ವಾಜಿ–ಕುದುರೆ. ಕಡಿವಾಣ–ಲಗಾಮು. ಓಜೆ–ಕ್ರಮ. ಅಂದ–ಹಾಗೆ. ಮಾಜದೆ–ಮುಚ್ಚುಮರೆಯಿಲ್ಲದೆ. ಸಂದ–ಮರ್ಮವನ್ನು. ಶಂಕರಸುಖ–ಆತ್ಮಾನಂದ.

ಯಾರಿಗೆ ಇಂದ್ರಿಯನಿಗ್ರಹವಾಗುವದೆಂದರೆ—

ಶ್ಲೋ|| ಮನೋ ಧಾವತಿ ಸರ್ವತ್ರ ಮದೋನ್ಮತ್ತಗಜೇನ್ದ್ರವತ್ ।
ಜ್ಞಾನಾಙ್ಕುಶಸಮಾ ಬುದ್ಧಿಸ್ತಸ್ಯ ನಿಶ್ಚಲತೇ ಮನಃ|| —(ಸು)

ಅ|| ಮನಸ್ಸು ಮದ್ದಾನೆಯಂತೆ ಎಲ್ಲಿಲ್ಲಿಗೂ ಓಡುತ್ತದೆ. ಯಾರ ಬುದ್ಧಿಯು ಜ್ಞಾನವೆಂಬ ಅಂಕುಶಕ್ಕೆ ಸಮವಾಗಿದೆಯೋ ಅವರ ಮನಸ್ಸು ಅಲ್ಲಾಡದೆ ನಿಲ್ಲುತ್ತದೆ.

ಜ್ಞಾನವೆಂಬುವದು ದೇವರ ವಿಷಯವಾಗಿರಬೇಕು. ಹಾಗಿದ್ದರೇ ಅವರ ಇಷ್ಟಾರ್ಥಸಿದ್ಧಿ—

ತ್ರಿ|| ದೇವರನು ನೆನೆವರಿಗೆ ಭಾವಿಸಿದುದು ಬಂದಿಹುದು;।ದೇವರನು ನೆನೆಯದ ಧಮರಿಗೆ ಇಹಪರದಿ।ಯಾವದೂ ಇಲ್ಲ ಸರ್ವಜ್ಞ|| —(ಸ.ಪ)

ಆ ದೇವರ ಧ್ಯಾನದಲ್ಲಿ ಮನಸ್ಸು ಏಕಾಗ್ರವಾಗಿರುವದನ್ನು ಒಬ್ಬ ಕವಿ ವರ್ಣಿಸಿರುವದೆಂತೆಂದರೆ—

ವೃ||ಮಳೆ ಸುರಿವಾಗಳೆಂತು ಪನಿಗಾಳಿಸಿಡಿಲ್ಬನಿಗಳ್ಕಿ ಬಾಹ್ಯದೊ।ಳ್ಸುಳಿಯದೆ ಗೇಹದೊಳ್ಕೆಶುಗಳಿರ್ದಪುವೆಂತೆಲೆ ಯೋಗಿ, ನೀನು ಮಗ್ಗ।ಳಿಪ ವಿಕಾರಜೃಂಭಣದ ದುಃಕ್ಷಣದೊಳ್ಕೊರಗಾಡ ಬೇಡ; ಪ।ಜ್ಜಳಿಸುತೆ ನಿನ್ನೊಳಿರ್ದು ಜಯಿಸೆಂದೆಯಲಾ ! ಅಪರಾಜಿತೇಶ್ವರಾ || (ಅ.ಶ)

ಟಿ|| ವಿಕಾರಜೃಂಭಣದ– ಮನಸ್ಸು ಬೇರೆಬೇರೆ ವಿಷಯಾಕಾರವಾಗುವ. ದುಃಕ್ಷಣ–ಕೆಟ್ಟ ಹೊತ್ತು.

ಇಷ್ಟೇ ಅಲ್ಲ; ದೇವರನ್ನು ಬಿಟ್ಟು ಉಳಿದ ವಿಷಯಗಳ ಅವಲಂಬನೆಯು ವ್ಯರ್ಥವೆಂದು ಮತ್ತೊಬ್ಬ ಕವಿ ಹೇಳುವದೇನೆಂದರೆ—

ಸಾಂ|| ಸುರಧೇನುವಿರೆ ಮಜ್ಜಿಗೆಯ ಬೇಡುವಂತೆ ಶ್ರೀ।ಹರಿಯ ಬಿಟ್ಟಿತರ ಮಾತಾಡೆ || ಪುರುಪ ಮಣಿಯ ಬಿಟ್ಟು ಗಾಜ ಬೇಡುವನಿಗೆ ।ಅರಿವೀವರಾರೊ! ಮೂರ್ಖನಿಗೆ || —(ಮ.ಉ)

ಅಂಥ ಸುರಧೇನುಸ್ವರೂಪವಾದ ದೇವತಾಸ್ವರೂಪವು ಯಾವದೆಂದರೆ—

ಶ್ಲೋ|| ನಿತ್ಯಂ ಶ್ರೀರಾಮಮನ್ತ್ರಂ ನಿರುಪಮಮನಘಂ ನೀತಿಸುಜ್ಞಾನಮನ್ತ್ರಮ್ ! ಸತ್ಯಂ ಶ್ರೀರಾಮಮನ್ತ್ರಂ ಸುವಿಮಲಮನಿಶಂ ಸರ್ವಸಮ್ಪೂಜ್ಯಮನ್ತ್ರಮ್ || ಸ್ತುತ್ಯಂ ಶ್ರೀರಾಮಮನ್ತ್ರಂ ಸುಲಲಿತಸುಮನಸ್ಸೌಖ್ಯಸೌಭಾಗ್ಯಮನ್ತ್ರಮ್।ಪಥ್ಯಂ ಶ್ರೀರಾಮಮನ್ತ್ರಂ ಪವನಜವರದಂ ಪಾತು ಮಾಂ ರಾಮಮನ್ತ್ರಮ್ || —(ರಾ.ಕ.ಅ)

ಅ||ಶಾಶ್ವತವಾದಂಥ, ಹೋಲಿಕೆಯಿಲ್ಲದಂಥ, ಪಾಪರಹಿತವಾದಂಥ, ಯಾವಾಗಲೂ ನೀತಿಯ ಮತ್ತು ಒಳ್ಳೆ ಜ್ಞಾನಗಳ ಮಂತ್ರವಾದಂಥ, ಸತ್ಯವಾದಂಥ, ಯಾವಾಗಲೂ ಶುದ್ಧವಾದಂಥ, ಎಲ್ಲರಿಗೂ

ಪೂಜ್ಯವಾದಂಥ, ಸ್ತೋತ್ರಾರ್ಹವಾದಂಥ, ಮನೋಹರವಾದ ದೇವತಾಸೌಖ್ಯದ ಸಂಪತ್ತನ್ನು ಕೊಡುವಂಥ, ಪಠನಕ್ಕೆ ಯೋಗ್ಯವಾದಂಥ, ಹನುಮಂತನಿಗೆ ವರವನ್ನು ಕೊಟ್ಟಂಥ ಶ್ರೀರಾಮಮಂತ್ರವು ನನ್ನನ್ನು ರಕ್ಷಿಸಲಿ.

ಅಂಥ ರಾಮಚಂದ್ರನನ್ನು ಭಕ್ತರು ಬೇಡುವದೇನೆಂದರೆ—

ಬಿಲಹರಿ—ತ್ರಿಶ್ರಛಾಪು

ಕಾಯ್ಬೆ ಕರುಣಾಕರ। ಶ್ರೀರಾಮಚಂದ್ರ ॥ ಪ ॥ ನಿನ್ನವನೆಂದೆನಿಸಿ। ವಿಭೀಷಣ। ನನ್ನು ಪೊರೆದೆಯುಲ್ಲವೇ? ॥ ಇನ್ನು ನಾನದಕರ್ಹನಲ್ಲದೊ। ಡೆನ್ನ ರಾವಣನನ್ನೆಗೆಯ್ದೊಡ।ಮುನ್ನಬಪ್ಪ ಮರಣಸಮಯದೊ।ಳೆನ್ನ ಮುಂಗಡೆಯುಗಲದಿರು ನೀಂ ॥ ೧ ॥ ಇಳೆಯೊಳರಿಯುಲೆಲ್ಲರು। ಸುಗ್ರೀವನ । ಗೆಳೆಯನಾಗಿಹೆಯುಲ್ಲವೆ? ॥ ಗೆಳೆಯನಲ್ಲದೆ ನಿನಗೆ ವಾಲಿಯ । ಗೆಳೆಯನಾದೊಡದೇನು ಸಾವಿನ । ತಳಮಳದ ಹೊತ್ತಿನೊಳಗೆನ್ನಯ। ಬಳಿಯ ಬಿಟ್ಟೆನ್ನಗಲದಿರು ನೀಂ ॥ ೨ ॥ ಮುನಿಜನಗಳೊಳೆನ್ನನು। ಸೇರಿಸಿ ನಿನ್ನ। ಘನಚರಣವ ತೋರಿಸೊ ॥ ಮುನಿತನವು ಸಲ್ಲದೊಡೆ ಮರುಕದಿ। ಕನಕಮೃಗ ಮೊದಲಾಗಿ ನೂತುತ। ಕೊನೆಯ ಕಾಲದಿ ತಪ್ಪದೆನ್ನೀ। ಮನದೊಳಿರು ಚಿದ್ರೂಪಿನಿಂದಲಿ ॥ ೩ ॥ —(ಭಕ್ತಿ.ಗೀ)

ಅಂತ್ಯಕಾಲದಲ್ಲಿ ರಾಮರೂಪಿನ ಭಾವನೆಯಿಂದೇನಾಗುವದೆಂದರೆ—

ಶ್ಲೋ॥ ಯಂ ಯಂ ವಾಪಿ ಸ್ಮರನ್ಭಾವಂ ತ್ಯಜತ್ಯಂತೇ ಕಲೇವರಮ್ ।
ತಂ ತಮೇವೈತಿ ಕೌಂತೇಯ, ಸದಾ ತದ್ಭಾವಭಾವಿತಃ ॥ —(ಭ.ಗೀ)

ಅ॥ ಕೊನೆಗೆ ದೇಹವನ್ನು ಬಿಡುವಾಗ ಯಾವಯಾವ ಭಾವವನ್ನು ಸ್ಮರಿಸುತ್ತಾನೊ ಯಾವಾಗಲೂ ಅದನ್ನೇ ಭಾವನೆಮಾಡಿದ್ದರಿಂದ ಆಯಾ ಭಾವವನ್ನೇ ಹೊಂದುವನು.

ಪರಸತಿಪರಧನಗಳ ಮೇಲೆ ಬಯಕೆಯನ್ನಿಟ್ಟ ಫಲವಾಗಿ ಸರ್ವಸ್ವವನ್ನೂ ಕಳೆದುಕೊಂಡು ಭಯದಿಂದ ಯಾವಾಗಲೂ ರಾಮನನ್ನೇ ಹಂಬಲಿಸುತ್ತಿದ್ದದ್ದರ ಫಲವಾಗಿ ಕೊನೆಗಾಲದಲ್ಲಿ ರಾಮನನ್ನು ನೋಡುತ್ತ ಪ್ರಾಣವನ್ನು ಬಿಟ್ಟು ಮುಕ್ತಿಯನ್ನು ಪಡೆದದ್ದಕ್ಕೆ ರಾವಣನ ಪರಾಭವವೆಂಬ ಆಖ್ಯಾನವು ನಿರೂಪಣಮಾಡಲಾಗುವುದು.



## ಆಖ್ಯಾನ

ಕೀ॥ ಅರಿತು ವಿಭೀಷಣನಿಷ್ಟವ ರಾಮನು । ಶರಧಿಯನೊಲಿಸುವದರೊಳಿರಲು ॥ ಅರಿತಿದನಿನಜನನೊಲಿಸಲು ಶುಕನನು। ತೆರಳಿಚಿದನು ಖಳ ತಾ ಮೊದಲು॥

ಆ ಶುಕನು ಬಂದು ಸುಗ್ರೀವನಿಗೆ ರಾವಣನ ಮಾತನ್ನು ಹೇಳುತ್ತಾನೆ—

ಹಿಂದುಸ್ಥಾನಿ ಕಾಪಿ—ಅಟತಾಳ

ನುಡಿಯಿದನಾಲಿಸಯ್ಯ। ತಡೆಯದೆ ಸುಗ್ರೀವನೆ ॥ ಪಡೆಯದೆ ಅನರ್ಥವ। ಕಡುಹಿತವನ್ನುದನೆ ॥ ಪ ॥ ಅರಸನಾಗಿಹ ನೀನು। ಅರಸನಾದೆನ್ನನು ॥ ಅರಿಯೆನ್ನ ಬಾರದು। ಬರಿದೆ ಆಯಾಸವಿದು ॥ ೧ ॥ ಬಲಹೀನಮನುಜರ । ಬಲೆ ದುಃಖಕಾಗಾರ ॥ ಛಲವಿದು ದಕ್ಕದು। ಫಲವೇನು ಸಿಕ್ಕದು ॥ ೨ ॥ ಮನುಜನ ಸತಿಯನು ಬಿಸಡಕೆ ತಂದೆ ನಾನು ॥ ವನಚರೇಶ್ವರನಾದ। ನಿನಗದರಿಂದೇನು ॥ ೩ ॥

ಆಗ ಕಪಿಗಳೆಲ್ಲರೂ ಆವನನ್ನು ಶತ್ರುಪಕ್ಷದವನೆಂದು ಹಿಡಿದು ಬಾಧಿಸುತ್ತಿದ್ದರೂ ತಡೆದುಕೊಂಡು ಅವನು ಸುಗ್ರೀವನ ಉತ್ತರವನ್ನು ಬಯಸಿದಾಗ ನಡೆದ ಸಂಭಾಷಣೆಯೇನೆಂದರೆ—

ಸಾ॥ (ಶು) ಇನಜನೆ ನಿನ್ನುತ್ತರವನು ಗೆಳೆಯನಿಗೇ। ನನು ಪೇಳಲಿ ನಾನೀಗ?॥ (ಸು) ಅನುಗೊಳಿಸುವೆನಾ ದನುಜನಿಗೆನ್ನು। ತ್ತರವ ಗತಿಯನು ನಾ ಬೇಗ ॥

ಈ ಉತ್ತರವಾದ ಮೇಲೆಯೂ ವಾನರರು ಅವನನ್ನು ಹಿಡಿದು ಕಟ್ಟಿಹಾಕಿರಲು ಇತ್ತ ನಡೆದ ಕಥೆಯೇನೆಂದರೆ—ಎಷ್ಟು ಹೊತ್ತು ಧ್ಯಾನಮಾಡಿದರೂ ಸಮುದ್ರರಾಜನು ಎದುರಿಗೆ ಬರಲಿಲ್ಲವಾದ್ದರಿಂದ ರಾಮನು ಕೋಪಾವೇಶವನ್ನು ತಂದುಕೊಂಡು ಲಕ್ಷ್ಮಣನನ್ನು ಕುರಿತು ಹೇಳಿದ್ದೇನೆಂದರೆ—

ಶ್ಲೋ॥ ಅವಜಾನನ್ತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಮ್। ಪರಂ ಭಾವಮಜಾನನ್ತೋ ಮಮ ಭೂತಮಹೇಶ್ವರಮ್ ॥ —(ಭ.ಗೀ)

ಅ॥ ಜಡಬುದ್ಧಿಯುಳ್ಳವರು ಸರ್ವಕ್ಕೂ ಕಾರಣವಾದ ನನ್ನ ಉತ್ಕೃಷ್ಟಸ್ಥಿತಿಯನ್ನು ತಿಳಿಯದೆ ನನ್ನನ್ನು ಮನುಷ್ಯದೇಹದವನೆಂದು ತಿಳಿದು ಅನಾದರ ಮಾಡುತ್ತಾರೆ—

ಶ್ಲೋ॥ ಅದ್ಯ ಪಶ್ಯ ಮಹಾಬಾಹೋ ಶೋಷಯಿಷ್ಯಾಮಿ ವಾರಿಧಿಮ್। ಪಾದೈರೇವ ಗಮಿಷ್ಯನ್ತಿ ವಾನರಾ ವಿಗತಜ್ವರಾಃ ॥ —(ಅ.ರಾ)

ಅ॥ ಈಗ ನೋಡು ಲಕ್ಷ್ಮಣ, ಸಮುದ್ರವನ್ನು ಇಂಗಿಸಿಬಿಡುತ್ತೇನೆ; ಕಪಿಗಳೆಲ್ಲರೂ ಯೋಚನೆಯನ್ನು ಬಿಟ್ಟು ಕಾಲಿನಿಂದಲೇ ನಡೆದುಕೊಂಡು ಹೋಗುತ್ತಾರೆ.

ಎಂದು ರಾಮನು ಧನುಸ್ಸಿಗೆ ಬಾಣವನ್ನು ಹೂಡುತ್ತಲೆ—

ಷ॥ ಇಳಿದುದುರಿ ಬಂದಂಬುನಿಧಿಯೊಡ । ಲೊಳಗೆ; ತೆರೆತೆರೆಗಳನು ಬಗಿಬಗಿ। ದಿಳಿದಡರಿದುದು ಛಟಛಟತ್ಕೃತಿಗಳ ಛಡಾಳದಲಿ; ॥ ತುಳುಕಿ ತೂಳುವ ತುಂತುರಿನ ಕಿಡಿ। ಹಳಚಿದವು; ಹೊದರೆದ್ದ ವಡಬಾ। ನಲನನೊದೆದುದು ರಾಮಭದ್ರನ ಭೀಮಬಾಣಾಗ್ನಿ ॥ —(ಸು)

ಆಗ ಸಮುದ್ರರಾಜನು ಹೆದರಿ ತನ್ನ ಹೆಂಡತಿಯರೊಡನೆ ಬಂದು ಅನರ್ಘ್ಯರತ್ನಗಳ ಕಾಣಿಕೆಯನ್ನಿಟ್ಟು ರಾಮನನ್ನು ಪ್ರಸನ್ನನಾಗಿ ಮಾಡಿಕೊಂಡದ್ದೆಂತೆಂದರೆ—

ಕಂ॥ ನಾರದಕೃತಗುಣಸಂಕಥ । ನಾ, ರದರುಚಿವಿಜಿತಚಂದ್ರಿಕಾಧ್ಯತಲೀಲಾ ॥ ನಾರದಶಾ, ಪೊರೆವಂ ಪೆರ। ನಾರದರಿಂ ಬಿಡದೆ ನೀನೆ ಪೊರೆ ಪರಮೇಶ ॥ —(ಸೂ.ಶಾ)

ಟಿ॥ ನಾರದಶಾ—ಮನುಷ್ಯಾವತಾರಮಾಡಿರುವವನೆ. ಪೇರಂ+ಆರ್+ಅದರಿಂ.

✓ಚಾ॥ ಹನುಮ ದಾಟಿದನೇಸಮಾಡಿದೆ—ಮನದೊಳವನಿಗೆ ಮುನಿದೆನೇ?। ಮುನಿ ಮುನಿದು ಕುಡಿದಂದು ಮುನಿಗೆರ-ಡೆಣಿಸುವದನಾ ನೆನೆದೆನೇ? ॥ ಕನಲಿ ಭಾರ್ಗವ ಕೋಪಿಸಿದೊಡಾ—ತನಲಿ ಖಾತಿಯಗೊಂಡೆನೇ? । ಹನನಕಂಘೈಸು ವದು ಯೋಗ್ಯವೆ? ದೇವ, ನಾನದಕರ್ಹನೇ? ॥

ಕಂ॥ ಸರಲಾ ತೊಡದಿರು; ಮುಳಿಸಂ। ತೊರೆದೆನ್ನೀ ಸತಿಯುರೈರದಾಳಿಯ ಸಿರಿಯುಂ ॥ ನೆರೆದಾಶ್ರಿತಕುಲಮಂ ಪೊರೆ; । ಶರಣಾಗತನಾದೆನಿಂದು ರಘುಕುಲ ತಿಲಕಾ ॥ — (ರಾ.ಅ.ನಾ)

ಟಿ॥ ಐರದಾಳಿ—ಮಂಗಲಸೂತ್ರ.

✓ಜೂ॥ ದೇವದೇವಾ ನಿನಗೆ ನಾ ಶರಣು ಬಂದೆ, ನೀನೆನ್ನ ಕಾಯೊ ಇಂದೇ, ಭವದ ಬೇಗೆಯೊಳು ನಾ ಬೆಂದೆ, ಹುಟ್ಟುಸಾವುಗಳಿಂದ ನೊಂದೆ, ನಾನು ತಿಳಿ ಯದುದೊಂದು ಕಂದೇ? ಒಲಿಯದಿರೆ ನೀನೆನ್ನ ಕೊಂದೆ, ನೀ ನೋಡುವೆಯ ನಾನು ಮನಗುಂದೆ? ಶರಣೆನಗೆ ನಿನ್ನ ಪದವೊಂದೆ, ಬಂದಿರ್ಪುದೆನಗೆ ಜಡನೆಂಬ ನಿಂದೆ, ದಯೆದೋರು ನಾ ಸುಖವ ಪೊಂದೆ, ನೀನುಪೇಕ್ಷಿಸಲು ಗತಿಯೇನು ಮುಂದೆ? ಬಹುಕಷ್ಟಗಳಿಗೆ ನಾ ಸಂದೆ, ತಿಳಿಯದಾದೆನು ನಿನ್ನ ಹಿಂದೆ, ನೀನೆನಗೆ ತಂದೆ। ಜಡನಲ್ಲನೇ ದೇವ ನಾನು, ನಿನ್ನ ನಾ ಹೇಗೆ ತಿಳಿದೇನು? ನಿನಗೆ ನಾ ಶರ ಣೆಂದಿಲ್ಲವೇನು? ನೀನೊಲಿಯದಿರೆ ತಪ್ಪೆನ್ನದೇನು? ನಿನ್ನ ನುಡಿಯೆನ್ನ ಕಿವಿಗೀಗ ಜೇನು, ಭಕ್ತಜನಕಾಮಧೇನು, ನೀನು। ವಿಷಯಕ್ಕೆ ಮರುಳಾಗಿ ನಾ ಕೆಟ್ಟೆ ಮನಗಿ ಗುಣಗಳ ಮೂಲೆಗಿಟ್ಟೆ, ಸದಾಚರಣಗಳ ನಾನು ಬಿಟ್ಟೆ, ಅಪಾತ್ರರಿಗೆ ನಾನುಕೊಟ್ಟೆ, ಕೆಡುವ ಪಂಥವನು ನಾ ತೊಟ್ಟೆ, ಉರಿಯುವದು ನೆನೆಯಲದ ಹೊಟ್ಟೆ, ಮುಂದೆನಗೆ ತೋರದೈ ಒಟ್ಟೆ, ಇಷ್ಟೇ, ಇದು ನಿನಗೆ ತಿಳಿಯದಿಹ ಗುಟ್ಟೇ? । ಎನ್ನವಗುಣವ ನೋಡಬೇಡ, ಪರಹಾರಮಾಡೆನ್ನ ಕೇಡ, ಪ್ರೀತಿಯಿರ ಲೆನ್ನೊಳಗೆ ಗಾಢ, ನನ್ನು ತನೆ ಇಡಬೇಡ ಗೂಢ, ನಾನು ಬಲುಮೂಢ। ಆದು ದನು ತಿದ್ದಲಳವಲ್ಲ, ಆದುದೆಲ್ಲವು ಹೋಗಲೆಲ್ಲ, ಕಾಪಾಡೆ ನಿನ್ನ ಹೊರತಿಲ್ಲ, ನೀನುಪೇಕ್ಷೆಯ ಗೆಯ್ಯಸಲ್ಲ, ನಲ್ಲ ॥

ಇದರ ಪರಿಣಾಮವೇನಾಯಿತೆಂದರೆ—

✓ದಿಂ॥ ಶರಧಿಯಂ ಸಂತೈಸುತ್ತ ರಾಮನಾಗ। ಕರುಣದಿಂದಭಯಂಗೊಟ್ಟು ತಾನು ಬೇಗ ॥ ಶರವನಾತನ ಶತ್ರುಗಳ ಮೇಲೆ ಬಿಟ್ಟು। ಪೊರೆದನವನಾ ದೈನ್ಯ ತೆಗೆ ಹರ್ಷಬಟ್ಟು ॥

ಅಮೇಲೆ—

✓ಕೀ॥ ನಲನಿಂ ಸೇತುವ ವಿರಚಿಸೆನಲ್ಕಾ । ಜಲಧಿಯಾಸರಿಯೊಳವನಿಂದ ॥ ನಲವಿಂ ಶತಯೋಜನಸೇತುವ ರಚಿ। ಸಲು ನೆರವಾದುದು ಕಪಿವೃಂದ ॥

**ಆಗ ರಾಮನು ಮಾಡಿದ್ದು ಮತ್ತು ಆಡಿದ್ದು—**

ಶ್ಲೋ॥ಸೇತುಮಾರಭಮಾಣಸ್ತು ತತ್ರ ರಾಮೇಶ್ವರಂ ಶಿವಮ್।ಸಂಸ್ಥಾಪ್ಯ ಪೂಜಯಿತ್ವಾಽಽಹ ರಾಮೋ ಲೋಕಹಿತಾಯ ಚ । ಪ್ರಣಮೇತ್ಸೇತುಬನ್ಧಂ ಯೋ ದೃಷ್ಟ್ವಾ ರಾಮೇಶ್ವರಂ ಶಿವಮ್ । ಬ್ರಹ್ಮಹತ್ಯಾದಿಪಾಪೇಭ್ಯೋ ಮುಚ್ಯತೇ ಮದನುಗ್ರಹಾತ್ ॥ —(ಅ.ರಾ)

**ಅ॥ ಸೇತುವಿನ ಕೆಲಸಕ್ಕೆ ಆರಂಭಮಾಡುವಾಗ ಅಲ್ಲಿ ರಾಮನು ಲೋಕಹಿತಾರ್ಥವಾಗಿ ರಾಮೇಶ್ವರನ ಲಿಂಗವನ್ನು ಸ್ಥಾಪಿಸಿ ಪೂಜೆಮಾಡಿದ್ದಲ್ಲದೆ ಆ ರಾಮೇಶ್ವರಲಿಂಗವನ್ನು ನೋಡಿ ಸೇತುವಿಗೆ ನಮಸ್ಕರಿಸಿದರೆ ಬ್ರಹ್ಮಹತ್ಯಾದಿ ಪಾಪಗಳು ತನ್ನನುಗ್ರಹದಿಂದ ಹೋಗುವವೆಂದು ಹೇಳಿದನು.**

**ಸೇತುವಿನ ಕೆಲಸ ನಡೆಯುತ್ತಿರುವಾಗ—**

✓ಸಾ ॥ ನಳನೊಗೆದಾ ಕಲ್ಗಳು ಬಿಡಿಬಿಡಿಯಾಸೆ । ಜಲದೊಳು ತೇಲಲು ನೋಡಿ ॥ ಅಲಘುರಕಾರಮಕಾರಂಗಳ ಬರೆ। ದುಲಿಯು ತೋರಿದವು ಕೂಡಿ ॥

**ಈ ಪ್ರಕಾರ ಅದು ಮುಂದುವರಿದದ್ದೆಂತೆಂದರೆ—**

✓ರ॥ ಆಯಿತಾಗಲೆ ಸೇತುಬಂಧ । ನೋಡುವೊಡದು ಚಂದ ॥ ಪ ॥ ಸುಗ್ರೀವರಪಿಗೆ ವಾನರಭಟರು । ಜಗ್ಗಿ ಕಿತ್ತು ಮರಗಳ ತರುತಿದ್ದರು । ಕಲ್ಲುಬಂಡೆಗಳ ಮಿಾಟುತೆ ಕೆಲವರು।ಉಲ್ಲಾಸದಿ ಕಯ್ಯೊಳು ತರುತಿದ್ದರು।ಕೆಲವರು ತಂದರು ಗಿರಿಶಿಖರಗಳ।ಜಲಧಿಗೆ ಧುಮ್ಮಿಸೆ ಹಾಯ್ದುದರವುಗಳ।ಅದರಿಂ ಹಾರಿದ ನೀರಾಕಾಶಕೆ । ಅನುಭುತವೆನೆ ಹಾರಿತು ಸ್ವರ್ಲೋಕಕೆ।ಶತಯೋಜನದುದ್ದವ ತಾವಳೆಯಲು । ಹಿತದಿ ನೂಲ ಹಿಡಿದೇ ನಿಂತಿರಲು । ಕಟ್ಟುವದಕೆ ನಳನೇ ಮುಂದಾಳು।ನೆಟ್ಟನೆಗೈವುದು ಕಪಿಗಳ ಸಾಲು । ತ್ವರೆಗೊಳಿಪರು ವಾನರರನು ಕೆಲಬರು । ಒರೆವರು ಕಲ್ಮಣ್ಣುಗಳನು ಕೆಲವರು । ಕಾಲಿಗೆ ಮೃದುವಾಗಲು ಸೇತುವೆಯು।ಮೇಲೆ ಹೂಗಿಡಗಳೊಟ್ಟಿಹ ಪರಿಯು । ಕೆಲಸದ ಗಡಿಬಿಡಿ ಜಗದೊಳಗೆಲ್ಲ । ಬೆಳೆದುದನಾವನು ಬಣ್ಣಿಸಬಲ್ಲ । ಮೊದಲ ದಿನದಿ ಹದಿನಾಲಕು ಯೋಜನ । ಬದಗಿರಲಿಪ್ಪತ್ತಾದುದು ಮರುದಿನ । ಮೂರನೆ ದಿನದೊಳಗಿಪ್ಪತ್ತೊಂದು।ಸೇರಿತು ಮುಂದಿಪ್ಪತ್ತೆರಡೆಂದು।ಉಳಿದಿಪ್ಪತ್ತಮೂರೈದನೆಯ ದಿನ । ಬೆಳೆಯಲಾಯ್ತು ಸೇತುವು ಶತಯೋಜನ ॥

**ಆ ಸೇತುವನ್ನು ಕವಿಯು ವರ್ಣಿಸಿರುವದೆಂತೆಂದರೆ—**

ಷ॥ ಭೂವನಿತೆ ನಿಜಪುತ್ರಿಗಭಯವ।ನೀವುದ ನೀಡಿರ್ದ ಬಾಹುವೊ!।ರಾವಣಾದಿಮಹಾಸುರರ ನುಂಗುವೊಡ ಮೃತ್ಯುವದು ॥ ತೀವಿ ಚಾಚಿದ ನಾಲಿಗೆಯೊ! ಸ।ದ್ಭಾವದಿಂದಹಿರಾಜ ರವಿಕುಲ।ದೇವನಡಿಗೆಡೆದಂದವೋ! ಎನೆ ಮೆರೆದುದಾ ಸೇತು ॥ —(ರಾ.ಕ.ಕು)

**ಸೇತುಬಂಧವು ಕಪಿಗಳಿಂದ ನಡೆಯಿತೆಂಬುದು ಆಶ್ಚರ್ಯವಾಗಿ ಕಂಡರೂ ವಿಚಾರದೃಷ್ಟಿಗೆ ಅದು ಸಾಧ್ಯ. ಹೇಗೆಂದರೆ—**

ಶ್ಲೋ॥ ಅಮನ್ತ್ರಮಕ್ಷರಂ ನಾಸ್ತಿ; ನಾಸ್ತಿ ಮೂಲಮನೌಷಧಮ್; । ಅಯೋಗ್ಯಪುರುಷೋ ನಾಸ್ತಿ; ಯೋಜಕಸ್ತತ್ರದುರ್ಲಭಃ ॥ —(ಸು)

ಅ॥ ಮಂತ್ರಕ್ಕೆ ಸಂಬಂಧಪಡದೆ ಇರುವ ಅಕ್ಷರವಿಲ್ಲ. ಔಷಧಕ್ಕೆ ಉಪಯುಕ್ತವಾಗದ ಮೂಲಿಕೆ ಇಲ್ಲ. ಅಯೋಗ್ಯನಾದ ಪುರುಷನಿಲ್ಲ. ಇವುಗಳ ಸಮುಪಯೋಗ ಮಾಡುವವರು ಕಡಿಮೆ.

ಈ ಪ್ರಕಾರ ಕಪಿಗಳಿಂದಲೇ ಸೇತುಬಂಧವಾದದ್ದನ್ನು ಲಕ್ಷ್ಯದಲ್ಲಿಟ್ಟುಕೊಂಡು ಭಾಗವತ ಶಿರೋಮಣಿಗಳು ಪೀಠಿಕೆಯಲ್ಲಿ "ಸಣ್ಣ ಸಣ್ಣಾಸರೆ। ತಿಣ್ಣದಕೆಲಸವ" ಎಂದು ಮೊದಲಾಗಿರುವ ನುಡಿಯನ್ನು ಹೇಳಿರುವರು.

ಸೇತುಬಂಧವಾಗುತ್ತಲೆ—

✓ ಕೀ॥ ಹನುಮನು ರಾಮನನಂಗದನಾ ಲ।ಕ್ಷ್ಮಣನನು ಹೆಗಲೊಳು ತಳೆದಿರಲು॥ವನಚರಸೇನೆಯು ಹೊರಟಿತು ಹಿಂಗಡೆ।ವನಧಿಯಾರ್ಭಟವ ಕಿರಿದೆನಲು ॥

✓ ರ॥ ಅಂತಾಗಳ್ರಘುರಾಮಂ ಸಭೆಯಿಂ।ಸಂತತಸಕಲಾಭರಣಪ್ರಭೆಯಿಂ। ಅಮರೇಂದ್ರನ ಲೀಲೆಯನೇಳಿಸುತಂ। ಕ್ರಮವಿಕ್ರಮಮಂ ಪರಿಪಾಲಿಸುತಂ। ತಳರ್ದಂ ರಜತಶಿಖರ ತಳರ್ನಂತಿರೆ। ನಲಸುಗ್ರೀವಪ್ರಮುಖರ್ ಮುಂತಿರೆ। ಅಪರಿಮಿತಾನಕವಾದ್ಯಂ ರಾಜಿಸೆ।ತಪನದ್ಯುತಿಯಂ ಬೆಳುಗೊಡೆ ಭಂಜಿಸೆ।ಪನ್ನೆರಡುಂ ಶಂಖಧ್ವನಿ ರಾಜಿಸೆ।ಸನ್ನಾಹದ ಪರೆ ಪಲವುಂ ಬಾಜಿಸೆ।ಕವಿಗಮಕಿಗಳ ಸುಭಾಷಿತಮೆಸೆದಿರೆ। ಭುವನಂ ಸೇನಾಮಯಮೆನಿಸುತ್ತಿರೆ।ಬಂದು ಸುವೇಲಾಚಲಪರಿಸರದೊಳ್। ಸಂದ ಸುವೇಲಾನಾಮದ ಪುರದೊಳ್ ॥ —(ಕು.ರಾ)

ಆಗ ಕಪಿಗಳಿಂದ ಬಿಡಲ್ಪಟ್ಟ ಶುಕನು ಬಂದು ರಾವಣನಿಗೆ ಹೇಳುತ್ತಾನೆ—

ನಾದರಾಮಕ್ರಿಯೆ—ಆದಿತಾಳ

ಕೇಳೀಗ ರಾವಣೇಶ್ವರ । ನಾ ಹೇಳುವದ ॥ ಪ ॥ ವಾನರರೊಡಗೂಡಿ। ಮಾನವೇಂದ್ರನು ರಾಮ ॥ ಈ ನಮ್ಮ ಸುವೇಲಾದ್ರಿ।ಸಾನುವಿನಲ್ಲಿಹನು ॥ ೧ ॥ ಸಾಗರಕೀಗ ಸೇತು।ವಾಗಿಹುದಯ್ಯ ಬಹು ॥ ಬೇಗಲೆ ಇಲ್ಲಿಗೆ।ಸಾಗಿ ಬರುವರಯ್ಯ ॥ ೨ ॥ ನುಡಿಯೆ ನಿನ್ನಯ ಮಾತ।ಕಿಡಿಕಿಡಿಯಾದರು ॥ ಹೊಡೆದರೆನ್ನನು ಬಿಡು । ನುಡಿಯನಾಡಿದರಯ್ಯ ॥ ೩ ॥ ಕೋಪಿಗಳವರು ಪ್ರ। ತಾಪಶಾಲಿಗಳಯ್ಯ ॥ ಈ ಪತ್ತನಕೆ ಬರು।ವಾಪತ್ತು ತಪ್ಪದಯ್ಯ ॥ ೪ ॥ ಸೀತೆಯನೊಪ್ಪಿಸಲು।ಆತ ರಕ್ಷಿಪನಯ್ಯ ॥ ಮಾತಿದು ಸೇರದಿರೆ। ನೀ ತಿಳಿದುದಗೈಯ್ಯ ॥ ೫ ॥

ಶುಕನು ರಾಕ್ಷಸರ ಗುಂಪಿನವನೇ ಆಗಿದ್ದರೂ ಪೂರ್ವದಲ್ಲಿ ಅವನು ಬ್ರಾಹ್ಮಣನಾಗಿದ್ದ ಸಂಸ್ಕಾರವಿದ್ದದ್ದರಿಂದ ಅವನಿಗೆ ದುಸ್ಸಹವಾಸದ ಪರಿಣಾಮವು ಅಷ್ಟೇನೂ ಆಗದೇ ಇದ್ದದ್ದು ಸಹಜವಾಗಿದೆ.

ಕಂ॥ ಕಾಗೆಗಳ ಕೂಡೆ ಬಳೆದುಂ।ಕೋಗಿಲೆಗಳ್ಪಂಚಮಸ್ವರಂಬಿಡಿದಿರ್ಕುಂ॥ ಆಗದು ಖಲಜನಸಂಗದಿ । ನೇಗಳುಮೊಳ್ಳಿದರ ಮಾತಿನೊಳ್ಳಾಕಿಸ್ಯಂ ॥ —(ನ.ಶ)

**ಅದೇ ಸಮಯದಲ್ಲಿ ರಾವಣನ ಚಿಕ್ಕಪ್ಪನಾದ ಮಾಲ್ಯವಂತನು ಬಂದು ಹೇಳಿದ್ದೇನೆಂದರೆ—**

**ಧನ್ಯಾಸಿ—ಆದಿತಾಳ**

ಮಗನೆ ರಾವಣಾ ಬಗೆಗೆ ತಂದುಕೋ।ನಗರಪರಿಸ್ಥಿತಿಯ ॥ ಬಗೆಯೆ ಸೀತೆಯನು ತಂದುದಕಾಗಿಹ।ಹಗರಣಗಳ ಪರಿಯ ॥ ಪ ॥ ಗಗನದಿಂದ ರಕ್ತದ ಮಳೆ ಸುರಿವುದು।ಮಿಗೆ ದೆಸೆದೆಸೆಯೆಲ್ಲಾ ॥ ಮಿಗಿಲೆನೆ ವಾಹನಗಳು ಕಣ್ಣೀರ್ಗಳ। ಸುಗುಳುತಿರುವವಲ್ಲ! ॥ ೧ ॥ ನರಿಗಳಿಲ್ಲ ನಗರದ ಸುತ್ತಲು ಪರಿ।ಪರಿ ಕೂಗಿದುತಿಹವು ॥ ನೆರೆ ಬಲಿಕರ್ಮದ ಹವಿಸ್ಸುಗಳ ಕಾ । ಕ್ಕುರಗಳು ಭುಂಜಿಸವು ॥ ೨ ॥ ಹಸುಗಳ ಗರ್ಭದಿ ಕತ್ತೆ ಹುಟ್ಟಿ ಮುಂಗಿಸಿ ಹೆಗ್ಗಣದೊಡನಾಡುವದು॥ಮಸಗಿ ಮಸಗಿ ಮೃಗಪಕ್ಷಿಗಳೆಲ್ಲಾ।ಬಿಸುಸುಯ್ಯುತ್ತಿಹವು ॥ ೩ ॥ ಆದರಿಂ ಸೀತೆಯ ನೊಪ್ಪಿಸು ರಾಮಗೆ।ಮುದವಪ್ಪುದು ನಿನಗೆ ॥ ಉದಧಿಯ ದಾಟಿದ ವೀರನ ಗೆಲ್ಲುವ।ಹದ ಕಾಣದು ಎನಗೆ ॥

ಅದಕ್ಕೆ ರಾವಣನ ಉತ್ತರ—

ಶ್ಲೋ॥ ಮಾನುಷಂ ಕೃಪಣಂ ರಾಮಮೇಕಂ ಶಾಖಾಮೃಗಾಶ್ರಯಮ್ ।
ಸಮರ್ಥಂ ಮನ್ಯಸೇ ವೀರ, ಹೀನಂ ಪಿತ್ರಾ ಮುನಿಪ್ರಿಯಮ್ ॥ —(ಅ.ರಾ)

ಅ॥ ಹೆ, ವೀರನಾದ ಚಿಕ್ಕಪ್ಪ, ದೀನನಾಗಿ ತಂದೆಯಿಲ್ಲದವನಾಗಿ ಒಂಟಿಯಾಗಿ ಮುನಿಗಳಿಗೆ ಬೇಕಾದವನಾಗಿ ಕಪಿಗಳನ್ನು ಆಶ್ರಯಿಸಿಕೊಂಡಿರುವ ರಾಮನನ್ನು ಸಮರ್ಥನೆಂದು ತಿಳಿಯುತ್ತೀಯ ?

ಎಂದು ಮುಂತಾಗಿ ಗದರಿಸಿ ಕಳುಹಿಸಿಬಿಟ್ಟನು. ಇತ್ತ—

ದಿಂ॥ ಬಿಡದೆ ರಾಮಂ ನೋಡಲ್ಕೆ ಲಂಕೆಯನ್ನು । ಅಡರೆ ತಾನಾಗಳ್ ಸುವೇಲಾದ್ರಿಯನ್ನು ॥ ಅಡರ್ದನಾ ಖಲನುಂ ತನ್ನ ಸೌಹದಿಯನ್ನು।ತಡೆಯ ದೀಕ್ಷಿಸಲಾ ಶತ್ರುಸೈನ್ಯವನ್ನು ॥

**ಹೀಗೆ ರಾಮನೊಡನೆ ಸುವೇಲಾಚಲವನ್ನು ಹತ್ತಿದ್ದ ಸುಗ್ರೀವನು ದೂರದಲ್ಲಿ ಮಹಡಿಯನ್ನು ಹತ್ತಿ ನಿಂತಿದ್ದ ರಾವಣನನ್ನು ನೋಡುತ್ತಲೆ ಸಿಟ್ಟಿನಿಂದ—**

ಷ॥ ಆರರೆ! ಪೊಗಳುವೆನೇನ? ರಘುಶೇ । ಖರಚರರ್ಕಳನಂತಕೋಪದಿ । ಪೊರೆಯುತಿರಲವರೆಲ್ಲರಧಿನಾಯಕನು ಸುಗ್ರೀವ ॥ ಗರುಡನಂದದೊಳ್ಹೈದಿ ರಾತ್ರಿಂ।ಚರಭುಜಂಗನನೊದೆದು ಧಾರಿಣಿ । ಗುರುಳಗೆಡಹಿ ಕಿರೀಟಗಳ ತಂದಿತ್ತ ನಧಿಪತಿಗೆ ॥ —(ರಾ.ಕ.ಕು)

**ಇಷ್ಟು ಸಾಹಸವನ್ನು ಮಾಡಬಾರದೆಂದು ರಾಮನು ಸುಗ್ರೀವನಿಗೆ ಹೇಳಿ ಮುಂದಿನ ಕಾರ್ಯವನ್ನಾಲೋಚಿಸಿ ದುಡೋಪಾಯವನ್ನು ಮೊದಲೇ ಕೈಕೊಳ್ಳಬಾರದೆಂದು ಅಂಗದನೊಡನೆ ಸಂಧಿಗೆ ಹೇಳಿ ಕಳುಹಿಸುತ್ತಾನೆ. ಅಂಗದನು ಹೋದಾಗ—**

ಶ್ಲೋ॥ ರತ್ನಸ್ತಂಭೇಷು ಸಜ್ಜಾಕ್ರಾನ್ತೈಃ ಪ್ರತಿಬಿಮ್ಬಿತೈರ್ವೃತಃ ।
ಲಙ್ಕೇಶ್ವರಃ ಸಭಾಮಧ್ಯೇ ನ ಜ್ಞಾತೋ ವಾಲಿಸೂನುನಾ ॥ —(ಸು)

ಅ॥ ಆ ಸಭೆಯಲ್ಲಿ ರತ್ನದ ಕಂಬಗಳಲ್ಲಿ ನೂರಾರು ಪ್ರತಿಬಿಂಬಗಳಿದ್ದದ್ದರಿಂದ ನಿಜವಾದ ರಾವಣನು ಯಾಗೆಂಬುದು ಅಂಗದನಿಗೆ ತಿಳಿಯಲಿಲ್ಲ.

ವಿಚಾರಮಾಡಿ ತಿಳಿದುಕೊಂಡ ಮೇಲೆ ಅವರಿಬ್ಬರಿಗೂ ನಡೆದ ಸಂಭಾಷಣೆಯೇನೆಂದರೆ—

ಶ್ಲೋ॥ (ರಾ) ಕಸ್ತ್ವಂ ವಾನರ? (ಅಂ) ರಾಮರಾಜಭವನೇ ಲೇಖಾರ್ಥಸಂವಾಹಕೋ। (ರಾ) ಯಾತಃ ಕುತ್ರ ಪುರಾಗತಸ್ಸ ಹನುಮಾನ್ನಿರ್ದಗ್ಧಲಂಕಾಪುರಃ? ॥(ಅಂ) ಬದ್ಧೋ ರಾಕ್ಷಸಸೂನುನೇತಿ ಕಪಿಭಿಃ ಸನ್ತಾಡಿತೋ ಭರ್ತ್ಸಿತಃ। ಸವ್ರೀಡಾತ್ತಪರಾಭವೋ ವನಮೃಗಃ ಕುತ್ರೇತಿ ನ ಜ್ಞಾಯತೇ ॥ —(ಹ.ನಾ)

ಅ॥ (ರಾ) ಎಲೋ ಕೋತಿ, ನೀನು ಯಾರು? (ಅಂ) ರಾಮರಾಜರ ಮನೆಯ ಸುದ್ದಿಯನ್ನು ತೆಗೆದುಕೊಂಡು ಹೋಗುವವನು. (ರಾ) ಹಿಂದೆ ಬಂದು ಲಂಕಾಪಟ್ಟಣವನ್ನು ಸುಟ್ಟ ಹನುಮಂತನು ಎಲ್ಲಿ ಹೋದನು? (ಅಂ) ಇಂದ್ರಜಿತುವಿನಿಂದ ಕಟ್ಟಿಸಿಕೊಂಡನೆಂದು ಕಪಿಗಳೆಲ್ಲ ಹೊಡೆದು ಬೆದರಿಸಿದ್ದರಿಂದ ಸೋತು ನಾಚಿಕೆಯಿಂದ ಆ ಕಾಡುಕೋತಿ ಎಲ್ಲಿಗೆ ಹೋಯಿತೋ ಕಾಣೆ.

ಷ॥ ಎಂದ ನುಡಿಗಳ ಕೇಳಿ, ತಂದೆಯ। ಕೊಂದ ಪಗೆಯಂ ತೀರಿಸಲು ರಘು। ನಂದನನ ಕರೆತಂದು ಕಪಟದ ರಾಯಭಾರದಲಿ ॥ ಬಂದೆ; ನಿಮಗಿಂದಾಪ್ತರೆನಗಿಲ್ಲೆಂದು ಪರಿಹಾಸ್ಯಕವ ರಚಿಸ। ಲಮಂದಕೋಪದೊಳಸುರಪತಿಗಿಂತೆಂದನಂಗದನು ॥ —(ರಾ.ಕ.ಕು)

ಟಿ॥ ಬಂದೆ—(ಎಲೊ ಅಂಗದನೆ) ನೀನು ಬಂದಿದ್ದಿ. ನಿಮಗಿಂದ—ನಿಮಗಿಂತ.

ನಾಯಕಿ — ಏಕತಾಳ

ರಾವಣ ನೀ ಕೇಳೊ ಕೇಳೊ। ಜೀವದಾಸೆಯನ್ನು ತಾಳೊ ॥ ಪ ॥ ಕಪಿಲಸಿದ್ಧ ಬಳಿಗೆ ಹೋಗಿ। ಅಪರಿಮಿತದ ಪೆಟ್ಟ ತಿಂದು ॥ ತಪಿಸಿ ಕರುಳ ಖಂಡವ ಕಾರಿ । ಗುಪಿತಿಲ್ಲದೋರಲಿದವನೆ ॥ ೧ ॥ ನರಪತಿಮಾಂಧಾತರಾಯನ। ಸಿರದೆ ಕೆಣಕಿ ಹೀನಾಗಿ ॥ ಭರದೊಳವನ ಚಾಪದ ಹತಿಗೆ। ಸೊರಗಿದುದನು ಮರೆತೆಯೇನು? ॥ ೨ ॥ ಶ್ವೇತದ್ವೀಪದಬಲೆಯರಿಗೆ। ಸೋತಂಬುಧಿಗೊಗೆಸಿಕೊಂಡು ॥ ಕಾತರಿಸುತ ರೂಪವಳಿದ। ಖ್ಯಾತಿವಂತನಹುದೊ ನೀನು ॥ ೩ ॥

ಅಥವಾ ಎಷ್ಟು ಹೇಳಿ ಏನು ಪ್ರಯೋಜನ?

ಶ್ಲೋ॥ ಏಕಂ ಹೈಹಯಸಮ್ಭವಾತ್ಪರಿಭವಾನ್ಮ್ಲಾನಂ, ದ್ವಿತೀಯಂ ಪುನ। ರ್ದೈತ್ಯೇನ್ದ್ರಾವಿನಯಾತ್ತೃತೀಯಮಪಿ ಮೇ ತಾತಾಹಿತಾದ್ವೈಕೃತಾತ್, ॥ ಇತ್ಥಂ ತ್ವಚ್ಚರಿತೈಃ ಪಿತಾಮಹಮುಖಾನ್ಯೇಕಂ ವಿನೈವಾಭವನ್। ಸ್ವಚ್ಛೈಕಂ ನ ನಿಧೇಹಿ ದಾಶರಥಯೇ ದೇಯಾ ತ್ವಯಾ ಮೈಥಿಲೀ ॥ —(ರಾ.ಚಂ)

ಅ॥ (ಎಲೊ ರಾವಣನೆ) ಕಾರ್ತವೀರ್ಯನಿಂದಾದ ಅಪಜಯದಿಂದ (ಸೆರೆಗೆ ಸಿಕ್ಕಿದ್ದರಿಂದ) ಬ್ರಹ್ಮನ ಒಂದು ಮುಖವು (ತನ್ನ ವಂಶದಲ್ಲಿ ಹುಟ್ಟಿದವನಿಗೆ ಅಪಜಯವಾಯಿತೆಂದು) ಖಿನ್ನವಾಯಿತು. ಲೋಕವಿರುದ್ಧಾಚರಣೆಯ ರೂಪವಾದ ನಿನ್ನ ಅವಿನಯದಿಂದ ಎರಡನೆಯ ಮುಖವೂ

ಬಾಡಿತು. ಮೂರನೆಯದು ಕೂಡ ನನ್ನ ತಂದೆ ಮಾಡಿದ ವಿಕಾರದಿಂದ (ಬಾಲದಿಂದ ಕಟ್ಟಿ ಕಂಕುಳಲ್ಲಿ ಇಟ್ಟುಕೊಂಡದ್ದರಿಂದ) ಕಳೆಗುಂದಿತು. ಹೀಗೆ ನಿನ್ನ ನಡೆವಳಿಕೆಗಳಿಂದ ಬ್ರಹ್ಮನ ಮುಖಗಳಲ್ಲಿ ಒಂದು ಹೊರತು ಎಲ್ಲ ತೇಜೋಹೀನವಾದವು. ಆ (ಉಳಿದಿರುವ) ಒಂದಕ್ಕೂ ಮಸಿಯನ್ನು ಹಚ್ಚಬೇಡ. ಸೀತಾದೇವಿಯನ್ನು ಹಿಂದಕ್ಕೆ ರಾಮನಿಗೆ ಕೊಟ್ಟುಬಿಡು.

ಇದರಿಂದಾದ ಪರಿಣಾಮವೇನೆಂದರೆ—

✓ಕೀ॥ ಒಡೆಯನಾಜ್ಞೆಯಿಂ ರಾಕ್ಷಸರವನಸು । ಪಿಡಿಯೆ ಹೋಗಲವರನು ಹೊಡೆದು ॥ ಒಡನೆ ಲಂಘಿಸುತಾ ಪ್ರಾಸಾದವ। ನೊಡೆದು ತಿರುಗಿ ಬಂದನು ಜಡಿದು ॥

ಆಮೇಲೆ ವಾನರಸೇನೆ ಲಗ್ಗೆಯನ್ನು ಹತ್ತಲು —

ಶ್ಲೋ॥ಅತ್ಯಾಕುಲಂ ಹರಿಬಲೈರವಲೋಕ್ಯ ಲಙ್ಕಾಮ್।ದತ್ವಾರ್ಗಳೇಷು ದಶಕಣ್ಠಕಿಂಕರೇಷು ॥ ಆರಕ್ಷಕೈಸ್ತ್ವರಿತಮುತ್ಕರಾಜಧಾನ್ಯಾ । ಮುದ್ಘಾಟಿತಾಭಿರುಪಭಾವಿ ಕವಾಟಿಕಾಭಿಃ ॥ —(ರಾ.ಚಂ)

ಅ॥ ಕಪಿಸೇನೆಯು ಲಂಕೆಯನ್ನು ಮುತ್ತಿದ್ದನ್ನು ನೋಡಿ ರಾವಣನ ಭಟರು ಊರ ಬಾಗಿಲುಗಳ ಅಗಣಿಗಳನ್ನು ಹಾಕುತ್ತಿರಲು ಯಮಪುರದ ಬಾಗಿಲ ಕಾಯುವವರು ಬೇಗ ಬೇಗ ಎಲ್ಲ ಬಾಗಿಲುಗಳನ್ನೂ ತೆರೆದಿಟ್ಟರು.

ಆಗ ವಾನರರಿಗೂ ರಾಕ್ಷಸರಿಗೂ ದ್ವಂದ್ವಯುದ್ಧ ನಡೆದದ್ದೆಂತೆಂದರೆ.—

✓ರ॥ ಯುದ್ಧವಾಯಿತು ವಾನರದೈತ್ಯರೊಳು । ಒದ್ದದ್ದೇಷದೊಳು ॥ ಪ ॥ ಸುರಪಜಿದಂಗದನನು ನೋಡುತ್ತಲೆ। ಭರದಿಂದಲಿ ಗದೆಯನು ಬೀಸಲು ಸಲೆ। ಅದ ಸಹಿಸದೆ ಅಂಗದನಾ ಕ್ಷಣದೊಳು।ಒದೆಯುತವನ ರಥವನು ಪುಡಿಗುಟ್ಟಲು। ಜಂಬುಮಾಲಿ ಶಕ್ತಿಯ ಬಿಡೆ ಹನುಮಗೆ। ಜಂಭಗೆಡಿಸೆ ಹನುಮನು ರಕ್ಕಸಿಗೆ। ನಳನ ಮೇಲೆ ಪ್ರತಪನು ಬಾಣವ ಬಿಡೆ। ನಳನಿರಿತದೊಳವನೆರಡುಂ ಕಣ್ಕಿಡೆ। ತೆರೆದ ಬಾಯೊಳೇ ಬರುತಿಹ ಪ್ರಘಸನ। ತರಿಯಲು ಸುಗ್ರೀವನು ಬಾಯ್ಬಿಟ್ಟನ। ವೈಂದನ ಮುಷ್ಟಿಯು ವಜ್ರಮುಷ್ಟಿಯನು । ಅಂದವಿ ಕಾಣಿಸಿತಾಗಲೆ ನೆಲವನು। ನೀಲನ ಮುಂದೈದಿರ್ದ ನಿಕುಂಭನು। ಸೋಲುತಂದು ರಣದೊಳು ಸೈಗೆಡೆದನು। ದ್ವಿವಿದನು ಬೆಟ್ಟವನಿಟ್ಟುದ ಕಂಡು । ಜವದಶನಿಪ್ರಭ ತಾ ಮುಂಕೊಂಡು । ಸಿಡಿಲಂತಿಹ ಬಾಣವ ಬಿಡ ನೋಡಿ । ಕೆಡಹಿದನವನನು ಮರವಿಟ್ಟಾಡಿ ॥

ಆ ಸಮಯದಲ್ಲಿ ರಾತ್ರಿಯಾದರೂ ಯುದ್ಧವು ನಡೆದೇ ನಡೆಯುತ್ತಿದೆ—

✓ರ॥ ಕತ್ತಲೊಳಗೆ ಕಾಣದೆ ಕಪಿವೀರರು। ಕುತ್ತಿ ತಮ್ಮವರನೇ ತಿನ್ನುವರು।ರಕ್ಕಸರೂ ಕಪಿ ಇವನೆಂದೆನ್ನುತ।ಕುಕ್ಕಿ ಕೊಲ್ಲುವರು ತಮ್ಮವರನೆ ತಾವ್। ಒಬ್ಬರನೊಬ್ಬರು ನುಂಗುವರಲ್ಲಿ।ಬೊಬ್ಬೆ ತುಂಬಿದುದು ಮೂಜಗದಲ್ಲಿ।ಅಷ್ಟರೊಳೆದ್ದಿತು ಕುದುರೆಯ ಧೂಳಿ।ನೆಟ್ಟನೆ ಕಣ್ಕಿವಿಗಳ ಸೆರೆ ಹೂಳಿ।ರಾಮಮೋಘದಿಂ ಬರೆ ಬಾಣದ ಮಳೆ। ನೇಮದಿಂದ ಸಡಗಲು ರಕ್ಕಸರಿಳೆ।ಕ್ಷಣಮಾತ್ರದಿ ರಣರಂಗದೊ

ಳಾಗಲೆ। ಸೇನಾನಿಗಳು ಕೂಡಿರೆ ರಕ್ತದ ಹೊಳೆ। ಅಂಗದ ಕೈಯಿಂದಪ್ಪಳಿಸುತ್ತ। ಭಂಗಿಸಲಿಂದ್ರಜಿತುನ ಸಲಿಯುತ್ತ । ಹೊಗಳಿತಂಗದನ ದೇವವೃಂದ । ಬಗೆದ ನುಸು ರಾಮನು ಸಲಿಪಿಂದ ॥

ಆಗ ಇಂದ್ರಜಿತು ಅದೃಶ್ಯನಾಗಿ—

✓ಸಾ॥ ಸುರಪಶತ್ರು ತಾ ಸಿಡಿಲಂದದ ಭಾ। ಸ್ವರಸರ್ಪಾಸ್ತ್ರಗಳನ್ನು॥ಇರದೆ ಹೂಡಿ ಬಂಧಿಸಿದನಾಗ ರಘು। ವರನನು ಲಕ್ಷ್ಮಣನನ್ನೂ ॥

ಇದನ್ನು ನೋಡಿ ವಾನರರೆಲ್ಲ ಗಾಬರಿಯಾಗಿದ್ದಾರೆ. ಆದರೆ ಆಗಿನ ನಿಜಸ್ಥಿತಿಯನ್ನು ಕವಿ ವರ್ಣಿಸಿರುವದೇನೆಂದರೆ—

ಕಂ॥ ದುರುಳದಶಾನನನಾತ್ಮಜ । ನರಿಯದಿರಲ್ನಾಗಬಾಣಮುರಿಯದೆ? ಲಕ್ಷ್ಮೀ। ವರನನೆಸಲ್ರಾಂ ಮುನ್ನಿನ। ಪರಿಯೊಳ್ಪರ್ಯಂಕಮಾಗೆ ಶೋಭಿಸಿತಾಗಳ್॥ —(ಹ.ರಾ)

ಅದನ್ನೇ ಮತ್ತೊಬ್ಬ ಕವಿ ವರ್ಣಿಸಿರುವದೆಂತೆಂದರೆ—

ಷ॥ ಉರಗಪತಿಪರ್ಯಂಕನಾಗಿಹ । ಹರಿಗೆ ಭಯವೇ? ಮತ್ತದಲ್ಲದೆ । ಗರುಡಕೇತನಬಿರುದಿನವನಳುಕುವನೆ ಹುಲುಫಣಿಗೆ? ॥ ಪುರಮಥನದತ್ತಾಸ್ತ್ರಪ ಸಿರಾ । ಕರಿಸಬಾರದೆನುತ್ತ ಮಾಯೆಯ। ಮರೆವೆಯಿಂದೊರಗಿರ್ದನಿನಕುಲರಾಜ ಶೇಖರನು ॥ —(ರಾ.ಕ.ಕು)

ಈ ಜಯದಿಂದ ಸಂತುಷ್ಟನಾದ ರಾವಣನು ಸೀತೆಯ ಕಾವಲಿಗರಾದ ಹೆಂಗಸರನ್ನು ಕರೆಯಿಸಿ ಸೀತೆಯ ಪರಿಸ್ಥಿತಿಯನ್ನು ವಿಚಾರಿಸಿದಾಗ ಅವರು ಹೇಳಿದ್ದೇನೆಂದರೆ—

ಷ॥ ಆಗುಳಿಕೆಯಲಿ, ಸೀನಿನಲಿ, ನಡೆ । ವಾಗ, ನುಡಿವಾಗಲಸಿಕೆಗಳಲಿ,। ತಾಗುಗಳಲೆಡಹುಗಳಲೆಚ್ಚರಿಕೆಯಲಿ, ಮರವೆಯಲಿ, ॥ ಜಾಗರದಲಿ, ಸುಷುಪ್ತಿಯಲಿ, ಸಂ। ರಾಗದಲಿ, ಚಿಂತೆಯಲಿ ರಘುಕುಲ। ಸಾಗರನ ನೆನಹಲ್ಲದಿಲ್ಲನ್ಯತ್ರ ಗತಿ ಸತಿಗೆ ॥ —(ತೊ.ರಾ)

ಆಗ ರಾವಣನಪ್ಪಣೆಯಂತೆ ಆ ಸ್ತ್ರೀಯರು ಸೀತೆಯನ್ನು ಪುಷ್ಪಕವಿಮಾನದಲ್ಲಿ ಕೂಡಿಸಿಕೊಂಡು ರಣಭೂಮಿಗೆ ತಂದು ರಾಮಲಕ್ಷ್ಮಣರು ಮೃತರಾದರೆಂದು ತೋರಿಸಿದಾಗ ಸೀತೆ ದುಃಖಿಸುತ್ತಾಳೆ—

ಧನ್ಯಾಸಿ—ಏಕತಾಳ

ಏನ ಗೈವೆ। ಏನನಿನ್ನಾಡುವೆ। ಹೀನಭಾಗ್ಯಳಾದೆನು ನಾ ॥ ಪ ॥ ಪ್ರಾಣನಾಥ ತನ್ನನುಜನೊಡನೆ ತಾ। ಹಾಸಿಹೊಂದಿಹುದ ಕಾಣುವೆನಲ್ಲ! ॥ ಅ.ಪ ॥ ಸುತರ ಪಡೆವೆಯೆಂದು। ಹಿತದಿ ಶಾಸ್ತ್ರಜ್ಞರು। ಸತತವೆನ್ನಯ ಮುಂದೆ ಕಥಿಸಿದುದು ॥ ಗತಿಗೆಟ್ಟು ಹೋಗುತ್ತೀ। ಪತಿತೆಗೆ ವೈಧವ್ಯ। ಸ್ಥಿತಿಯ ತಂದಿತ್ತುದೆ? । ಅತಿಕಷ್ಟ ಹಾ! ಹಾ! ॥ ೧ ॥ ಪತಿಯೊಡನೆನಗೆ ಈ। ಕ್ಷಿತಿಯ ಪಟ್ಟಾಭಿಷೇಕ। ವ್ರತವಪ್ಪುದೆಂಬ ನುಡಿ ಹೋಯಿತಯ್ಯೋ! ॥ ಕ್ಷಿತಿಯ ಮರರನೀಗ। ಮತಿಗೇಡಿಗಳ ಮಾಡಿ। ಹತಭಾಗ್ಯಳಾದ ನಾನು। ಪತಿತಳಾದೆನೆ ಹಾ! ಹಾ! ॥ ೨ ॥ ಎನಗಾಗಿ

ಪತಿದೇವ। ವನವನೆಲ್ಲವ ಸುತ್ತಿ। ಘನಕಷ್ಟವನು ಪಟ್ಟು। ಹುಡುಕುತಿನ್ನ॥ವನಧಿಯು ದಾಂಟಿ ಬಂದ। ಘನವುಹಿಮುಗೆ ಈ । ದನುಜನಿಂದಪಜಯುವೆ?। ಎನಗೆ ತೋರದು ಹಾ! ಹಾ! ॥ ೩ ॥

ಆಗ ತ್ರಿಜಟೆಯು ಸೀತೆಗೆ ಸಮಾಧಾನವನ್ನು ಹೇಳುತ್ತಾಳೆ—

✓ದಿಂ॥ ಇವರು ತೇಜಗುಂದಿಲ್ಲ ಮಾತ್ರವಲ್ಲ। ಜವದಿ ನಿನ್ನಂ ಪುಷ್ಪಕವು ಕೆಡವಲಿಲ್ಲ ॥ ಇವನು ನೋಡಲ್ಕೀಸೀಗ ವಿಧವೆಯಲ್ಲ। ಸುವಿಮಲಾಂಗೀ ಕೇಳ್ಳುಃಖಿ ವಿನ್ನು ಸಲ್ಲ ॥

ಟಿ॥ ಇವನು—ಈ ಲಕ್ಷಣಗಳನ್ನು.

ಹೀಗೆ ಹೇಳಿ ಸೀತೆಯನ್ನು ಕರೆದುಕೊಂಡು ಹೋಗುತ್ತಿರುವಷ್ಟರಲ್ಲಿ ಆ ಸ್ಥಲಕ್ಕೆ ಗರುಡನು ಬಂದನು—

ಷ॥ ಆ ಸುಪರ್ಣನ ಗರಿಯು ಗಾಳಿಗೆ । ಸೂಸಿದವು ಸಪ್ತಾಂಬುನಿಧಿ; ಕೈ। ಲಾಸಮಂದಿರಮೇರುವಿಂಧ್ಯಾದ್ರಿಗಳು ಮುಗ್ಗಿದವು; ॥ ವಾಸುಕಿಯು ತಕ್ಷಕನನಂತನ। ವೈರಿಯು ನಡುಗುತಿರೆ ಬಣಗು ಬಿ। ಲೇಶಯಂಗಳ ಕಾಣೆಸಿದಿರಿನೊಳುರಗ ಮರ್ದನನ ॥ —(ತೊ.ರಾ)

ಟಿ॥ ತಕ್ಷಕನ+ಅನಂತನ. ಬಿಲೇಶಯಂಗಳ—ಹಾವುಗಳನ್ನು.

ವಾನರರು ಮತ್ತೆ ಗರಿಗಟ್ಟಿಕೊಂಡದ್ದನ್ನು ನೋಡಿ ರಾವಣನು ಮದಾಂಧರಾದ ಭಟರೊಡನೆ ತಾನೇ ರಣರಂಗಕ್ಕೆ ಬಂದು ಸುಗ್ರೀವನೇ ಮೊದಲಾದವರನ್ನು ದಿಕ್ಕುಗೆಡಿಸುತ್ತಿರುವಾಗ ಹನುಮಂತನು ಎದುರಿಗೆ ಬಂದು ನಿಲ್ಲಲು ಅವರಿಬ್ಬರಿಗೂ ನಡೆದ ಸಂಭಾಷಣೆಯೇನೆಂದರೆ—

✓ಕೀ॥ (ಹ) ಎಲೆ, ನಿನ್ನವಧ್ಯವಾಗಿಹ ವರವದು । ನೆಲೆಗೊಳ್ಳದು ಕಪಿಗಳ ಮುಂದೆ ॥ (ರಾ) ಹುಲುಕಪಿ ಗುದ್ದುತ್ತೆನ್ನನು ನಿನ್ನಯ । ಬಲವ ತೋರೆಲ್ಲೈ ಬಲುಹಿಂದೆ ॥

ಟಿ॥ ಅವಧ್ಯವಾಗಿಹ ವರ—ಯಾರಿಂದಲೂ ಮರಣವಿಲ್ಲವೆಂಬ ವರ. ಬಲುಹಿಂದೆ—ಶೌರ್ಯದಿಂದ.

ಆಗ ಹನುಮಂತನು ಒಂದು ಗುದ್ದು ಕೊಡುತ್ತಲೆ ರಾವಣನು—

ಷ॥ ಹಾರಿಬಿದ್ದನು ನೆಲಕೆ; ರಕುತವ। ಕಾರಿ ಕಾರಿದು ತೊಳಲಿ ಕಣ್ಣೆವೆ । ಜಾರಿದವು ನೇತ್ರೇಂದ್ರಿಯುದ ಕಳಕಳದ ಝೂಂಪಿಸಲಿ;॥ ಗೂರುಮುಸಗಿತು; ಸಾಪ ಸರ್ಪನ। ತೋರಿಕೆಯು ರುಚಿಯಂತೆ ಚಲಿಸಿದ । ವೇರಿಳಿವ ಜೀವದಲಿ, ಕೈಕಾಲ ಸುರವಲ್ಲಭನ ॥ —(ತೊ.ರಾ)

ಅದರಿಂದ ಚೇತರಿಸಿಕೊಂಡ ರಾವಣನು ಹನುಮಂತನನ್ನು ಹೊಗಳಲು ಹನುಮಂತನು ಹೇಳುತ್ತಾನೆ—

ಶ್ಲೋ॥ ಧಿಗಸ್ತು ಮಮ ವೀರ್ಯಸ್ಯ ಯತ್ತ್ವಂ ಜೀವಸಿ ರಾವಣ॥
—(ಶ್ರೀ.ರಾ)

ಅ॥ ಹೆ, ರಾವಣ, ನೀನು ಬದುಕಿರುವದರಿಂದ ನನ್ನ ವೀರ್ಯಕ್ಕೆ ಧಿಕ್ಕಾರವಿರಲಿ.

ಆಮೇಲೆ ಹನುಮಂತನಪೇಕ್ಷೆಯಂತೆ ರಾವಣನೂ ಒಂದು ಗುದ್ದನ್ನು ಹಾಕಿದನು. ಹನುಮಂತನು ಅದರಿಂದ ಚೇತರಿಸಿಕೊಂಡು ರಾವಣನೊಡನೆ ಭಯಂಕರವಾದ ಯುದ್ಧವನ್ನು ಮಾಡಿದನು. ಅಷ್ಟರಲ್ಲಿ ವಿಭೀಷಣನು ಕಣ್ಣಿಗೆ ಬೀಳುತ್ತಲಿ—

~ ಸಾ॥ ಖಳನು ಕನಲಿ ಶಕ್ತಿಯನಿಡಲನುಜನ। ಗಳಿಲನೆ ಲಕ್ಷ್ಮಣನಾಗ ॥
ಸಲಹಲವನ ತಾನೆದೆಗೊಟ್ಟನರಿಂ। ತಳೆದನು ಮೂರ್ಛೆಯ ಬೇಗ ॥

ಲಕ್ಷ್ಮಣನ ಪರಹಿತತ್ವವು ಎಷ್ಟು ಶ್ಲಾಘ್ಯವಾಗಿದೆ!

ಇರಲಿ. ಲಕ್ಷ್ಮಣನನ್ನು ಪಟ್ಟಣಕ್ಕೊಯ್ಯಬೇಕೆಂದು ರಾವಣನು ತನ್ನ ಹತ್ತು ಕೈಗಳಿಂದೆತ್ತಿದರೂ ಆಗಲಿಲ್ಲ—

ಶ್ಲೋ॥ ಹಿಮವಾನ್ಮಂದರೋ ಮೇರುಸ್ತ್ರೈಲೋಕ್ಯಂ ವಾ ಸಹಾಮರೈಃ।
ಶಕ್ಯಂ ಭುಜಾಭ್ಯಾಮುದ್ಧರ್ತುಂ ನ ಶಕ್ಯೋ ಭರತಾನುಜಃ ॥ —(ಶ್ರೀ.ರಾ)

ಅ॥ ಹಿಮಾಲಯ, ಮಂದರ, ಮೇರು, ಮೂರುಲೋಕ—ಇವುಗಳನ್ನಾದರೂ ದೇವತೆಗಳೊಡನೆ ಭುಜಗಳಿಂದ ಎತ್ತಿಬಿಡಬಹುದು! ಲಕ್ಷ್ಮಣನನ್ನೆತ್ತುವದಾಗುವದಿಲ್ಲ. (ಅವನು ಸರ್ವವನ್ನು ಹೊತ್ತಿರುವಂಥ ಸರ್ವಶಕ್ತಿಸ್ವರೂಪನಾದಂಥ ಆದಿಶೇಷನ ಅವತಾರವಾದ್ದರಿಂದ)

ಅಷ್ಟರಲ್ಲಿ ಹನುಮಂತನು ಬಂದು ಲೀಲಾಮಾತ್ರದಿಂದ ಅವನನ್ನು ಎತ್ತಿಕೊಂಡು ಹೋಗಿ ರಾಮನ ಮುಂದಿಟ್ಟನು.

ಶ್ಲೋ॥ ವಾಯುಸೂನೋಃ ಸುಹೃತ್ವೇನ ಭಕ್ತ್ಯಾ ಪರಮಯಾ ಚ ಸಃ।
ಶತ್ರೂಣಾಮಪ್ರಕಂಪ್ಯೋಽಪಿ ಲಘುತ್ವಮಗಮತ್ಕಪೇಃ ॥ —(ಶ್ರೀ.ರಾ)

ಅ॥ ಹನುಮಂತನ ಮೇಲಿನ ಸ್ನೇಹದಿಂದಲೂ ಅವನ ಭಕ್ತಿಯಿಂದಲೂ ಶತ್ರುಗಳಿಗೆ ಅಲ್ಲಾಡಿಸುವದಕ್ಕೆ ಕೂಡ ಆಗದ ಲಕ್ಷ್ಮಣನು ಹನುಮಂತನಿಗೆ ಹಗುರವಾದನು.

ಲಕ್ಷ್ಮಣನನ್ನು ಹೀಗೆ ಭಂಗಿಸಿದನೆಂಬ ಕೋಪದ ಭರದಲ್ಲಿ ಹನುಮಂತನು ಹೋರಾಡಿದ್ದನ್ನು ನೋಡಿದರೆ—

ಶ್ಲೋ॥ ನ ಕಾಲಸ್ಯ ನ ಶಕ್ರಸ್ಯ ನ ವಿಷ್ಣೋರ್ವಿತ್ತದಸ್ಯ ಚ। ಶ್ರೂಯನ್ತೇ
ತಾನಿ ಕರ್ಮಾಣಿ ಯಾನಿ ಯುದ್ಧೇ ಹನೂಮತಃ ॥ —(ಶ್ರೀ.ರಾ)

ಅ॥ ಹನುಮಂತನು ಯುದ್ಧದಲ್ಲಿ ತೋರಿಸಿದ ಸಾಹಸಗಳನ್ನು ಯಮ, ಇಂದ್ರ, ವಿಷ್ಣು, ಕುಬೇರ—ಮೊದಲಾದವರ ಯುದ್ಧದಲ್ಲಿ ಕೂಡ ಕೇಳಿಲ್ಲ.

ಅಷ್ಟರಲ್ಲಿ ರಾಮನೇ ಯುದ್ಧಕ್ಕೆ ಬಂದು—

**ಕೇತಾರಗೌಳ—ಅಟತಾಳ**

ಹೊಡೆದಟ್ಟಿದನು ರಾಘವ। ರಾವಣನನ್ನು ॥ ಪ ॥ ಬಿಡದೆ ದೈತ್ಯನು ರಥ। ಕಡರಿ ಗರ್ಜಿಸುತಿರೆ ॥ ಉಡುಪತಿಯ ಮಂಡಲವ ರಾಹುವು। ತುಡುಕುವಂದದಿ ಸಮುಖಕೈತರೆ ॥ ಅ.ಪ ॥ ಕಂಡು ಶ್ರೀರಾಮನು। ದ್ದಂಡಮಾರುತಿಯ ಮೇ। ಲ್ಮಂಡಿಸಿ ಶರಚಾಪ। ಗೊಂಡು ಕೋಪದಿ ಬಹು ॥ ಕಾಂಡಂಗಳೆಸೆಯಲಾಗ।

ರಾವಣ ಖತಿ । ಗೊಂಡು ಕತ್ತರಿಸಿ ಬೇಗ।ದಿವ್ಯಾಸ್ತ್ರಗ।ಳ್ಕೊಂಡು ರಾಘವನನ್ನಾಗ। ನೋಯಿಸಿ ಮತ್ತಾ ॥ ಚಂಡಮೂರುತಿದೇಹದೊಳು ಪೊಸ। ಕಾಂಡಗಳ ನಾಟಿ ಸಲು ಬಹುಖತಿ। ಗೊಂಡು ರಾಘವನಪನಲಿಹ ಕೋ। ದಂಡಗಳ ಕತ್ತರಿಸಿ ಸಿಮು ಷದಿ ॥ ೧ ॥ ದುರುಳ ದೈತ್ಯನ ರಥ। ತುರಗ ಸಾರಥಿ ಧ್ವಜ । ಪರಭತ್ರುಚಮು ರಾದಿ। ಬಿರುದುಗಳನು ದಶ ॥ ಶಿರದ ಕಿರೀಟಂಗಳ। ದೇಹದೊಳಿರ್ದ। ನಿರುಪಮಾ ಭರಣಂಗಳ । ನೂತನವಾದ । ವರವಸ್ತ್ರಜಾಲಂಗಳ । ಆಯುಧಗಳ ॥ ತರಿದು ಚೂರ್ಣೀಕರವ ಮಾಡುತ। ನೆರೆ ದಿಗಂಬರನಂತೆಗೆಯ್ಯಲು। ಸುರಸತಿಯರಂಬರದ ಮುಸುಕಿಲಿ । ಕಿರುನಗೆಯ ಸೂಸುತ್ತ ನಲಿಯಲು ॥ ೨ ॥ ಖೂಳ ನಾರೆಲೆ ನೋಡು। ನಾಳೆ ನಮ್ಮಯ ಸತ್ತ್ವ । ಪೇಳಿಗೆಯುನ್ನು ಈ। ಕಾಲದೊಳ್ನಿನ್ನನು ॥ ಪಾಲಿಪೆ ಬಲಹೀನನು। ನೀನಾಗಿರೆ। ಕಾಳಗವೆಂತು ನಾನು। ಗೆಯ್ಯುವೆ ಅನು। ಕೂಲವನೊಂದಿ ನೀನು। ಐತರಲಿನ್ನು ॥ ಮೇಲೆ ಪರಿಕಿಸು ನಮ್ಮವರ ಶರ। ಜಾಲ ಶಕ್ತಿಯ ನಿಮ್ಮವರ ಸಹ। ಮೂಲಸಹಿತಲೆ ತಂದು ತೋರಿಸು। ಖೂಳ ಬೇಗನೆ ತೆರಳೆನುತ್ತಲಿ ॥ ೩ ॥ —(ದಾ)

**ಹೀಗೆ ರಾವಣನನ್ನು ಹಿಮ್ಮೆಟ್ಟಿಸಿ ರಾಮನು ಪಾಳೆಯಕ್ಕೆ ಹಿಂದಿರುಗಿ—**

ಶ್ಲೋ॥ ಧೃತ್ವಾಙ್ಕೇಽನುಜಮುಬ್ರವೀದ್ರಣಭುವಿ ಶ್ರೀರಾಮಚನ್ದ್ರಃ ಸಖೇ । ತ್ವಂ ಗನ್ತಾಸಿ ಪರತ್ರ; ಯಾಸ್ಯಹಮಪಿ ಪ್ರಸ್ಥಾನಕೃತ್ಯೋದ್ಯತಃ; ॥ ಸೀತಾ ಮದ್ವಿರಹಾನ್ಮೃತೈವ; ಕಪಯೋ ಯಸ್ಯಾನುಗಾ ಭಕ್ತಿಮಾನ್ । ಕಸ್ಯ ದ್ವಾರಿ ವಿಭೀಷಣಸ್ತು ವಿಮನಾಸ್ತಿಷ್ಠೇದಯೇ ದೀನವತ್? ॥ —(ಹ.ನಾ)

**ಅ॥ ತಮ್ಮನನ್ನು ತೊಡೆಯಮೇಲಿಟ್ಟುಕೊಂಡು ರಣರಂಗದಲ್ಲಿ ರಾಮಚಂದ್ರನು "ಲಕ್ಷ್ಮಣ, ನೀನು ಪರಲೋಕಕ್ಕೆ ಹೋದೆ; ನಾನು ಕೂಡ ಸನ್ನಾಹಮಾಡಿಕೊಂಡು ಪ್ರಯತ್ನಮಾಡಿ ಬರುತ್ತೇನೆ; ನನ್ನ ವಿರಹದಿಂದ ಸೀತೆಯು ಸತ್ತಂತೆಯೇ; ಭಕ್ತಿವಂತನಾದ ವಿಭೀಷಣನು ತನ್ನ ಅನುಚರರಾದ ಕಪಿಗಳೊಡನೆ ಯಾರ ಬಾಗಿಲಲ್ಲಿ ದುಃಖದಿಂದ ದೀನನಾಗಿ ನಿಲ್ಲಬೇಕು?" ಎಂದನು.**

**ಎಂದು ಹಂಬಲಿಸುತ್ತ ಹನುಮಂತನನ್ನು ಕೂಗುತ್ತಲೆ ಅವನು —**

ಶ್ಲೋ॥ ಪಾತಾಲತಃ ಕಿಮು ಸುಧಾರಸಮಾನಯಾಮಿ? । ನಿಷ್ಪೀಡ್ಯ ಚನ್ದ್ರ ಮಮೃತಂ ಕಿಮು ವಾಹರಾಮಿ? ॥ ಉದ್ಯನ್ತಮ್ರಚಣ್ಡಕಿರಣಂ ಕಿಮು ವಾರಯಾ- ಮಿ? । ಕೀನಾಶಪಾಶಮನಿಶಂ ಕಿಮು ಚೂರ್ಣಯಾಮಿ ? ॥ —(ಹ.ನಾ)

**ಅ॥ ಪಾತಾಲದಿಂದ ಅಮೃತವನ್ನೆತ್ತಿಕೊಂಡು ಬರಲೆ? ಚಂದ್ರನನ್ನು ಹಿಡಿದು ಅಮೃತವನ್ನು ಹಿಂಡಿಕೊಂಡು ಬರಲೆ? ಹುಟ್ಟುವ ಸೂರ್ಯನನ್ನು ಹಿಂದಕ್ಕೆ ನಿಲ್ಲಿಸಲೆ? ಯಮಪಾಶಗಳನ್ನೆಲ್ಲ ಚೂರುಚೂರು ಮಾಡಿಬಿಡಲೆ?**

**ಎನ್ನುತ್ತಲೇ—**

✓ಕೀ॥ ತರಹೇಳಲು ಸಂಜೀವಕರಣಿಯನು। ಭರದಿ ಸುಷೇಣನು ತಾನಾಗ ॥ ಗಿರಿಯನೆ ತಂದಿಡೆ ಹನುಮನೌಷಧಿಯ । ಭರವೆಬ್ಬಿಸಿತವನನು ಬೇಗ ॥

ಇದರಿಂದ ಸರ್ವರಿಗೂ ಆನಂದವಾಗಿದೆ. ಅತ್ತ ಸೋತು ಹೋದ ರಾವಣನು ಕುಂಭಕರ್ಣ ನನ್ನೆಬ್ಬಿಸಿರೆಂದಾಜ್ಞೆ ಮಾಡಿದ್ದಾನೆ. ಆಗ—

✓ ರ॥ ಸೆರೆದರು ರಾಕ್ಷಸರಗಣಿತ ಜನರು । ಧರೆ ಕಂಪಿಸೆ ಕಿವಿಯೊಳು ಕೂಗಿದರು । ಪರಿಪರಿ ವಾದ್ಯವ ಘೋರ್ಗೈಸಿದರು । ಅರಿತ ಯತ್ನವೆಲ್ಲವ ಮಾಡಿದರು । ಆನೆಯ ತಂಡಗಳಿಂ ತುಳಿಸಿದರು । ದಾನವನನು ಹೊಡೆದಪ್ಪಳಿಸಿದರು । ಸಾವಿರ ಭೇರಿಯನೊಮ್ಮೆಯೆ ಹೊಡೆದರು । ಗಾವಿಲರವನನು ದಂಡದಿ ಜಡಿದರು । ಚುಚ್ಚಿದರಾ ಖಳನವಯುಗಳನು । ಕಚ್ಚಿದರಾ ದುಷ್ಟನ ಕಿವಿಗಳನು । ತಣ್ಣೀರನು ಸುರಿದರು ಮೈಮೇಲೆ । ಗೆಣ್ಣು ಮುರಿಯಲಿರಿದರು ಬಹುವೇಳೆ । ಬಿಡದೆ ಹೇರಿದರು ಗಿರಿಶಿಖರಗಳ । ಬಡಿದು ಮುಗಿಸಿದರು ತರುಜಾಲಗಳ ॥

ಇದರಿಂದ ಹೇಗೊ ಎಚ್ಚತ್ತ ಕುಂಭಕರ್ಣನು ಅಣ್ಣನ ಆಸ್ಥಾನಕ್ಕೆ ಬರುತ್ತಲೆ ರಾವಣನು ತನ್ನ ಹೀನದೆಶೆಯನ್ನು ಹೇಳಿಕೊಂಡನು. ಆಗ ಕುಂಭಕರ್ಣನು ತಾನು ಹಿಂದೆ ಹೇಳಿದ ಉಪದೇಶದ ನೆನಪುಗೊಟ್ಟು ಹೇಳುತ್ತಾನೆ—

ಶ್ಲೋ॥ ನಾರೀಸ್ತನಭರನಾಭೀದೇಶಮ್। ದೃಷ್ಟ್ವಾ ಮಾಗಾ ಮೋಹಾವೇಶಮ್ ॥ ಏತನ್ಮಾಂಸವಸಾದಿವಿಕಾರಮ್। ಮನಸಿ ವಿಚಿನ್ತಯ ವಾರಂ ವಾರಮ್॥ —(ಚ.ಪಂ)

ಅ॥ ಸ್ತ್ರೀಯರ ಸ್ತನಗಳನ್ನೂ ನಾಭಿಯನ್ನೂ ನೋಡಿ ಮೋಹಾವೇಶಕ್ಕೆ ಒಳಗಾಗಬಾರದು. ಇವೆಲ್ಲ ಮಾಂಸ, ಕೊಬ್ಬು — ಮೊದಲಾದವುಗಳಿಂದ ಆದದ್ದೆಂದು ಮನಸ್ಸಿನಲ್ಲಿ ಬಾರಿಬಾರಿಗೂ ಯೋಚಿಸಬೇಕು.

ಶ್ಲೋ॥ ಯಃ ಪಶ್ಚಾತ್ಪೂರ್ವಕಾರ್ಯಾಣಿ ಕುರ್ಯಾದೈಶ್ವರ್ಯಮಾಸ್ಥಿತಃ । ಪೂರ್ವಂ ಚೋತ್ತರಕಾರ್ಯಾಣಿ ನ ಸ ವೇದ ನಯಾನಯಮ್ ॥ —(ಶ್ರೀ.ರಾ)

ಅ॥ ಯಾವನು ಐಶ್ವರ್ಯಮದದಲ್ಲಿದ್ದುಕೊಂಡು ಮೊದಲು ಮಾಡಬೇಕಾದ್ದನ್ನು ಆಮೇಲೆಯೂ ಆಮೇಲೆ ಮಾಡಬೇಕಾದ್ದನ್ನು ಮೊದಲೂ ಮಾಡುತ್ತಾನೊ ಅವನು ನೀತಿಯನ್ನೂ ಅನೀತಿಯನ್ನೂ ತಿಳಿದವನಲ್ಲ.

ಎಂದು ಹೇಳುತ್ತಿರುವಾಗಲೆ ಈ ತತ್ತ್ವೋಪದೇಶವು ತನಗೆ ಬೇಡವೆಂದು ರಾವಣನು ಬೇಸರಗೊಳ್ಳಲು ಅಣ್ಣನ ಕಾರ್ಯಕ್ಕಾಗಿ ಸಹಾಯಮಾಡುತ್ತೇನೆಂದು ತಮ್ಮನು ಯುದ್ಧಕ್ಕೆ ಹೊರಟಿದ್ದಾನೆ—

### ಆರಭಿ ಅಥವಾ ದರ್ಬಾರು—ಅಟತಾಳ

ಪೊರಮಟ್ಟನಾ ಕುಂಭಕರ್ಣ । ಕೋಪ । ವೆರಸುತಾರ್ಭಟಿಸುತ ಮುನ್ನ ॥ಪ॥ ದುರುಳವೃತ್ತಿಯೊಳಿರಲು ಹಿತವನು । ಒರೆಯಲನು ರುಚಿಕರವೆ ಮರುಳೇ?। ಮರಣಕಾಲಕೆ ದೊರೆಯದೌಷಧಿ । ಪರಿಕಿಸೆನ್ನಯ ಪರಿಯನೆನುತಲೆ ॥ ಅ.ಪ ॥ ವೀಳೆಯವನು ನೀಡು ಎನ್ನ । ಪೊಸ । ಕಾಳಗವನು ನೋಡು ಮುನ್ನ ॥ ಕೋಳುಗೊಂಬೆನು ಲೋಕವನ್ನ । ಕಪಿ । ಜಾಲವನರೆವೆನೀಗೆನ್ನ ॥ ಶೂಲಿ

ಯುದ್ಧೈಸಿದರು ಕೊಲುವೆನು | ಜಾಳುಗಳ ಹೇಳದಿರು ಮದನಗೆ | ಕೋಳುಹೋಗ ದಿರೆಂದೆನಲು ಕೋ | ಪಾಳಿ ಹೆಚ್ಚಿತು ಸಾಕೆಸುತ್ತಲೆ || ೧ || ಕಾಲನಾಗಲೆ ನಡು ಗಿದನು | ದೈತ್ಯ | ಕಾಲದಂಡವ ಕೊಳೆ ತಾನು || ಶೂಲಿಯು ವೈಮರೆದಿಹನು | ಮಹಾ | ಶೂಲವ ಧರಿಸೆ ರಕ್ಕಸನು || ಮೇಳವಿಸೆ ಮುಸುಕಿಕ್ಕಿದನು ಸುರ | ಪಾಲ; ಸುರಗಿಯ ಕಟ್ಟಿಬಿಟ್ಟುದು | ಪಾಳೆಯವು ಪದ್ಮಜನ ಬಳಿಯನು | ಗೋಳಿ ಡುತ ಸುರಜಾಲವೆಲ್ಲವು || ೨ || ದಾಂಟುತಿರ್ದನು ಪುರದೇಳು | ಸುತ್ತ | ಕೋಂಟೆಯ ನೊಂದೆ ಹೆಜ್ಜೆಯೊಳು || ನೋಟವಮಾತ್ರದಲಿ ಕಪಿಗಳು | ಎಲ್ಲ | ಓಟವಿಕ್ಕಿದರು ಭೀತಿಯೊಳು || ಮೂಟಲಿಳೆ ತಾಮ್ಮುಳಲನಭ್ರಕೆ | ಪಾಟಲಂಬುಧಿ ಧ್ರುವನ ಕರ್ಣದ | ಕೋಟರಂಗಳು ಕಿವುಡುಗೊಳೆ ಸೈ | ಶಾಟನಾರ್ಭಟಿಸುತ್ತ ಸಮರಕೆ || ೩ ||–(ದಾ)

**ಅವನು ಬಂದ ಸ್ಥಿತಿಯನ್ನು ಕವಿ ವರ್ಣಿಸಿರುವದೆಂತೆಂದರೆ—**

ಕಂ|| ಗರಿಯುಳ್ಳ ಗಿರಿಯೊ? ವಿಲಯದ | ಪುರಹರನೋ? ಕಾಳಕೂಟಮುಸು ರಾಕೃತಿಯಂ || ಧರಿಸಿರ್ಪುದೊ? ಎನೆ ದನುಜಂ | ಭರದಿಂ ಲಂಘಿಸುತೆ ಕೋಂಟೆ ಯಂ ನಡೆತಂದಂ || —(ಹ.ರಾ)

**ಮುಂದೇನಾಯಿತೆಂದರೆ—**

✓ದಿ|| ಕೆಡಹುತಂಗದನಂ ಕುಂಭಕರ್ಣನಾಗ | ಬಿಡದೆ ವಾನರರಂ ಬೀಳ ಹೊಯ್ದು ಬೇಗ || ತಡೆಯದಾ ಸುಗ್ರೀವನಿಗೆ ಮೂರ್ಛೆಯಿತ್ತು | ಒಡನೆ ಕೊಂಡೊಯ್ದಂ ಲಂಕೆಗನನ ಹೊತ್ತು ||

**ದಾರಿಯಲ್ಲಿಯೇ—**

ಷ|| ಮರನೆಯುಳಿದಂಗದನು ಖಳ ಪೈ | ಮರೆದು ನಡೆವುದ ಕಂಡು ಕಂಕುಳಿ | ಸಿರುಕಿನಿಂದುರೆ ನಡಿಲಿ, ನೆತ್ತಿಗೆ ನೆಗೆದು, ಕೈಗಳಲಿ || ಎರಡು ಕಿವಿಗಳ ಪಿಡಿದು, ಪಲುಗಳೊ | ಳಿರುಕಿ ನಾಸಾಪುಟವ ನೊಮ್ಮೆಯೆ | ಹರಿದು ನೆಗೆದೈತಂದು ರಾಮನಿಗಿತ್ತ ಕಾಣಿಕೆಯ || —(ರಾ.ಕ.ಕು)

✓ಕೀ|| ಕುಂಭಕರ್ಣನಿದರರಿವಿಲ್ಲದೆ ತಾಂ | ಜಂಘದಿಂದ ಪುರವನು ಪುಗಲು || ಕೊಂಬೂದಿದವಾ ಶೂರ್ಪನಖಿಯು ಬಹು | ಸಂಭ್ರಮದಿಂದಿದಿರಿಗೆ ಬರಲು ||

**ಮರುದಿನ ಅವನು ನಾಚಿಕೆಯಿಂದ ಕೋಪಿಸಿಕೊಂಡು ಮತ್ತೆ ಯುದ್ಧಕ್ಕೆ ಬಂದಾಗ—**

ಷ|| ಇದು ಸಮಯವೆಂದೆನುತ ರನ್ನದ | ಗದೆಯ ಕೊಂಡು ವಿಭೀಷಣನು ತಾ | ತ್ರಿದಶವೈರಿಯ ತಡೆಯೆ ವಿಲಯಕೃತಾಂತನೆಂದೆನಲು || ಉದಿತಮೋಹದೊ ಳವನ ರಾಮನ | ಪದವ ನಂಬಿ ನಿಜಾನ್ವಯಕೆ ತಿಲ | ದುದಕವೀವುದ ಕೋರ್ವ ನಾದರು ಬದುಕು ಹೋಗೆಂದ || —(ರಾ.ಕ.ಕು)

**ಮುಂದೆ ಕುಂಭಕರ್ಣನಿಗೆ ರಾಮನೊಡನೆ ಯುದ್ಧವು ನಡೆದಿದೆ—**

**ಆನಂದಭೈರವಿ—ಅಟತಾಳ**

ಆದುದಾ ಯುದ್ಧದೊಳಗಾಶ್ಚರ್ಯ | ರಾಘವನ ಚರ್ಯ || ಪ || ಖಳನು ಕಪಿಗಳ ವಧಿಸುತಲಿ ಬರೆ | ಬಲುಹಿನಿಂ ಮರುತಾಸ್ತ್ರದಿಂದಲಿ || ಬಲದ ತೋಳನು ಕೆಡಹೆ ರಾಮನು|ಸಿಲುಕಿ ಕಪಿಕುಲ ಒರಲಿತಾಕ್ಷಣ ||೧|| ಮರವ ತಂದಿಡಲೆಡದ ಕೈಯಲಿ | ಸುರಪನಸ್ತ್ರವ ನೊಗೆದು ರಾಮನು || ಧರದೊಳೆಡಭುಜವನ್ನು ಕಡಿದನು | ದುರುಳತನವನು ಮಟ್ಟುವಮಾಡಲು || ೨ || ಕಾಲಿನಿಂ ಕಪಿಗಳನು ಕೊಲ್ಲುತ | ಖೂಳನೈತರೆ ಕೋಪದಿಂದಲಿ || ಕಾಲವಿಕ್ರಮನವನ ಕಾಲಿನ | ಕೀಲುಗಳ ಖಂಡಿಸಿದನಾಗಲೆ || ೩ || ತಿಂಬೆನೆನ್ನುತ ತೆರದ ಬಾಯಿಂ | ಬೆಂಬಿಡದೆ ಬರಲಿಂದ್ರನಸ್ತ್ರದಿ || ಕಂಬುಕಂಠನ ಕತ್ತರಿಸೆ ಪುರ | ದಿಂಬಿನೊಳಗದು ಬಂದು ಬಿದ್ದಿತು || ೪ || ಸುರರು ಹೂಮಳೆಗರೆದರಾಗಲೆ | ಮೊರೆದುದೊಡನೆಯೆ ದೇವದುಂದುಭಿ||ಶರಣು ರಾಘವನೆಂದು ಪೊಗಳಿದ|ರರದೆ ಸಾತ್ತ್ವಿಕರಸ್ಸರೆಲ್ಲರು || ೫ ||

—(ದಾ)

**ಹಿಂದೆ ಲಕ್ಷ್ಮಣನು ಮೂರ್ಛೆಬಿದ್ದ ಕಾಲದಲ್ಲಿ ಹೆಮ್ಮೆಗೊಂಡಿದ್ದ ರಾವಣನು ಈಗ ಕುಂಭಕರ್ಣನ ಮರಣವಾಗುತ್ತಲೆ ನೆಲಕ್ಕಿಳಿದನು. ಹೀಗಾಗುವದೆಂದು ತಿಳಿದೇ ಭಗವದ್ಭಕ್ತರು ಪೀಠಿಕೆಯಲ್ಲಿ "ಜಯದಿಂದೊಮ್ಮೆ ಸಿರ್ಫಯುವು ತೋರಿದರೂ" ಎಂಬ ನುಡಿಯನ್ನು ಹೇಳಿರುವರು.**

**ಆಗ ರಾವಣನಾಜ್ಞೆಯಂತೆ ಇಂದ್ರಜಿತು ತನ್ನ ರಥದಲ್ಲಿ ಮಾಯಾಸೀತೆಯನ್ನು ಕೂಡಿಸಿಕೊಂಡು ಬಂದಿದ್ದಾನೆ—**

ಷ|| ಮಲಿನವಸನದ, ಮುಕ್ತಕೇಶದ, | ಗಳದ ಬಿಕ್ಕುಳಲಳುವ ವದನದ, | ತುಳುಕುತಿಹ ಕಂಬನಿಯ, ಧೂಳಿಡರಿದ ತನುಲತೆಯ, || ಅಳಲಿ ಬಳಲುತ ರಾಮನಾಮವ | ಹಲುಬುತಿಹ ಮಾಯಾವಧೂಟಿಯ | ಸೆಳೆದು ಮುಂದಲೆವಿಡಿದು ತೋರ್ದಿಂತೆಂದನನಿಲಜಗೆ || —(ರಾ.ಕ.ಕು)

✓ ಸಾ|| ಎಲೆ ಕಪಿ, ನಮುಚಪದೇಕೆಂದಾಕೆಯ | ತಲೆಗೊಯ್ಯಲು ಸುರವೈರಿ||
ಅಳಲುತ ಬಾದುಸುರಿದನಾ ರಾಮನ | ಬಳಿಯೊಳು ದೈನ್ಯವ ತೋರಿ ||

**ಈ ಸುದ್ದಿಯನ್ನು ಕೇಳುತ್ತಲೆ ರಾಮನು ಕೂಡ ದುಃಖಪಟ್ಟು ಹೇಳುತ್ತಾನೆ—**

ಶ್ಲೋ|| ಯತ್ನೋ ಮುಧಾ ಭವತಿ ಯತ್ರ ಸಮೀರಸೂನೋಃ | ನಾಲಂ ನಲೋಽಪಿ ನವಸೇತುನಿಬನ್ಧನಾಯ || ದೂರೇ ಚ ಪಾವಕಶರೋ ದುರತಿಕ್ರಮೋಽಯಮ್ | ತತ್ಕೇನ ಶೋಕಜಲಧಿಸ್ತವ ಲಙ್ಘನೀಯಃ || —(ರಾ.ಚಂ)

ಅ|| **ಹೆ, ಸೀತೆ, ನಿನ್ನ ಸಂಬಂಧವಾದ ದುಃಖವೆಂಬ ಸಮುದ್ರವನ್ನು ದಾಟುವದಕ್ಕೆ ಹನುಮನ ಪ್ರಯತ್ನವೂ ವ್ಯರ್ಥವಾಗುತ್ತದೆ; ಹೊಸ ಸೇತುವನ್ನು ಕಟ್ಟುವದಕ್ಕೆ ನಲನಿಂದಲೂ ಆಗುವದಿಲ್ಲ; ಆಗ್ನೇಯಾಸ್ತ್ರಕ್ಕಂತು ಇದು ಎಷ್ಟೋ ದೂರ; ದಾಟುವದಕ್ಕಾಗದ ಈ ಸಮುದ್ರವನ್ನು ಯಾರು ದಾಟಲಾದೀತು!**

ಎಂದು ದುಃಖಪರವಶನಾಗುತ್ತಿರುವಷ್ಟರಲ್ಲಿ ವಿಭೀಷಣನು ಬಂದು ಅದೆಲ್ಲಾ ಮಾಯೆಯೆಂದು ಸಂತಯಿಸಿ ಮುಂದಿನ ಕಾರ್ಯವನ್ನು ಹೇಳುತ್ತಾನೆ—

✓ ದಿಂ|| ಸುರಪವೈರಿ ನಿಕುಂಭಿಳೆಯೊಳೀಗ ತಾನು| ಚರಿಸುವಂ ಕೇಳ್ಮಾರಣದ ಯಾಗವನ್ನು || ಭರದೊಳಾ ಯಾಗಂ ಪೂರ್ಣಮಪ್ಪ ಮುನ್ನ| ತರಿಯಬೇಕವನಂ ಕಳೆದು ಹೋಗೆ ಬನ್ನ ||

ಆಗ ರಾಮನು ತಾನೇ ಸಿದ್ಧನಾಗಲು—

ಶ್ಲೋ|| ಯಸ್ತು ದ್ವಾದಶವರ್ಷಾಣಿ ನಿದ್ರಾಹಾರವಿವರ್ಜಿತಃ | ತೇನೈವ ಮೃತ್ಯುರ್ನಿರ್ದಿಷ್ಟಃ ಬ್ರಹ್ಮಣಾಸ್ಯ ದುರಾತ್ಮನಃ || —(ಅ.ರಾ)

ಅ|| ಯಾರು ಹನ್ನೆರಡು ವರ್ಷ ನಿದ್ರಾಹಾರಗಳನ್ನು ಬಿಟ್ಟಿರುವರೊ ಅವರಿಂದ ಮರಣವೆಂದು ಆ ದುರಾತ್ಮನಿಗೆ ಬ್ರಹ್ಮನ ವರವಿರುವದು.

ಎಂದು ಹೇಳಿ ವಿಭೀಷಣನು ಲಕ್ಷ್ಮಣನನ್ನು ಕಪಿಸೈನ್ಯದೊಡನೆ ಕರೆದುಕೊಂಡು ಬಂದು ಆ ನಿಕುಂಭಿಲಾದೇವಾಲಯವನ್ನು ತೋರಿಸುತ್ತಲಿ—

✓ ಕೀ|| ಕಪಿಗಳಾಗಲೇ ನುಗ್ಗಿ ರಾಕ್ಷಸರ | ಶಪಿಸಿ ಕೆಡಹುತಿರಲೊಳಗೈದಿ|| ತಪನಕುಲಜನಿಗೆ ತೋರಿ ವಿಭೀಷಣನುಪಕಾರವ ಗೈದನು ಮುದದಿ ||

ಆಗ ಹೋಮವನ್ನು ಕೈಬಿಟ್ಟಿದ್ದ ಇಂದ್ರಜಿತು ಚಿಕ್ಕಪ್ಪನಿಗೆ ಹೇಳುತ್ತಾನೆ—

ಶ್ಲೋ|| ಗುಣವಾನ್ವಾ ಪರಜನಃ ಸ್ವಜನೋ ನಿರ್ಗುಣೋಽಪಿ ವಾ | ನಿರ್ಗುಣಃ ಸ್ವಜನಃ ಶ್ರೇಯಾನ್ ಯಃ ಪರಃ ಪರ ಏವ ಸಃ || —(ಶ್ರೀ.ರಾ)

ಅ|| ಇತರರು ಗುಣವಂತರಾದರೂ ತನ್ನವರು ಗುಣಹೀನರಾದರೂ ಗುಣಹೀನರಾದ ತನ್ನವರೇ ಮೇಲು. ಇತರರು ಯಾವಾಗಲೂ ಇತರರೆ.

ಆದಕ್ಕೆ ವಿಭೀಷಣನ ಉತ್ತರ—

ಶ್ಲೋ|| ಕುಲೇ ಯದ್ಯಪ್ಯಹಂ ಜಾತೋ ರಕ್ಷಸಾಂ ಕ್ರೂರ ಕರ್ಮಣಾಮ್| ಗುಣೋ ಯತ್ಪ್ರಥಮೋ ನೃಣಾಂ ತನ್ಮೇ ಶೀಲಮರಾಕ್ಷಸಮ್ || —(ಶ್ರೀ.ರಾ)

ಅ|| ನಾನು ಕ್ರೂರಕರ್ಮಿಗಳಾದ ರಾಕ್ಷಸರ ಕುಲದಲ್ಲಿ ಹುಟ್ಟಿದ್ದರೂ ಮನುಷ್ಯರಿಗೆಲ್ಲ ಮುಖ್ಯವಾಗಿರಬೇಕಾದ ಅರಾಕ್ಷಸಗುಣವು ನನ್ನಲ್ಲಿದೆ.

ಈ ಮಾತು ನಡೆಯುವಾಗಲೇ ಲಕ್ಷ್ಮಣನು—

ವೃ|| ಪರಬಲಜೀವಮುಂ ತೆಗೆವಿನಂ ತೆಗೆದಂ ಡೊಣೆಯಿಂ ಮಹಾಸ್ತ್ರಮುಂ; | ತಿರುಪೆ ಕುಲಾಲಚಕ್ರಮೆನೆ ಭೂವಲಯಂ ತಿರುವನ್ನಮಸ್ತ್ರಮಂ || ತಿರುವಿದನು ಗ್ರವೈರಿಗೆ ಭಯಂ ತೊಡರ್ವನ್ನಮದಂ ತೊಡರ್ಚಿದಂ | ತಿರುವಿನೊಳಸ್ತ್ರಮಂ ಜಯವಧೂಸದನಂ ರಣರಂಗಭೈರವಂ || —(ಸು)

ಟಿ|| ತಿರುವನ್ನಂ—ತಿರುಗುವ ಹಾಗೆ.

ಆಗ ಇಂದ್ರಜಿತುವಿಗೂ ಲಕ್ಷ್ಮಣನಿಗೂ ನಡೆದ ಸಂಭಾಷಣೆಯೇನೆಂದರೆ—

### ನೋಟ್—ಧೀರಶಂಕರಾಭರಣ

(ಇಂ) ಬಾರೊ ಬಾರೊ ಲಕ್ಷ್ಮಣನೆ । ತೋರೊ ತೋರೊ ಸತ್ತ್ವವನೆ ॥ (ಲ) ನಿಲ್ಲೊ ನಿಲ್ಲೊ ಖೂಳನೆ ನಾ । ಕೊಲ್ಲುವೆ ನಿನಿಮಿಷದಿ ನಿನ್ನ ॥ (ಇಂ) ಬ್ರಹ್ಮಾಸ್ತ್ರದಲೊರಗಿದ್ದವನೇ। ಹೆಮ್ಮೆಯನಾಡುತ ಮೆರೆತಿಹನೆ ॥ (ಲ) ಬ್ರಹ್ಮಜನಕನವರೆಲೊ ನಾವು। ಬ್ರಹ್ಮಾಸ್ತ್ರದೊಳಪ್ಪುದೆ ನೋವು? ॥ (ಇಂ) ನಾಗಾಸ್ತ್ರದಿ ಕೆಡೆದಿದ್ದವನು । ಹೋಗದೆ ಮಾತೆಂತಾಡುವನು! ॥ (ಲ) ನಾಗಾರಿಯೆ ರಥನಾಗಿರುವ । ರಾಘವನಿರೆ ಗಣಿಪೆನೆ ಭಯವ? ॥ (ಇಂ) ಅಸಹಾಯಪರಾಕ್ರಮಿ ನಾನು । ಕುಶಲತೆಯನು ತೋರೆಲೊ ನೀನು ॥ (ಲ) ಅಸಹಾಯವು ದೈವವು ಮುಂದೆ। ವಸುಧೆಯ ಋಣ ತೀರಿತು ಇಂದೆ ॥ (ಇಂ) ಎನ್ನ ನಿಕುಂಭಿಳೆ ಯಾಗವನೆ। ಭಿನ್ನತಂತ್ರದಿಂ ಕೆಡಿಸಿದನೆ ॥ (ಲ) ನಿನ್ನ ಶಿರವರಿದು ದೇವಿಗೆ ನಾ। ಪೂರ್ಣಾಹುತಿ ಗೆಯ್ವೆನು ಮುನ್ನ ॥ (ಇಂ) ಎಲ್ಲಿಯು ನಿನ್ನ ಪರಾಕ್ರಮವು। ಇಲ್ಲಿಗೆ ಸರಿ ನಿನ್ನಾಯುಷವು ॥ (ಲ) ಖುಲ್ಲನೆ ನೋಡೀ ಮಾರ್ಗಣವುಂ। ಎಲ್ಲೆಲ್ಲಡಗಲು ಬಿಡದೀಗಂ ॥ —(ದಾ)

### ಆಗ ಇಂದ್ರಜಿತು ಅತ್ಯಂತರೋಷಾವೇಶದಿಂದ ಯುದ್ಧವನ್ನು ಹೂಡಿದ್ದಾನೆ—

### ಕಮಾಚು—ಆದಿತಾಳ

ಕಾದಿದನುರಿ। ಕನಲುತಲಮರಾರಿ । ಕಡುರೌದ್ರಾವೇಶದಿ ॥ ಪ ॥ ಭಾರಿ ವರೂಥವ। ಸೇರಿ ಧನುವಿಡಿದು । ತೂರುತಾಗ ಶರ । ವಾರವನುಗ್ರದಿ ॥ ಅ.ಪ ॥ ಮುಂದುವರಿವ ಕಪಿ । ಸಂದಣಿಯನು ತಡೆಮೆಟ್ಟಿ । ಕುಟ್ಟಿ । ಕಂದೆಸೆವದ್ರಿಸಮೂಹಗಳನು ಹುಡಿಗುಟ್ಟಿ ॥ ಬಂದ ಬಂದ ವೀರರ ಸಾಹಸಗಳ । ಸಂದಗೆಡಿಸುತೈತಂದು ಗರ್ಜಿಸುತ ॥ ೧ ॥ ಬರುತಲೆ ಕಂಡು ವಿಭೀಷಣನನು ಬಲ್ಮೊರೆದಾ । ಜರಿದಾ । ಅರರೆ ಪರರ ಕೂಡಿಹ ನೀ ಸ್ವಜನರ ಮರೆದ್ಯಾ ॥ ದುರುಳ ನಿನ್ನ ಮೊಗನೋಡುವದನುಚಿತ । ಪರಸೇವೆಗೆ ನಾಚದವನೆನುತ್ತಲೆ ॥ ೨ ॥ ಅನಿತರೊಳಾ ಸೌಮಿತ್ರಿಯು ನೋಡುತಲಾಗ । ಬೇಗ । ಮನದೊಳುಬ್ಬಿ ಬೊಬ್ಬಿಡುತೆಂದನು ಕೇಳೀಗ ॥ ಮನುಜಾಧಮ ನೀನೆನ್ನನು ಕೆಣಕಿದೆ । ತನುವಿನಾಸೆ ತೊರೆ ತಡವಿಲ್ಲೆನುತಲೆ ॥ ೩ ॥ —(ದಾ)

### ಆಗ ಲಕ್ಷ್ಮಣನು ತನ್ನ ಪರಾಕ್ರಮವನ್ನು ತೋರಿಸುತ್ತಾನೆ—

### ಕಾಪಿ—ಅಟತಾಳ

ಇಂದ್ರಜಿತುವಿನೊ । ಳಾಹವ ಗೈದ ॥ ಪ ॥ ಇಂದ್ರಜಿತುವಿನೊಳ್ನಾಗೇಂದ್ರಾವತಾರನು । ನಿಂದು ಖಾಡಾಖಾಡಿಯಲಿ ಸುರ । ಸಂದಣಿಯು ಜಯವೆಂದು ಪೊಗಳಲು ॥ ಅ.ಪ ॥ ಭರದಿಂ ಸುರಾರಿ । ಮಹಾದ್ಭುತ । ಶರಗಳ ತೂರಿ। ಘಾತಿಸುತ ವಾ । ನರರನ್ನು ವಿಾರಿ । ಬರ್ಪುದ ಕಂಡು ॥ ತರಣಿವಂಶಜನು ಸತ್ವ

ರದಿ ಸಾಸಿರಬಾಣ | ವೆರಗಿಸುತ ರಥತುರಗಸಾರಥಿ | ವರಕವಚ ಬಿಲ್ಗಳನು ಖಂಡಿಸೆ ॥ ೧ ॥ ಪದಚಾರಿಯಾಗಿ|ಸಿಂಡಿರೆ ಮುಯು | ಸದ ಕಂಡು ಮರುಗಿ | ರಥಾದಿಗಳ | ಒದಗಿಸಲಾಗಿ | ಬೇಗದೊಳೇರ್ದು ॥ ವಿಧವಿಧ ಬಾಣದೊಳೆಸೆಯುತ ಲಕ್ಷ್ಮಣ | ನೆದೆಯ ಕವಚವ ಭೇದಿಸಲ್ಕಾ | ತ್ರಿದಶತತಿ ಕಳವಳವಗೊಳುತಿರೆ॥೨॥ ತ್ವರದಿ ಲಕ್ಷ್ಮಣನು | ಇಂದ್ರಾರಿಯ | ವರಕಾರ್ಮುಕವನು | ಕತ್ತರಿಸಲು | ಪೆರತೊಂದನವನು | ಕೈಕೊಳ್ಳುತ್ತ ॥ ಬರಲದ ಕಡಿದು ಸಾಸಿರಬಾಣಂಗಳೊಳಾತ | ನುರವಭೇದಿಸಿ ಸಕಲಸತ್ತ್ವವ | ಕರಗಿಸಿದ ನಿರ್ಜರರು ಮೆಚ್ಚಲು ॥ ೩ ॥

—(ದಾ)

ಕೊನೆಗೆ ಲಕ್ಷ್ಮಣನು—

ಶ್ಲೋ॥ ಧರ್ಮಾತ್ಮಾ ಸತ್ಯಸನ್ಧಶ್ಚ ರಾಮೋ ದಾಶರಥಿರ್ಯದಿ । ಪೌರುಷೇ ಚಾಪ್ರತಿದ್ವನ್ದ್ವಃ ಶರೈನಂ ಜಹಿ ರಾವಣಿಮ್ ॥

—(ಶ್ರೀ.ರಾ)

ಅ॥ ದಶರಥನ ಮಗನಾದ ರಾಮನು ಧರ್ಮಾತ್ಮನೂ ಸತ್ಯಸಂಧನೂ ಪೌರುಷದಲ್ಲಿ ಎದುರಿಲ್ಲದವನೂ ಆಗಿದ್ದರೆ ಎಲೈ ಬಾಣವೆ, ಈ ಇಂದ್ರಜಿತುವನ್ನು ಕೊಲ್ಲು.

ಎಂದು ಇಂದ್ರಾಸ್ತ್ರವನ್ನು ಪ್ರಯೋಗಿಸುತ್ತಲೆ—

ಷ॥ ಅಬ್ಬರಿಸಿ ಬರೆ ಸರಳು ನಭದಲಿ | ಬೊಬ್ಬಿರಿದುದಮರಾಳಿ; ಹೊಡೆದವು | ಹೆಬ್ಬರೆಗಳಲ್ಲಲ್ಲಿ; ಪಾತಲಿ ಭುಜಪನೊದರಿಸಿದ; ॥ ಉಬ್ಬುಗೊಡದಿಂದ್ರಾರಿ ಕೈಯಿಂ | ದೆಬ್ಬಿಸಿದ ಶಕ್ತಿಯನು ಖಂಡಿಸು | ತುಬ್ಬಿನಲಿ ನಡೆತಂದು ನೆಗಹಿತು ನಭಕೆ ರಿಪುಶಿರವ ॥

—(ತೊ.ರಾ)

ಇದರಿಂದ ಅತ್ತ ರಾಮನು ಸಂತುಷ್ಟನಾಗಿ ಲಕ್ಷ್ಮಣನನ್ನಾಲಿಂಗಿಸುತ್ತಾನೆ. ಇತ್ತ—

ಸಾ॥ ತನುಜನಳಿದನೆಂದು ರಿಯುತ ರಾವಣ | ಜನಕಜೆಯನು ಕೊಲಲೆಂದು॥ ಅನುವಾಗೆ ಸುಪಾರ್ಶ್ವನೆಂಬ ಮಂತ್ರಿಯು | ಗಳಿಲನೆ ತಡೆದನು ಬಂದು ॥

ಆದರೂ ಆಗ ರಾವಣನಿಗೆ ಸೀತೆಯೊಡನೆ ಮಾತು ನಡೆದದ್ದೇನೆಂದರೆ—

ಶ್ಲೋ॥ (ರಾ) ಭವಿತ್ರೀ ರಮ್ಭೋರು, ತ್ರಿದಶವದನಗ್ಲಾನಿರಧುನಾ; । ಸ ತೇ ರಾಮಃ ಸ್ಥಾತಾ ನ ಯುಧಿ ಪುರತೋ ಲಕ್ಷ್ಮಣಸಖಃ; ॥ ಇಯಂ ಯಾಸ್ಯತ್ಯುಚ್ಚೈರ್ವಿಪದಮಧುನಾ ವಾನರಚಮೂಃ; । ಲಘಿಷ್ಠೇ (ಸೀ) ದಂ ಷಷ್ಠಾಕ್ಷರಪದವಿಲೋಪಾತ್ಪಠ ಪುನಃ ॥

—(ಹ.ನಾ)

ಅ॥ (ರಾ) ಹೆ, ಸುಂದರಿ, ಇನ್ನು ದೇವತೆಗಳ ಮುಖವು ಕುಂದುತ್ತದೆ; ಲಕ್ಷ್ಮಣನ ಸಖನಾದ ಆ ನಿನ್ನ ರಾಮನು ಯುದ್ಧದಲ್ಲಿ ಮುಂದೆ ನಿಲ್ಲಲಾರನು; ಇನ್ನು ಈ ಕಪಿಸೇನೆಯು ಹೆಚ್ಚಿನ ವಿಪತ್ತನ್ನು ಪಡೆಯುತ್ತದೆ; (ಸೀ) ಇದರ ಆರನೆ ಅಕ್ಷರವನ್ನು ಬಿಟ್ಟು ಮತ್ತೆ ಓದು. (ಹಾಗೆ ಓದಿದರೆ ಇನ್ನು ರಾವಣನ ಮುಖವು ಕುಂದುತ್ತದೆ; ರಾಮನು ಲಕ್ಷ್ಮಣನೊಂದಿಗೆ ಯುದ್ಧದಲ್ಲಿ ಮುಂದೆ ನಿಲ್ಲುತ್ತಾನೆ; ಇನ್ನು ಈ ಕಪಿಸೇನೆಯು ಹೆಚ್ಚಿನ ಪದವಿಯನ್ನು ಪಡೆಯುತ್ತದೆ—ಎಂದಾಗುತ್ತದೆ.)

ಅಲ್ಲಿಂದ ಹಿಂದಿರುಗಿದ ರಾವಣನು ಜಯವೆಂತಾದೀತೆಂದು ಯೋಚಿಸುತ್ತ—

✓ದಿ॥ ಭೃಗುಜನೇ, ಮುಂದೇನು ಗತಿ ಪೇಳೆನಲ್ಕೆ । ಏನಿಗಿಲು ಹೋಮಂಗೈ ಎಂದರವರದಕ್ಕೆ ॥ ಬಗೆಯೆ ವಿಘ್ನಂ ಬಾರದಿರೆ ಕುಂಡದಿಂದ । ಒಗೆವುದೈ ರಥತೂಣೀರಚಾಪವೆಂದ ॥

ಮುಂದೇನಾಯಿತೆಂದರೆ—

✓ಕೀ॥ ಅದರಂತೆಯೆ ಪಾತಾಲಗೃಹದಿ ತನ್ನ ದುಋತಶಿರಗಳ ಹೋಮವನು॥ ತ್ರಿದಶವೈರಿ ಹೋಮವ ಗೆಯ್ಯುತ್ತಿರೆ । ಪುದಿದುದು ಹೊಗೆಯಾಕಾಶವನು ॥

ಅದು ರಾವಣನು ಮಾಡುವ ಹೋಮವೆಂದರಿತು ಅದನ್ನು ಕೆಡಿಸುವದಕ್ಕಾಗಿ ರಾಮನಾಜ್ಞೆಯನ್ನು ಪಡೆದು ಕಪಿಸೇನೆಯನ್ನು ತರುತ್ತಲೆ ಅವರು ಒಳಗೆ ನುಗ್ಗಿದಾಗ—

ಷ॥ ಎಡಬಲದ ಕೆಂಗೂಳ ರಾಶಿಯು, । ಕೊಡಕೊಡಸ ಘೃತರಕ್ತಸುರೆಗಳ, । ನಡಕಿದಿಭಕಿಟಿಶುನಕಕುಕ್ಕುಟಮುಕರಪೌಳಿಗಳ ॥ ಕಡಿಕಡಿವ ಖಂಡಂಗಳೊಟ್ಟಿಲ । ನಡುವೆ ಕುಳಿತಾಹುತಿಯ ಬೇಳುತ । ಲೆಡೆಬಿಡದೆಯೇಕಾಗ್ರಚಿತ್ತದೊಳಿರ್ದನಸುರೇಂದ್ರ ॥ —(ರಾ.ಕ.ಕು)

ಟಿ॥ ಇಭ—ಆನೆ. ಕಿಟಿ—ಹಂದಿ. ಮಕರ—ಮೊಸಳೆ. ಒಟ್ಟಿಲು—ಸಮೂಹ. ಬೇಳುತ—ಹೋಮಮಾಡುತ್ತ.

ಆಗ—

✓ಕೀ॥ ವಾನರರಾರ್ಭಟಕಾ ದನುಜನು ತಾ । ಮೌನವ ಬಿಡದಿರಲಂಗದನು॥ ಮಾಣದೆ ಮಂದೋದರಿಯುಮ ತಂದವಮಾನವ ಮಾಡಲು ತೊಡಗಿದನು ॥

ಆಗ ಮಂದೋದರಿ ದುಃಖಿಸುತ್ತಾಳೆ—

ನೀಲಾಂಬರಿ ಅಥವಾ ಆನಂದಭೈರವಿ—ಅಟತಾಳ

ಪೊರೆವುದಿಲ್ಲವೆ ನಾಥ, ಎನ್ನ । ದೀನಳನ್ನ ॥ ಪ ॥ ಈ । ಪರಿಯಲ್ಲಿ ಕಪಿಗಳು । ಹುರಿಯುವರೆನ್ನ॥ ಅ.ಪ ॥ ದೇವದೈತ್ಯರನೆಲ್ಲ ಬಡಿದು । ಕೀರ್ತಿವಡೆದು । ತನ್ನ। ಭಾವಿಸಿರ್ಪವಳ ಪ್ರೇಮವನೀಗ ತೊಡೆದು ॥ ಹೇವವ ಕಾಣೆನೊ ನುಡಿದು। ಬಹು ಕಡಿದು । ಬಿಡ । ದೀ ವಿಧ ಮೌನವ ಫಲವೇನೊ ಪಡೆದು ॥೧॥ ಮೇಘನಾದನು ಬದುಕಿರಲು । ದುಃಖ ಬರಲು । ಎನ್ನ । ಹೀಗೆ ಕೈಬಿಡುತಿದ್ದನೇನೊ ನಾನಳಲು ॥ ಹೋಗಿಸಿ ಅವನನು ಮೊದಲು । ನೀ ಜೀವಿಸಲು । ಎನ । ಗೀಗಳೀಪರಿಯಾಗಿ ಬಂತಲ್ಲೊ ಅಳಲು ॥ ೨ ॥

ಆಗ ಕೋಪದಿಂದ—

ಶ್ಲೋ॥ ಉತ್ತಿಷ್ಠ ಖಡ್ಗಮಾದಾಯ ತ್ಯಜ ದೇವೀಮಿತಿ ಬ್ರುವನ್।ಜಘಾನಾಙ್ಗದಮುತ್ಥ್ಯಗ್ರಃ ಕಟಿದೇಶೇ ದಶಾನನಃ ॥ —(ಅ.ರಾ)

ಅ॥ ಕತ್ತಿಯನ್ನು ತೆಗೆದುಕೊಂಡೆದ್ದು ದೇವಿಯನ್ನು ಬಿಡೆಂದು ಹೇಳುತ್ತ ರಾವಣನು ಅಂಗದನ ಸೊಂಟದ ಮೇಲೆ ಹೊಡೆದನು.

ಹೀಗೆ ಪರದಾರಲಂಪಟತ್ವವು ದೈವಕ್ಕೆ ಶರಣುಹೋಗುವ ಅವಕಾಶವನ್ನು ತಪ್ಪಿಸುವದೆಂಬ ದನ್ನು ನೋಡಿಯೇ ಪೀಠಿಕೆಯಲ್ಲಿ ಸಾಧುಗಳು "ದೈವಕೆ ಶರಣೆಂಬ ಭಾವವ ತಡೆವುದು" ಎಂದು ಮೊದಲಾಗಿರುವ ನುಡಿಯನ್ನು ಹೇಳಿರುವರು. ಹೀಗೆ ಹೋಮದ ವಿಘ್ನವಾದೊಡನೆಯೆ ವಾನರರು ರಾಮನ ಬಳಿಗೆ ಬಂದುಬಿಟ್ಟರು. ಇತ್ತ ಯುದ್ಧಸನ್ನದ್ಧನಾದ ಪತಿಗೆ ಮಂದೋದರಿ ಹೇಳುತ್ತಾಳೆ—

ಮಣಿರಂಗು —ರೂಪಕ

ಪತಿಯೆ ಕೇಳೊ। ಹಿತದ ಮಾತ | ಪ್ರತಿಯ ನಾವದೆ ॥ ಪ ॥ ಭೂ | ಸುತೆಯ ರಾಮಗೀವುದೆ ಅತಿ | ಹಿತವು ಲೋಕದೆ ॥ ಅ.ಪ ॥ ಬಂಧಿಸಿದೆಯೊ ನೀನಾತನ | ಸುಂದರಾಂಗಿಯ ॥ ಈಗ | ಬಂಧವಾದುದೆನಗೆ ಆದೇ | ಸುಂದರಾಂಗನೆ ॥ ೧ ॥ ಕೊಂದೆಯೆನ್ನ ಮಕ್ಕಳನು | ತಂದೆಯಾಗಿ ನೀ ॥ ಸಾಕು | ಇಂದು ಸಾಯ್ವು ಯೇಕೆ ನೀನು? | ಕುಂದನಾಸುತ॥ ೨ ॥ ಕಳೆದೆ ಸಕಲದೈತ್ಯರನ್ನು | ಕೊಳುಗುಳದೊಳು ನೀಂ ॥ ಇನ್ನು | ಒಲಿದು ತನ್ನಗಿತ್ತು ನೆಲನ | ಕುಲವನುಳಿಪುದೈ ॥೩॥

ಈ ಮಾತಿಗೆ ಕಿವಿಗೊಡದೆ ತನ್ನ ದುರಭಿಮಾನವನ್ನೇ ತೋರಿ ಅವನು ಯುದ್ಧಕ್ಕೆ ಬರುವಾಗ—

ಕಂ॥ ಪಡಘಟ್ಟಿಸದಿಂ ತಲೆವಾ | ಗಿದನಹಿಪಂ; ದಿಗ್ಗಜಂಗಳೊದರಲ್; ದಿವದೊಳ್ ತ್ರಿದಶರ್ಬೆಚ್ಚಿದರಂಭೋ | ನಿಧಿಯುಕ್ಕಿತು; ಭೂಮಿ ಕಂಪಿಸಂ ಗೈಯ್ಯುದಣಂ ॥ —(ಹ.ರಾ)

ಆ ಸಮಯದಲ್ಲಿ —

✓ ಕೀ॥ ತರಣಿವಂಶಜನು ಪಾದಚಾರಿಯಾ | ಗಿರಬಾರದೆನುತ ಸುರರೆರೆಯ ॥ ವರರಥತೂಣೀರಾದಿಗಳನು ಕೊ | ಟ್ಟಿರದೆ ಕಳುಹಿದನು ಮಾತಲಿಯ ॥

ರಾಮನು ಆ ರಥದ ಮೇಲೆ ಹತ್ತಿ ಹೆದೆಯನ್ನು ಕಿವಿವರೆಗೆಳೆದಾಗ—

ಶ್ಲೋ॥ ಆಕೃಷ್ಟೇ ಯುಧಿ ಕಾರ್ಮುಕೇ ರಘುಪತೇರ್ವಾಮೋಽಬ್ರವೀದ್ದಕ್ಷಿಣಮ್ | ದಾನೇ ಕರ್ಮಣಿ ಭೋಜನೇ ಚ ಭವತಃ ಪ್ರಾಗಲ್ಭ್ಯಮಸ್ಮಿನ್ನ ಕಿಮ್? ॥ ವಾಮಾನ್ಯಃ ಪುನರಬ್ರವೀನ್ನ ಮಮ ಭೀಃ ಪೃಷ್ಟುಂ ಗತಃ ಸ್ವಾಮಿನಮ್ | ಛಿಂದ್ಯಾಂ ರಾವಣವಕ್ತ್ರಪಙ್ಕ್ತಿಮುಥವಾಪ್ಯೇಕೈಕವಾದಿಶ್ಯತಾಮ್ ॥ —(ಹ.ನಾ)

ಅ॥ ರಾಮನು ಯುದ್ಧದಲ್ಲಿ ಬಿಲ್ಲಿನ ಹೆದೆಯನ್ನೆಳೆದಾಗ ಎಡಗೈಯು ಬಲಗೈಯನ್ನು ಕುರಿತು "ದಾನದಲ್ಲಿಯೂ ಭೋಜನದಲ್ಲಿಯೂ ಮುಂದಾಗುವ ನೀನು ಇದರಲ್ಲಿ ಮುಂದಾಗಲಾರೆಯಲ್ಲವೆ?" ಎನಲು ಬಲಗೈ ಉತ್ತರವಿತ್ತದ್ದೇನೆಂದರೆ— "ನಾನು ಹೆದರಿ ಹಿಂದಕ್ಕೆ ಹೋಗಿಲ್ಲ; ರಾವಣನ ತಲೆಗಳ ಸಾಲನ್ನೇ ಒಂದೇಸಲಕ್ಕೆ ಕತ್ತರಿಸಿಬಿಡಲೊ ಒಂದೊಂದನ್ನೇ ಕತ್ತರಿಸಲೊ ಹೇಳೆಂದು ಒಡೆಯನನ್ನು ಕೇಳುವದಕ್ಕೆ ಹೋಗಿದ್ದೆನು".

ಹೀಗೆ ರಾಮನು ಯುದ್ಧಕ್ಕೆ ಪ್ರಾರಂಭಿಸಿ ಒಂದು ಗಾಂಧರ್ವಾಸ್ತ್ರವನ್ನು ಬಿಡುತ್ತಲೆ—

ಶ್ಲೋ॥ ರಥಿಶ್ಚ ರಾಮೋ ರಥಿಕಶ್ಚ ರಾಮೋ ಸೂತೋಽಪಿ ರಾಮಸ್ತುರಗಶ್ಚ ರಾಮಃ । ಧ್ವಜಶ್ಚ ರಾಮೋ ದ್ವಿರದೋಽಪಿ ರಾಮಃ ಪದಾತಯಶ್ಚಾಪಿ ರರಾಜ ರಾಮಃ ॥ ಇಷುಶ್ಚ ರಾಮಸ್ತ್ವಿಷುಧಿಶ್ಚ ರಾಮೋ ಧನ್ವೀ ಚ ರಾಮೋಽಪಿ ಧನುಶ್ಚ ರಾಮಃ । ಚರ್ಮಾಪಿ ರಾಮೋ ಮಣಿವರ್ಮ ರಾಮಃ ಸರ್ವಂ ತದಾ ರಾಮಮಯಂ ಬಭೂವ ॥ ಇತ್ಯೇವಂ ರಾಕ್ಷಸಾಶ್ಘೋರಾ ರಾಮಬುದ್ಧ್ಯಾ ರಣೇ ಯುಧಃ । ಸ್ವಸ್ವಹಸ್ತೈರ್ಹತಾಃ ಸರ್ವೇ ಗಾನ್ಧರ್ವಾಸ್ತ್ರವಿಮೋಹಿತಾಃ ॥ —(ರಾ.ಚ.ಚಂ)

**ಅ॥ ರಥ, ರಥಿಕ, ಸಾರಥಿ, ಕುದುರೆ, ಧ್ವಜ, ಆನೆ, ಕಾಲಾಳು, ಬಾಣ, ಬತ್ತಳಿಕೆ, ಬಿಲ್ಲಾಳು, ಬಿಲ್ಲು, ಚರ್ಮ, ಮಣಿವರ್ಮ— ಈ ಎಲ್ಲವೂ ರಾಮಮಯವಾಯಿತು. ಹೀಗೆ ರಾಕ್ಷಸರು ಗಾಂಧರ್ವಾಸ್ತ್ರದಿಂದ ಮೋಹಿತರಾಗಿ ರಾಮಬುದ್ಧಿಯಿಂದ ತಮ್ಮವರನ್ನು ತಾವೇ ಕೊಲ್ಲುತ್ತ ಎಲ್ಲರೂ ಸತ್ತರು.**

**ಇದರ ಮೇಲೆ ರಾಮನು ತೋರಿಸಿದ ಪರಾಕ್ರಮವನ್ನು ಹೇಳುವದಿನ್ನೇನು?**

**ಕಲ್ಯಾಣಿ—ಅಟತಾಳ**

ಶ್ರೀರಾಮನ ಶೌರ್ಯವ । ವರ್ಣಿಪರಾರು ॥ ಪ ॥ ಶ್ರೀರಾಮನ ಶೌರ್ಯ । ತ್ರಿಜಗದೊಳಾಶ್ಚರ್ಯ । ಘೋರದಶಕಂಧರನ ಗೆಲಿದನು ! ದಾರವಿಕ್ರಮ ಭೂರಿ ತೇಜನು ॥ ಅ.ಪ ॥ ದುರುಳ ರಾವಣನಾಗ್ನೇಯ । ಬಾಣದಲಿಡೆ । ವರುಣಾಸ್ತ್ರದಲಿ ತರಿಯ । ಉರುತರ ಶೈಲಾಸ್ತ್ರವ । ನೆಸೆಯಲದ । ತರಿದೆಚ್ಚ ವಜ್ರಾಸ್ತ್ರವ ॥ ಪರಿಪರಿವಿಧಮಂತ್ರ । ಶರಗಳ ದೆಸೆಯಿಂದ । ತರಿದು ಪ್ರತ್ಯಸ್ತ್ರಗ । ಳೆರಗಿಸುತಿರೆ ಕ್ರೋಧ ॥ ಭರಿತನಾಗುತ ರಾವಣನು ಕನಲಿ । ಕಾರ್ಮುಕದಿ ರಾಕ್ಷಸ । ಶರವನೇರಿಸಿ ಘೋರರೂಪಿನಲಿ । ಬಿಡಲದುವೆ ಮುಚ್ಚಿತು । ಧರೆಯನೆಲ್ಲವನಂಧಕಾರದಲಿ । ಅನಂತಶರಗಳು । ಉರಗಮುಖದೊಳಗುರಿಯ ಕಾರುತಲಿ । ದಶದಿಶೆಯ ವ್ಯಾಪಿಸಿ ॥ ಗರಳಮಯವೆನಿಸುತ್ತೆ ಕಪಿಗಳ । ನೊರಗಿಸುತಲಿರೆ ಕಂಡು ರಾಘವ । ನುರುತರದ ಸೌವರ್ಣಬಾಣವ । ಗರುಡಮಂತ್ರವ ಜಪಿಸುತೆಸೆಯಲು ॥೧॥ ಘನತೇಜದಿಂದಸ್ತ್ರವು । ತಾಳುತನಂತ । ವಿನತಾತ್ಮಜರ ರೂಪವು । ಕ್ಷಣದೊಳೈತಂದಾಗಲು । ಸರ್ಪಾಕಾರ ಕಣೆಗಳ ಭಕ್ಷಿಸಲು ॥ ದಿನನಾಥನುದಿಸಲಿಲ್ಲೆನಿಪ ಕತ್ತಲೆಯಂತೆ । ಕ್ಷಣದಿ ಸರ್ವರ ಸುಖವನು ಪೊಂದಿಸಲು ಕಂಡು ॥ ಕನಲಿ ರಾವಣ ಘೋರವಿಶಿಖಗಳ । ನೆಸೆವುತ್ತ ರಾಘವ । ನನು ವಿಭಾಡಿಸಿ ರಥದ ವಾಜಿಗಳ । ಮಾತಲಿಯ ನೋಯಿಸಿ । ಕನಕಮಯರಥಕೇತುವಿಗೆ ಸರಳ । ನೆಸೆಯುತ್ತ ಕಪಿಬಲ । ವನು ಪಲಾಯನಗೈಸಿದನು ದುರುಳಾ । ವನೆಂಬೆನಾಗಲೆ ॥ ವನಜಲೋಚನನಿರವನಾ ಮನು । ಮುನಿಸುರರ್ಕಳು ಕಂಡು ಚಿಂತಿಸ । ಲಸಿತರಲಿ ರಘುವೀರ ಕಾಲಾ । ನಲಸಮಪ್ರಭೆ ಬಾಣಪಿಡಿದನು ॥೨॥ ಕಡುಕೋಪದಲಿ ರಾಘವ । ನೇತ್ರಗಳಿಂದ । ಕಿಡಿಯುಗುಳುತಲಸ್ತ್ರವ । ಬಿಡಲದ ದಿಕ್ತಟವ । ನಾವರಿಸುತ್ತ । ಸಡು

ಗಿಸಿ ಭೂತಲವ ‖ ಕಡೆಯ ಭೈರವನಂತೆ । ಸುಡುತೆಲ್ಲ ದೈತ್ಯರ।ಪಡೆಯನ್ನು ರಾವಣ। ನೆಡೆಗೈದುತಾಕ್ಷಣ ‖ ಕಡಿಕಡಿದು ಶಿರಗಳನು ಹಾರಿಸಲು । ಕತ್ತರಿಸುತಿರಲವು । ಒಡನೆ ಚಿಗುರುವವೆಂದಿಸಂದದೊಳು । ಅಂಬರದಿ ಭೂಮಿಯೊ । ಳಿಡಿಕಿರಿದು ತುಂಬಿ ದವು ರುಂಡಗಳು । ಏನೆಂಬೆನದ್ಭುತ ‖ ಎಡೆದೆರಪ ನಾ ಕಾಣೆ ರಾತ್ರಿಯು । ನಡು ವಗಲು ಸಂಧ್ಯೆಗಳು ತೋರದು । ಬಿಡಬಿಡದೆ ತರಿತರಿದು ರಾಘವ । ನೊಡನೆ ವಿಸ್ಮಯವಾಂತು ನಿಂದನು ‖ ೧ ‖ —(ದಾ)

ಆ ಹೊತ್ತಿನಲ್ಲಿ—

✓ ಸಾ॥ ವನುಜನ ನಾಭಿಯೊಳಮೃತವಿಹುದನವ । ನನುಜ ಪೇಳೆ ರಘುತನುಜ ‖ ಅನಲಾಸ್ತ್ರದೊಳದ ಬತ್ತಿಸೆ ತಲೆಯೊಂ । ದನೆ ತಳೆದಿದ್ದನು ದನುಜ ‖

ಈ ಪ್ರಕಾರ ನಡೆದ ಯುದ್ಧವನ್ನು ಕವಿ ವರ್ಣಿಸಿರುವದೆಂತೆಂದರೆ—

ಶ್ಲೋ॥ ಗಗನಂ ಗಗನಾಕಾರಂ ಸಾಗರಃ ಸಾಗರೋಪಮಃ । ರಾಮರಾವಣಯೋರ್ಯುದ್ಧಂ ರಾಮರಾವಣಯೋರಿವ ‖ —(ಶ್ರೀ.ರಾ)

ಅ॥ ಆಕಾಶವು ಆಕಾಶದಂತೆಯೆ. ಸಾಗರವು ಸಾಗರದಂತೆಯೆ. ರಾಮರಾವಣರ ಯುದ್ಧವು ರಾಮರಾವಣರ ಯುದ್ಧದಂತೆಯೆ.

ಆಗ ಏನಾಯಿತೆಂದರೆ—

✓ದಾ॥ ಒಂದು ತಲೆಯೊಳ್ನಿಂದಿರಲು ದೈತ್ಯನಾಥ । ಸಂಧಿಸುತ್ತೆಂದಂ ರಾಮನೊಂದು ಮಾತ ‖ ಇಂದು ನೀನೀಯುಲ್ ಸೀತೆಯನ್ನು ಬೇಗ । ಹೊಂದುವೈ ನೀನೆನ್ನನುಗ್ರಹವನೀಗ ‖

ರಾವಣನು ಅದನ್ನು ನಿರಾಕರಿಸಿ ಯುದ್ಧವನ್ನೆ ಬಯಸಲು—

✓ಕೀ॥ ಹೇಳುವೆ ಜಪಿಸಾದಿತ್ಯಹೃದಯವನು । ಕೀಳೀತನ ಜೀವವನೆಂದು ‖ ತಾಳದೆ ತಡವನು ಹೇಳಿದರುತ್ಸಾಹ । ವೇಳಲಗಸ್ತ್ಯರು ತಾವ್ ಬಂದು ‖

ಆಗ ರಾಮನು ಸೂರ್ಯಾರಾಧನೆಯನ್ನು ಮಾಡಿ ಆ ರಾಕ್ಷಸನನ್ನು ಮುಗಿಸಿಬಿಡಬೇಕೆಂದು ಬ್ರಹ್ಮಾಸ್ತ್ರವನ್ನು ಹಿಡಿಯುತ್ತಲೆ—

ಶ್ಲೋ॥ ಘೋಕಮ್ಪಂ ಜನಯನ್ನಭೋ ವಿದಲಯನ್ನವ್ಯೋನಿಧಿಂ ಕ್ಷೋಭಯ । ನ್ಪ್ರೇತೇಯಾಂಶ್ಚ ವಿಮರ್ದಯನ್ಗಿರಿವರಾನ್ಬಿನ್ದನ್ದಿಶಃ ಪೂರಯನ್ ‖ ವೈದೇಹೀಮತಿಮೋದಯನ್ಸಕಲಗೀರ್ವಾಣಾನ್ಶಿರಃಕಮ್ಪಯ । ನ್ಕಲ್ಯಾಣೋ ರಘುರಾಮಬಾಣವಿಲಸತ್ಕೋದಣ್ಡಚಣ್ಡಧ್ವನಿಃ ‖ —(ರಾ.ಕ.ಅ)

ಅ॥ ರಾಮಬಾಣದಿಂದ ಶೋಭಾಯಮಾನವಾದ ಬಿಲ್ಲಿನ ಝೇಂಕಾರವು ಭೂಮಿಯನ್ನು ನಡುಗಿಸಿ, ಆಕಾಶವನ್ನು ಭೇದಿಸಿ, ಸಮುದ್ರವನ್ನು ಉಲ್ಲೋಲಕಲ್ಲೋಲಮಾಡಿ, ರಾಕ್ಷಸರನ್ನೆಲ್ಲ ಗಡಗುಟ್ಟಿಸಿ, ಹತ್ತುದಿಕ್ಕುಗಳನ್ನೂ ತುಂಬಿ, ಸೀತೆಗೆ ಬಹಳ ಸಂತೋಷವನ್ನುಂಟುಮಾಡಿ ಸಮಸ್ತ ದೇವತೆಗಳೂ ತಲೆಯನ್ನಲ್ಲಾಡಿಸುವಂತೆ ಮಾಡಿತು.

ಅದನ್ನು ನೋಡಿ ಜನಗಳು ಆಶ್ಚರ್ಯಪಟ್ಟದ್ದೆಂತೆಂದರೆ—

ಮಧ್ಯಮಾವತಿ—ಅಟತಾಳ

ಅಬ್ಬಬ್ಬ ನೋಡಲಾಗದು ರೋಷ! । ನಡುಗುತಲಿದೆ ಶೇಷ!! ॥ ಪ ॥ ಅಬ್ಬ ನೋಡಲಾಗದು ಶರಘೋಷಕೆ । ಉಬ್ಬಿ ಶರಧಿ ರವಿಯುಬ್ಬಸಪಡುವನು ॥ಅ.ಪ॥ ಬರುವಾ ಅಸ್ತ್ರವ ನೋಡುತ ರಾವಣನು । ಪ್ರತ್ಯಸ್ತ್ರಗಳವಿತವ । ಸುರಿಯುತ್ತಿರೆ ನುಂಗುತಲದನೆಲ್ಲವನು । ವಜ್ರೋಪಮದಿಂದಲಿ ॥ ಉರಿಯುಗುಳುತ ಬಂದೆರಗಿ ದಶಶಿರನ । ಉರವ ಸೀಳಿ ಹಾರಿಸಿತು ಪ್ರಾಣಗಳ ॥ ೧ ॥ ಬಿಡದಾಶರ ಧರಣಿಯ ಭೇದಿಸುತಾಗ । ಅಂಬರಪಥಕ್ಕೈದುತ । ಲೊಡನೆ ರಾಮರ ಮೂಡಿಗೆಯ ಸುವೇಗ । ಸೇರುತ್ತಿರಲಿತ್ತಲು ॥ ಧಡಧಡಧಡರೆಂದ್ವೊಡೆದು ಭೇರಿಗಳ । ನೊಡನೆ ಸುರರು ಸುಮವಿಡಿದು ಚೆಲ್ಲಿದರು ॥ ೨ ॥ ಖಳರಾಯನ ಮರಣವ ಕಂಡುಳಿದವರು । ಓಡಿದರೆಲ್ಲೆಲ್ಲಿಯು । ನಿಲದೇ ಪಾತಾಲವನೇ ಸೇರಿದರು । ಕಪಿಸಂದಣಿಯುಬ್ಬುತ ॥ ಕಿಲಕಿಲರವದಿಂದುಲಿದು ನಲಿದು ಮುಂ । ಗಳವುಹಿಮನ ವೆಗ್ಗಳದಿ ಪೊಗಳುತಿರೆ ॥ ೩ ॥

ಆಗ ನೆಲಕ್ಕೆ ಬಿದ್ದ ರಾವಣನನ್ನು ಕವಿ ವರ್ಣಿಸಿರುವದೆಂತೆಂದರೆ—

ಷ॥ ಧರಣಿಪತಿ ಸಾಗರಕೆ ಲೋಕದ । ಗಿರಿಗಳಿಂ ಕಟ್ಟಿಯನು ಕಟ್ಟಿದ । ಪರಿಯನೇತರ ಕೀರ್ತಿಯೆನುತಸುರೇಂದ್ರ ಗಹಗಹಿಸಿ ॥ ಧುರದ ರಕ್ತಾಂಬುಧಿಗೆ ಬಹುಭೀ । ಕರದ ತನ್ನ ಶರೀರಸೇತುವ । ವಿರಚಿಸಿದನೆನೆ ಕೆಡೆದನತಿದೀರ್ಘಾಯ ಮಾನದಲಿ ॥ —(ರಾ.ಕ.ಕು)

ಟಿ॥ ಎನುತ+ಅಸುರೇಂದ್ರ (ರಾವಣ)

ಆಗ ದೇವತೆಗಳೂ ಋಷಿಗಳೂ ಕೂಡಿ—

ಷ॥ ಹಗೆಯರಿಗೆ ವರವೀವರಿಬ್ಬರು । ತೆಗೆಯಲರಿಯರು ಕೊಟ್ಟ ವರಗಳ । ತೆಗೆವ ಕೊಡುವ ಸಮರ್ಥರಾರೀ ಜಗಕೆ? ನಿನ್ನಂತೆ?॥ಸುಗುಣರಿನ್ನಾರುಂಟು? ಕದನದ । ಬಗೆದು ನಿನ್ನೊಳು ಜಯಿಸುವವರೀ ಜಗದೊಳುಂಟೇ? ದೇವ ರಕ್ಷಿಸು ನಮ್ಮನನವರತ ॥ (ಹ.ಭ)

ಎಂದು ಕೊಂಡಾಡುತ್ತಿರಲು—

ಶ್ಲೋ॥ ರಾವಣಸ್ಯ ಚ ದೇಹೋತ್ಥಂ ಜ್ಯೋತಿರಾದಿತ್ಯವತ್ಸ್ಫುರನ್ । ಪ್ರವಿವೇಶ ರಘುಶ್ರೇಷ್ಠಂ ದೇವಾನಾಂ ಪಶ್ಯತಾಂ ಸತಾಮ್ ॥ —(ಅ.ರಾ)

ತ॥ ದೇವತೆಗಳೆಲ್ಲರೂ ನೋಡುತ್ತಿರುವಹಾಗೆಯೇ ರಾವಣನ ದೇಹದಿಂದ ಹೊರಟ ತೇಜಸ್ಸು ಸೂರ್ಯನಂತೆ ಹೊಳೆಯುತ್ತ ರಾಮನೊಳಕ್ಕೆ ಪ್ರವೇಶಿಸಿತು.

ಅದನ್ನು ದೇವತೆಗಳು ಹೊಗಳಿದ್ದೇನೆಂದರೆ—

ಶ್ಲೋ॥ ಯೇ ಯೇ ಹತಾಶ್ಚಕ್ರಧರೇಣ ರಾಜನ್ । ತ್ರೈಲೋಕ್ಯನಾಥೇನ

ಜನಾರ್ದನೇನ ॥ ತೇ ತೇ ಗತಾ ವಿಷ್ಣುಪುರೀಂ ಪ್ರಯಾತಾಃ । ಕ್ರೋಧೋಽಪಿ ದೇವಸ್ಯ ವರೇಣ ತುಲ್ಯಃ ॥ —(ಪಾಂ.೧೬)

ಅ॥ ಯಾರು ಯಾರು ವಿಷ್ಣುವಿನಿಂದ ಹತರಾದರೊ ಅವರೆಲ್ಲ ವಿಷ್ಣುಲೋಕಕ್ಕೆ ಹೋದರು. ದೇವರ ಕ್ರೋಧವು ಕೂಡ ವರಕ್ಕೆ ಸಮಾನವು.

ಆಗ ಅಣ್ಣನ ಮರಣಕ್ಕೆ ದುಃಖಿಸುತ್ತಿದ್ದ ವಿಭೀಷಣನಿಗೆ ರಾಮನು ಸಮಾಧಾನವನ್ನು ಹೇಳಿದ್ದೇನೆಂದರೆ—

✓ ಸೀ॥ ಎಲೆ ವಿಭೀಷಣ ವಿಚಾರಿಸಿ ನೋಡು ನೀನಾರು? ಅಳಲಿಸುತ್ತಿರ್ಪ ದಶಾಸ್ಯನಾರು?। ತಿಳಿಯೆ ಹಿಂದಿವನು ನಿನ್ನೊಡನೆಯೇ ಇದ್ದನೇ? ಅಳಿಯದಿವನೇ ಮುಂದೆ ಇರುತಿದ್ದನೇ?।ಹೊಳೆಯೊಳಗೆ ಕೊಚ್ಚಿ ಬಹ ಮರದ ತುಂಡುಗಳಂದದಿ ಇಳೆಯೊಳಗೆ ಬಾಂಧವರ ಸಂಬಂಧವು । ತೊಲಗುವಿಕೆ ಸೇರುವಿಕೆ ತನುಧರ್ಮವೆನಿಸುವದು । ನಲೆ ತನುವದೆಂದಿಗು ಮನಿತ್ಯಮಹುದು ॥ ಅಲಘುಬುದ್ಧಿಯೊಳಿದನು ತಿಳಿದು ನೋಡು । ಬಳಲಿ ಬೇಸರುವದಿದು ಕೆಟ್ಟ ಪಾಡು । ಒಳಗಣಾತ್ಮನ ತಿಳಿವ ಯತ್ನ ಮಾಡು । ಸುಲಭದೊಳು ನೀನಪ್ಪೆ ಸುಖದ ಬೀಡು ॥

ಎಂದು ಮುಂತಾಗಿ ಸಮಾಧಾನವನ್ನು ಹೇಳಿ—

✓ಕೀ॥ ಪನುಜಸುತ್ತರಕ್ರಿಯೆಗಳನು ವಿಭೀ। ಷಣನಿಂಗೈಸುತಲಾಗಲೆ ತಾ ॥ ಅನಘನವಗೆ ಲಂಕಾಭಿಷೇಕವನು । ಘನವೆನೆ ಗೈದನು ರಘುನಾಥ ॥

ಹೀಗೆ ಪರದಾರಲಂಪಟತ್ವದಿಂದ ರಾವಣನಿಗೆ ಸರ್ವನಾಶವಾದದ್ದನ್ನು ಲಕ್ಷ್ಯದಲ್ಲಿಟ್ಟುಕೊಂಡು ಭಾಗವತಶಿರೋಮಣಿಗಳು ಪೀಠಿಕೆಯಲ್ಲಿ "ಪರಸತಿಪರಧನವೆರಡನು ಬಯುಸಲು" ಎಂದು ಉಪದೇಶಮಾಡಿರುವರು. ಈ ಕಥೆಯಲ್ಲಿ ರಾವಣನ ಪ್ರತಿಪಕ್ಷಿಯು ದೈವಯೋಗದಿಂದ ಭಗವಂತನಾದ್ದರಿಂದ ಆ ಸಂಬಂಧದ ಪ್ರಭಾವದಿಂದ ಅವನಿಗೆ ರಾಮನಲ್ಲಿ ಸೇರುವ ಒಂದು ಬಗೆಯ ಸುಯೋಗವು ಉಂಟಾಗಿರುವದಾಗಿ ಕಂಡರೂ ಪ್ರತಿಪಕ್ಷಿಯು ಮನುಷ್ಯಮಾತ್ರದವನಾಗಿದ್ದರಂತು ಅದರ ಫಲವು ಸರ್ವನಾಶದ ಹೊರತು ಮತ್ತೇನೂ ಇರಲಾರದೆಂಬದನ್ನು ನೆನಪಿನಲ್ಲಿಟ್ಟುಕೊಂಡು ಪೀಠಿಕೆಯಲ್ಲಿ ಉಪದೇಶಮಾಡುವ ನಿಯಮಗಳನ್ನು ಹೆಚ್ಚು ಗೌರವಿಸಬೇಕು.



# ಶ್ರೀರಾಮಪಟ್ಟಾಭಿಷೇಕ

## ಪೀಠಿಕೆ—ರಾಜಧರ್ಮ

**ಬೇಗಡೆ—ರೂಪಕ**

ಬಲು ಕಠಿನವು ರಾಜಧರ್ಮ । ತಿಳಿಯಲು ಪೊರೆಯುವ ಮರ್ಮ ॥ ಪ ॥ ತಿಳಿದು ನೋಡಲಿದಕೆ ದೈವ । ಬಲವಿದ್ದರೆ ಮಾತ್ರ ಸಾಧ್ಯ ॥ ಅ.ಪ ॥ ಹಿಂದಿನವರ ತಪ್ಪಿದ್ದರೆ । ಚಂದದಿ ಸರಿಪಡಿಸಬೇಕು ॥ ಎಂದೆಂದಿಗು ತಾ ಧರ್ಮದ । ಬಂಧನದೊಳಗಿರಲು ಬೇಕು ॥ ೧ ॥ ಮೇದಿನಿಯುಪರಾಡಿಕೆಯಪ । ವಾದಕೆ ತಾ ಹೆದರಬೇಕು ॥ ಮೋದದಿಂದ ನಾಡಿಗರನು । ಮೋದಿಸುವಂತಿರಲು ಬೇಕು ॥ ೨ ॥ ತನ್ನ ಹೆಸರನುಳಿಸಬೇಕು । ತನ್ನ ಧನ್ಯತೆಯಾಗಬೇಕು ॥ ತನ್ನ ಮೇಲುಪಙ್ಕ್ತಿಯನ್ನು । ಮನ್ನಿಸುವಂತಿರಲುಬೇಕು ॥ ೩ ॥

**ಟಿ॥ ನಾಡಿಗರು + ಅನುಮೋದಿಸುವಂತೆ.**

**ಜನರು ಹೊಲ, ಮನೆ, ಹಣ— ಇವುಗಳ ಸಂಪಾದನೆಗಾಗಿ ಮತ್ತು ರಕ್ಷಣೆಗಾಗಿ ಎಷ್ಟೋ ಸಂದರ್ಭಗಳಲ್ಲಿ ಧರ್ಮದ ಎಲ್ಲೆಯನ್ನು ಮೀರುವದನ್ನು ನೋಡಿ ಕನಿಕರದಿಂದ ನೀತಿಶಾಸ್ತ್ರಜ್ಞರು ಹೇಳುವದೇನೆಂದರೆ—**

ವೃ॥ ಸಿರಿಯಿರ್ದಲ್ಲಿಯೆ ನಿಲ್ಕುದಂಗನೆಯುಮಂ ನಿಲ್ಕುಗ್ರ್ಹದ್ವಾರದೊಳ್ । ಕ್ಕುರುಮಾಸ್ಮಪುರವೀಥಿಯೊಳ್ಕರಿಜನಂಗಳ್ಕ್ಕುಮನೀಮಾಂತದೊಳ್ ॥ ತೊರೆವರ್ಮತ್ತನಿಬರ್ಶ್ಮಶಾನದೆಡೆಯೊಳ್ಮೇಣ್ಪುಣ್ಯಪಾಪಂಗಳಿಂ । ಬೆರಡೇ ತನ್ನೊಡನಪ್ಪರ್ಮವಲ್ತೆ ಕಡೆಯೊಳ್ ಶ್ರೀ ಚೆಲ್ವನಾರಾಯಣಾ ॥ —(ಶ್ರೀ.ಚೆ.ಶ)

**ಅದರಿಂದೇನು ಮಾಡಬೇಕೆಂದರೆ—**

ಪಗರಣದಾಟಮೆಂದು ಜಗಮಂ ಸಲೆ ನೋಡುತೆ, ದುರ್ವಿಕಲ್ಪಮಂ । ತೆಗೆದು ಬಿಸಾಡುತುಂ, ನಿಜಚಿದಾತ್ಮನನೀಕ್ಷಿಸುತುಂ, ವಿಶೋಧಿಯೊಳ್ ॥ ಪುಗೆ ಮುಳುಗಾಡುತುಂ, ಶಮರಸಾಮೃತಮಂ ಸವಿಯುತ್ತೆ, ತನ್ನತಾಂ । ನಗುತೆ ವಿಳಾಸದಿಂ ತಪಿಸುವಂಗಣೆ ಯಾರಪರಾಜಿತೇಶ್ವರಾ ॥ —(ಅ.ಶ)

**ಟಿ॥ ವಿಶೋಧಿಯೊಳ್—ಸಮಾಧಿಯಲ್ಲಿ. ತಪಿಸುವಂಗೆ—ತಪಸ್ಸುಮಾಡುವವನಿಗೆ.**

**ಅದನ್ನು ಬಿಟ್ಟು ವಿಷಯಗಳನ್ನಾಶ್ರಯಿಸುವವನಿಗೆ ಬಾಧೆ ಹೆಚ್ಚುವದೆಂತೆಂದರೆ—**

ಶ್ಲೋ॥ ವಿಷಸ್ಯ ವಿಷಯಾಣಾಂ ಚ ದೃಶ್ಯತೇ ಮಹದಂತರಮ್ । ಉಪಭುಕ್ತಂ ವಿಷಂ ಹಂತಿ ವಿಷಯಾಃ ಸ್ಮರಣಾದಪಿ ॥ —(ಸು)

**ತಾ॥ ವಿಷಕ್ಕೂ ವಿಷಯಗಳಿಗೂ ಬಹಳ ಅಂತರವು ಕಾಣುತ್ತದೆ. ವಿಷವು ತಿಂದವನನ್ನು ಕೊಲ್ಲುತ್ತದೆ. ವಿಷಯಗಳು ಸ್ಮರಿಸಿದರೆ ಕೂಡ ಕೊಲ್ಲುತ್ತವೆ.**

ಆದ್ದರಿಂದ ವಿವೇಕಿಗಳು ಉಪದೇಶಿಸಿರುವದೇನೆಂದರೆ—

ಮೋಹನ—ಝಂಪೆ

ಬರಿಯ ಭ್ರಮೆಯೊಳು ಬಿದ್ದು ಕೆಡಬೇಡವೆಲೆ ಮರುಳೆ। ಪರವಸ್ತುವನು ಮರೆದು ಲೌಕಿಕವ ನಂಬಿ ॥ ಪ ॥ ಶರೀರ, ಸತಿ, ಪುತ್ರರೆನ್ನವರೆಂದು ನೆಚ್ಚಿರುವೆ। ಮರಣಕಾಲದಿ ನಿನ್ನ ಹಿಂದೆ ಬಹರೇ? ॥ ಇರುವ ದ್ರವ್ಯವನೆಲ್ಲ ಕೊಟ್ಟು ಕಳುಹುವರೆ ಯಮ। ಪುರದ ಬಾಧೆಯನೆಲ್ಲ ಬಂದು ಬಿಡಿಸುವರೆ? ॥ ೧ ॥ ನೀನುದಿಪುದಕೆ ಮೊದಲು ನೀನದಾರವರಾರು? । ನೀನಿರುವ ಪರಿಯಂತವಗಲದಿಹರೇ? ॥ ನೀನು ಪುನರಪಿ ಜನಿಸಲಿವರು ನಿನಗಾಗುವರೆ? । ಶ್ವಾನನ ಕನಸಿನಂತೆ ಸಂಸಾರಸುಖವು ॥ ೨ ॥ ಕಾರ ಮಿಂಚಿನ ತೆರದಿ ತೋರಿ ನಿಮಿಷದಿ ತನುವು । ನೀರ ಗುಳ್ಳೆಯ ತೆರದಿ ಮಾಯವಾಗುವದು ॥ ಪಾರಮಾರ್ಥವ ಮರೆದು ಶರೀರಸುಖಕೆಳಸುವದು । ನೀರಿನೊಳು ಕೈ ಇಕ್ಕಿ ನೆಕ್ಕಿದಂತಹದು ॥ ೩ ॥ ನೆರದ ಸಂತೆಯ ಪರಿಯು ಸಿರಿ; ಪುಣ್ಯತೀರಿದರೆ । ಹರಿದು ಹೋಹುದು; ಸತ್ತ ಬಯಲು ಬಯಲೇ ॥ ಸ್ಥಿರ ಮೋಕ್ಷವನು ಪಡೆಯದಿಹ ಭೋಗಕಾಶಿಪುದು। ನೆರೆ ತುಪ್ಪದಾಶೆಗೆಂಜಲ ತಿಂದ ಪರಿಯು ॥ ೪ ॥ ಬಿಂದುಸುಖಕಾಗಿನಿತು ದುಃಖವನಿಗೊನೆಯ ಮಧು। ಬಿಂದು ಲೇಶದೊಲೆನುತ ಗುರುಸಿದ್ಧನ ॥ ಹೊಂದಿ ಲೌಕಿಕವನುಳಿದಧ್ಯಾತ್ಮದನುವನರಿ। ದೊಂದೆಡರುವೆಂನದಾನಂದದೊಳಗಿರೆಲೆ ॥ ೫ ॥ —(ಕೈ.ಕ)

ಟಿ॥ ಶ್ವಾನನ ಕನಸಿನಂತೆ—ನಾಯ ಕನಸು ಬಹು ಸ್ವಲ್ಪ ಹೊತ್ತಿರುವಂತೆ. ಅಸಿಗೊನೆಯ ಮಧುಬಿಂದುಲೇಶದೊಲ್—ಕತ್ತಿಯ ಕೊನೆಯಲ್ಲಿರುವ ಸಣ್ಣದೊಂದು ತೊಟ್ಟು ಜೇನತುಪ್ಪದಂತೆ.

ವಿಷಯಸ್ವಭಾವವಿಂತಾದ ಮೇಲೆ ಪ್ರಾರಬ್ಧವಶನಾಗಿ ವಿಷಯಸುಖದ ಪರಮಾವಧಿಯನ್ನು ಪಡೆದ ರಾಜನು ಹೇಗೆ ತನ್ನುದ್ಧಾರವನ್ನು ಮಾಡಿಕೊಳ್ಳಬೇಕೆಂದರೆ—

ಶ್ಲೋ॥ ಯಥಾ ಪ್ರಹ್ಲಾದನಾಚ್ಚಂದ್ರಃ ಪ್ರತಾಪಾತ್ತಪನೋ ಯಥಾ । ತಥೈವ ಸೋಽಭೂದನ್ವರ್ಥೋ ರಾಜಾ ಪ್ರಕೃತಿರಞ್ಜನಾತ್ ॥ —(ರ.ವಂ)

ಅ॥ ಆನಂದವನ್ನು ಕೊಡುವದರಿಂದ ಚಂದ್ರನೂ ಶಾಖವನ್ನು ಕೊಡುವದರಿಂದ ಸೂರ್ಯನೂ ಹೇಗೋ ಹಾಗೆಯೇ ರಾಜನು ಜನರಂಜನೆಯನ್ನು ಮಾಡುವದರ ಮೂಲಕ ತನ್ನ ಹೆಸರನ್ನು ಸಾರ್ಥಕ ಮಾಡಿಕೊಳ್ಳಬೇಕು.

ರಾಜನ ಮೇಲೆ ಬಿದ್ದ ಭಾರವು ಹೆಚ್ಚಿನದಾಗಿರುವದೆಂತೆಂದರೆ—

ಶ್ಲೋ॥ ರಾಜಮೂಲೋ ಹಿ ಧರ್ಮಶ್ಚ ಜಯಶ್ಚ ಜಯತಾಂ ವರ । —(ಶ್ರೀ.ರಾ)

ಅ॥ ಎಲೈ ಜಯಶಾಲಿಯೇ ಧರ್ಮವೂ ಜಯವೂ ರಾಜನನ್ನವಲಂಬಿಸಿಕೊಂಡಿರುವವು ಏಕೆಂದರೆ—

ಶ್ಲೋ॥ ರಾಜ್ಞಿ ಧರ್ಮಿಣಿ ಧರ್ಮಿಷ್ಠಾಃ ಪಾಪೇ ಪಾಪಪರಾಃ ಸದಾ । ರಾಜಾನಮನುವರ್ತನ್ತೇ ಯಥಾ ರಾಜಾ ತಥಾ ಪ್ರಜಾಃ ॥ —(ಶ್ರೀ.ರಾ)

ಅ॥ ಯಾವಾಗಲೂ ರಾಜನು ಧರ್ಮಿಷ್ಠನಾದರೆ ಪ್ರಜೆಗಳು ಧರ್ಮಿಷ್ಠರು; ರಾಜನು ಪಾಪಿಯಾದರೆ ಪ್ರಜೆಗಳು ಪಾಪಿಗಳು; ಪ್ರಜೆಗಳು ರಾಜನನ್ನೇ ಹಿಂಬಾಲಿಸುವರು. ರಾಜನು ಹೇಗೋ ಪ್ರಜೆಗಳು ಹಾಗೆ.

ರಾಜರು ಪಾಪಿಗಳಾಗುವದಕ್ಕೆ ಮೂಲವಾದ ಅವರ ಪ್ರವೃತ್ತಿಗಳೇನೆಂದರೆ—

ಷ॥ ಹುರುಡಿಗರನೇಕಾಂತದೊಳಗಾ | ದರಿಸುವರು; ಭೇದಕರ ಬುದ್ಧಿಗೆ | ತೆರಹುಗೊಡುವರು; ಕುಟಿಲರಿಗೆ ವಿಶ್ವಾಸಹೀನರಿಗೆ ॥ ಮರುಳುಗೊಂಬರು; ಖೂಳರಿಗೆ ಭಂಡರಿಗೆ ತೆರುವರು ಧನಪಸೀಧರೆ | ಯರಸುಗಳಿಗಿದು ಸಹಜ ನಿಸ್ವಂತಸ್ಥವೇನೆಂದ ॥ ೧ ॥ ಒಳಗೆ ಕುಜನರು; ಹೊರಗೆ ಧರಣೀ | ವಲಯವಮಾನ್ಯರು; ಛತ್ರಚಮರದ | ನೆಳಲು ಖೂಳರಿಗಾತಪದ ಒಲುಬೇಗೆ ಬುಧಜನಕೆ ॥ ಒಳಗೆ ರಾಜದ್ರೋಹಿಗಳು, ಹೊರ | ವಳಯದಲಿ ಪತಿಕಾರ್ಯನಿಷ್ಠರು | ಬಳಸಿಹುದು ನೃಪಚರಿತ ನಿಸ್ವಂತಸ್ಥವೇನೆಂದ ॥ ೨ ॥ —(ಕ.ಭಾರ)

ಹೀಗೆ ಮಾಡದೆ ನಡೆಸಬೇಕಾದ ಕೆಲವು ಸರ್ವಸಾಮಾನ್ಯವಾದ ಧರ್ಮಗಳನ್ನು ದಾಸರು ಸೂಚಿಸಿರುವದೆಂತೆಂದರೆ—

ಕಾಂಬೋದಿ—ಝುಂಪೆ

ಇದು ರಾಜಧರ್ಮದೊಳಗಿರುವ ಸಾರ | ಇದನರಿತು ಮನುಜರಾಚರಿಸುವದು ಪೂರ ॥ ಪ ॥ ಅರಿಯಲ್ಪ್ರಸಾದದೊಳ್ ಲಕ್ಷ್ಮಿಯಿರಬೇಕು ಮೇಣ್ | ಉರುವಿಕ್ರಮದೆ ವಿಜಯಲಕ್ಷ್ಮಿ ಬರಬೇಕು ॥ ಪರಮಕೋಪದಿ ಮೃತ್ಯು ನೆಲಸಿ ತೋರಲು ಬೇಕು | ಧರೆಯೆಲ್ಲ ಹಸ್ತದಲಿ ನಲಿದಾಡಬೇಕು ॥ ೧ ॥ ತ್ಯಾಗವಿರೆ ಪಾತ್ರದೊಳು ರಾಗವಿರೆ ಗುಣದೊಳಗೆ | ಭೋಗವಿರೆ ಪರಿಜನಗಳಿಂದ ಕೂಡಿ ॥ ಆಗುಹೋಗುಗಳನರಿತಿರುತ ಜನಭಾವಗಳ | ಬೇಗ ಗ್ರಹಿಸಲು ಬೇಕು ಮುಖವನ್ನು ನೋಡಿ ॥ ೨ ॥ ಸುರಪನಂತೆ ಪ್ರಭುತ್ವವನಲನಂತೆ ಪ್ರತಾಪ | ನೆರೆ ಯಮನವೊಲ್ ಕ್ರೋಧ ತೋರುತಿರಲು ॥ ಉರುಪರಾಕ್ರಮದಲ್ಲಿ ರಾಮನಂತಿರೆ ಶುಭ್ರ | ತರಕೀರ್ತಿ ಧರಣಿಯೊಳು ಬೆಳಗದಿಹುದೇ? ॥ ೩ ॥

ರಾಜರಾಗಲಿ ಇತರರಾಗಲಿ ಎಲ್ಲರೂ ಗ್ರಹಿಸಬೇಕಾದ ಸಾರಾಂಶವೇನೆಂದರೆ—

ಶ್ಲೋ॥ ಅನೇನ ಮರ್ತ್ಯದೇಹೇನ ಯಲ್ಲೋಕದ್ವಯಶರ್ಮದಮ್ | ವಿಚಿನ್ತ್ಯ ತದನುಷ್ಠೇಯಂ ಕರ್ಮ ಹೇಯಂ ತತೋಽನ್ಯಥಾ ॥ —(ಸು)

ಅ॥ ಈ ಮನುಷ್ಯದೇಹದಿಂದ ಇಹಪರಗಳೆರಡರ ಸಾಧನವನ್ನು ವಿಚಾರಮಾಡಿ ಮಾಡಬೇಕಾದ್ದನ್ನು ಮಾಡಬೇಕು; ಬಿಡಬೇಕಾದ್ದನ್ನು ಬಿಡಬೇಕು.

ಈಪ್ರಕಾರ ತನ್ನ ವಿವೇಕದಿಂದ ಪಡೆದ ಹೆಸರೇ ಹೆಸರು—

ಶ್ಲೋ॥ ಉತ್ತಮಾ ಆತ್ಮನಾ ಖ್ಯಾತಾಃ ಪಿತುಃ ಖ್ಯಾತಾಶ್ಚ ಮಧ್ಯಮಾಃ | ಅಧಮಾ ಮಾತುಲಾತ್ಖ್ಯಾತಾಃ ಶ್ವಶುರಾಚ್ಚಾಧಮಾಧಮಾಃ ॥ —(ಸು)

ಅ॥ ತಮ್ಮ ಹೆಚ್ಚುಗಾರಿಕೆಯಿಂದ ಹೆಸರುವಾಸಿಯನ್ನು ಪಡೆದವರು ಉತ್ತಮರು; ತಂದೆ

ಯಿಂದ ಪ್ರಸಿದ್ಧರಾದವರು ಮಧ್ಯಮರು; ಸೋದರಮಾವನಿಂದ ಮುಂದಕ್ಕೆ ಬಂದವರು ಅಧಮರು; ಹೆಣ್ಣುಕೊಟ್ಟ ಮಾವನ ಹೆಸರಿನಿಂದ ಬದುಕುವವರು ಅಧಮಾಧಮರು.

ಸಂಸಾರದಲ್ಲಿರುವವರು ಅನುಸರಿಸಬೇಕಾದ ಧರ್ಮಗಳಿಗೆಲ್ಲ ಶಿಖರಪ್ರಾಯವಾದ ಒಂದೇನೆಂದರೆ—

ಶ್ಲೋ॥ ಸತ್ಯಂ ಬ್ರವೀಮಿ; ಪರಲೋಕಹಿತಂ ಬ್ರವೀಮಿ; । ಸಾರಂ ಬ್ರವೀಮ್ಯುಪನಿಷದ್ಧೃದಯಂ ಬ್ರವೀಮಿ ॥ ಸಂಸಾರಮುಲ್ಬಣಮಸಾರಮವಾಪ್ಯ ಜನ್ತೋ । ಸ್ಸಾರೋಽಯಮೀಶ್ವರಪದಾಮ್ಬುರುಹಸ್ಯ ಸೇವಾ ॥ —(ಪ್ರ.ಸ್ತೋ.)

ಅ॥ ಸತ್ಯವನ್ನು ಹೇಳುತ್ತೇನೆ; ಪರಲೋಕದ ಹಿತವನ್ನು ಹೇಳುತ್ತೇನೆ; ಸಾರವನ್ನು ಹೇಳುತ್ತೇನೆ; ಉಪನಿಷತ್ತಿನ ಜೀವಾಳವನ್ನು ಹೇಳುತ್ತೇನೆ; ಉಲ್ಬಣವಾದ ಮತ್ತು ಅಸಾರವಾದ ಸಂಸಾರಕ್ಕೆ ಬಂದಮೇಲೆ ಪರಮಾತ್ಮನ ಪಾದಸೇವೆಯನ್ನು ಮಾಡುವದೇ ಮುಖ್ಯ.

ಆ ಪಾದಸೇವೆಯನ್ನು ಮಾಡುವದರ ವಿವರವೆಂತೆಂದರೆ—

ಶ್ಲೋ॥ ಮಚ್ಚಿತ್ತಾ ಮದ್ಗತಪ್ರಾಣಾ ಬೋಧಯನ್ತಃ ಪರಸ್ಪರಮ್ ।
ಕಥಯನ್ತಶ್ಚ ಮಾಂ ನಿತ್ಯಂ ತುಷ್ಯನ್ತಿ ಚ ರಮನ್ತಿ ಚ ॥ —(ಭ.ಗೀ)

ಅ॥ ನನ್ನಲ್ಲಿಯೇ ಮನಸ್ಸಿಟ್ಟು ನನ್ನಲ್ಲಿಯೇ ಪ್ರಾಣವನ್ನಿಟ್ಟು ಒಬ್ಬರಿಗೊಬ್ಬರು ತಿಳಿಯಹೇಳುತ್ತ ನನ್ನ ವಿಚಾರವನ್ನೇ ಮಾತಾಡುತ್ತ ಯಾವಾಗಲೂ ತೃಪ್ತಿಯಿಂದಲೂ ಉಲ್ಲಾಸದಿಂದಲೂ ಇರುತ್ತಾರೆ.

ಹೀಗೆ ಮಾಡುವದರಿಂದಾಗುವ ಫಲವೇನೆಂದರೆ—

ಶ್ಲೋ॥ ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ । —(ಭ.ಗೀ)

ಅ॥ ಯಾವಾಗಲೂ ನನ್ನಲ್ಲಿ ಮನಸ್ಸಿಟ್ಟಿರುವ ಅವರ ಯೋಗಕ್ಷೇಮವನ್ನು ನಾನು ಹೊರುತ್ತೇನೆ.

ಎಂದು ಭಗವಂತನು ಹೇಳಿರುತ್ತಾನೆ. ಆದರೆ ಆ ಯೋಗಕ್ಷೇಮವೂ ಲೌಕಿಕಫಲವಾಯಿತೆಂದರೆ ಆ ಭಗವಂತನೇ ಮತ್ತೆ ಹೇಳಿರುವದೇನೆಂದರೆ—

ಶ್ಲೋ॥ ತೇಷಾಮೇವಾನುಕಮ್ಪಾರ್ಥಮಹಮಜ್ಞಾನಜಂ ತಮಃ ।
ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ ॥ —(ಭ.ಗೀ)

ಅ॥ ಅವರ ಮೇಲಿನ ಕನಿಕರದಿಂದಲೇ ನಾನು ಅವರ ಆತ್ಮಸ್ವರೂಪನಾಗಿ ತೋರಿಸಿಕೊಂಡು ಅವರಿಗೆ ಅಜ್ಞಾನದಿಂದ ಹುಟ್ಟಿದ ತಮಸ್ಸನ್ನು ನನ್ನ ಝುಗಝುಗಿಸುವ ಜ್ಞಾನವೆಂಬ ದೀಪದಿಂದ ಹೋಗಲಾಡಿಸುತ್ತೇನೆ.

ಆದ್ದರಿಂದ ಭಗವಂತನಿಗೆ ಅಗತ್ಯವಾಗಿ ಶರಣುಹೋಗಬೇಕೆನಿಸುವಂತೆ ಒಬ್ಬ ಕವಿಯು ಚಮತ್ಕಾರವಾಗಿ ಹೇಳಿರುವದೇನೆಂದರೆ —

ಶ್ಲೋ॥ ಸ್ವೈರಸ್ತ್ರಯೈರ್ಗುಣೈರ್ಯಸ್ಮಿನ್ಸತಿಸುಲಭತಯಾ ಜಾಯತೇ ಸ್ವಸ್ಯ ಲಾಭಃ । ಶ್ರೀರಾಮಾರಾಧನಂ ತತ್ಸ್ಮರಪರಮಹಿತಂ ಹನ್ತ ಸಂತ್ಯಜ್ಯ ಲೋಕೈಃ॥

ಸೇವ್ಯನ್ತೇ ತೇ ನರಾ ಅಸ್ಮತಿಕಠಿಸತರಾರಾಧನಾ ಅಪ್ಯಧನ್ಯಾ। ಹಾ! ಹಾ! ಹಾ! ಕೋsಯಮೇಷಾಂ ಕಲಿತಿಮಿರಕೃತೋ ನಷ್ಟಚಾಕಶ್ಚಿಷ್ಕಭಾವಃ ॥ —(ಸು.ಲಾ)

ಅ॥ ಯಾವ ದೇವರನ್ನು ಯಾವಾಗಲೂ ಧ್ಯಾನಿಸುವದರಿಂದ ಅತಿಸುಲಭವಾಗಿ (ಸ್ವಸ್ವ) ಹಣದ ಅಥವಾ ಆತ್ಮಜ್ಞಾನದ ಲಾಭವಾಗುವದೊ ಅಂಥದ್ದೂ ಮತ್ತು ದೇವತೆಗಳಿಗೂ ಸ್ತೋತ್ರಾರ್ಹವಾದದ್ದೂ ಆದ ಶ್ರೀರಾಮನ ಆರಾಧನೆಯನ್ನು ಬಿಟ್ಟು ಜನರು (ಅಧನ್ಯಾ) ಹಣವಿಲ್ಲದವರಾದ ಮತ್ತು ಅತಿಕಠಿನಸ್ವಭಾವದವರಾದ ಮನುಷ್ಯರ ಆರಾಧನೆಯನ್ನು ಮಾಡುತ್ತಾರೆ. ಹಾ! ಇವರದು ಕಲಿದೋಷದಿಂದ ಎಂಥ ಕುರುಡುತನ!

ಇಂಥ ಉಪದೇಶದಿಂದ ವಿವೇಕವನ್ನು ಹೊಂದಿದ ಭಕ್ತರ ಹಂಬಲಿಕೆ ಹೇಗಿರುವದೆಂದರೆ—

ಖರಹರಪ್ರಿಯ—ರೂಪಕ

ಮಂತ್ರವೆಂದು ಸಿದ್ಧಿಸುವದೊ । ಶ್ರೀರಾಮತಾರಕ ॥ ಪ ॥ ಮಂತ್ರಗಳೊಳಗೆಲ್ಲ ಮಹಾ । ಮಂತ್ರವೆಂದು ಹೆಸರ ಪಡೆದ ॥ ಅ.ಪ ॥ ಗಿರಿಶನು ಬಹು ಪ್ರೀತಿಯಿಂದ । ಗಿರಿಜೆಗೊರೆದುದಾಗಿ ಮತ್ತೆ ॥ ಸರಿಗೆಲ್ಲ ಕಾಶಿಯಲ್ಲಿ । ಮರಣಗಾಲದಲ್ಲಿ ಪೇಳ್ವ ॥ ೧ ॥ ಸುರನರಕಿಂಪುರುಷರೆಲ್ಲ। ಪರಮಪ್ರೀತಿಯಿಂದಲಿ ॥ ಭರದಿ ಜಪಿಸಿ ಸೌಖ್ಯದಿಂದ । ಮೆರೆಯುವಂತೆ ಮಾಡಿರುವಾ ॥೨॥ ಮರವೆಯೆಂಬ ಕತ್ತಲೆಯ । ತರಣಿಯಂತೆ ಓಡಿಸುವ ॥ ಪರಮತತ್ತ್ವವನ್ನು ತಿಳಿಸಿ । ವರಚಿತ್ಸುಖ ವೀಯುವಂಥ ॥ ೩ ॥ —(ಭಕ್ತಿ.ಗೀ)

ಈ ಹಂಬಲಿಕೆಯನ್ನು ಆರಗೊಡದೆ ವಿಷಯಗಳ ನಡುವೆಯೇ ಇದ್ದು ರಾಜಧರ್ಮವನ್ನು ನಡೆಸುವದು ಬಹುಕಷ್ಟವಾದ್ದರಿಂದ ಆ ಸಂದರ್ಭದಲ್ಲಿ ಮನುಷ್ಯನು ಹೆಚ್ಚು ಪ್ರಯತ್ನಮಾಡಲೆಂದು ಉದ್ದೇಶಿಸಿ ಭಾಗವತಶಿರೋಮಣಿಗಳು ಪೀಠಿಕೆಯಲ್ಲಿ "ಬಲುಕಠಿನವು ರಾಜಧರ್ಮ" ಎಂದು ಮೊದಲಾಗಿ ಉಪದೇಶಿಸಿರುವರು. ಅಂಥ ರಾಜಧರ್ಮಗಳು ಆಚರಣೆಗೆ ಶಕ್ಯವೆಂದು ತೋರಿಸುವದಕ್ಕಾಗಿ "ಶ್ರೀರಾಮಪಟ್ಟಾಭಿಷೇಕ"ವೆಂಬ ಆಖ್ಯಾನವು ನಿರೂಪಣಮಾಡಲಾಗುವದು.



# ಆಖ್ಯಾನ

ಕೀ॥ ದನುಜಾನುಜಗಭಿಷೇಕಗೈದ ಮೇಲೆ। ಲಿಸಕುಲಜನು ಸೀತೆಯಬಳಿಗೆ ॥ ಹನುಮಂತನನಟ್ಟಿದನೀ ಸುದ್ದಿಯ। ಸನುವಿಂ ತಿಳುಹಲ್ಕಿನಿಯಳಿಗೆ ॥

ಹನುಮಂತನು ಬಂದು ಹೇಳಿದ್ದು—

ಕಾನಡಾ—ಆದಿತಾಳ

ಕೇಳು ತಾಯಿಯೆ । ತಾಳು ಹರ್ಷವನು ॥ ಕೊಳುಹೋದನಾ ಕೀಳು ರಾವಣನು ॥ ಪ ॥ ಕ್ಷೇಮದಿಂದಲಿಹ । ಸ್ವಾಮಿ ರಾಮಚಂದ್ರ ॥ ಆ ಮಹಾತ್ಮ

ನಾದ ಸೌಮಿತ್ರಿಯೊಡನೆ ॥ ೧ ॥ ಲಂಕೆಯಿಂದಾಗ ಸಮ್ಮುಖಕೆಯಲ್ಲಿಹುದು | ಶಂಕೆಯನ್ನು ಬಿಡೌ | ಪಂಕಜಜಾತನೇತ್ರ ॥ ೨ ॥ ತಡಸಿಲ್ಲದಿನ್ನು | ಪಡೆವೆ ರಾಮನನ್ನು | ಕಡುದುಃಖವನ್ನು ಕಡೆಹಾಯ್ದೆ ನೀನು ॥ ೩ ॥

ಅದಕ್ಕೆ ಸೀತೆಯ ಉತ್ತರ—

✓ಚೌ॥ ಶ್ರೀಬಿರಿಸಿದುದು ಕೀರ್ತಿ ರಘುಕುಲ—ಪಾಕೆವಾಳಸಿಂಗಲೇ | ನಾಕದವರುಂ ಪೊಗಳೆ ತತ್ಕುಲ—ರಾಖಿ ತಳೆತುದು ಬೇಗಲೆ ॥ ಆ ಕ್ರಮದಿಳುಹಿನಾ ಪಾತಾಪ ಮ—ಯುಖಮಾಲಿಯು ಸಮನೆನೆ | ಲೋಕದೊಳ್ಪಿನ್ನ ರಾಮನ ಪೋಕೆಯಾಮದು ಹನುಮನೆ ॥

ಆಗ ಹನುಮಂತನು ಹೇಳಿದ್ದು—

✓ಚೌ॥ ಅದುವೆ ನಿಮ್ಮ ಪತಿವ್ರತಾ ಸಂ—ಪದದ ಗುಣವೇ ಅಲ್ಲದೆ | ಉದಧಿತಾ ಕಲ್ಲನೊಳು ಸೇತುವ—ಮುದದಿ ಕಟ್ಟಿಸಿಕೊಂಬುದೇ? ॥ ಒದಗಿ ಕಪಿಕುಲವೀ ನಿಶಾಚರ—ಕದನದಲಿ ತಾ ಗೆಲುವುದೇ? | ತ್ರಿದಶರಿಪುವನು ಕೊಲುವನೆ? ಇದು ಸಮಸ್ತವು ನಿಮ್ಮದೇ ॥

ಹೀಗೆಂದು ಹನುಮಂತನು ತಿರುಗಿ ಬಂದ ಮೇಲೆ—

✓ಸಾ॥ ಹೋಗು ವಿಭೀಷಣ ಸೀತೆಯ ತಾರೆನೆ | ಆಗಲೆ ಸ್ನಾನವ ಗೈಸಿ ॥ ಬೇಗ ಸೀತೆಯನು ಪುಷ್ಪಕಕೇರಿಸಿ | ಸಾಗಿ ಬಂದನಡ್ಡೈಸಿ ॥

ಪುಷ್ಪಕಾರೂಢಳಾಗಿ ಬರುತ್ತಿರುವ ಸೀತೆಯನ್ನು ನೋಡಲವಕಾಶವಿಲ್ಲದೆ ಕಪಿಗಳು ರಾಮನ ಬಳಿಗೆ ಹೇಳಿಕೊಳ್ಳುವದಕ್ಕೆ ಬಂದಿದ್ದಾರೆ. ಆಗ—

✓ಸೀ॥ ಸೀತೆ ಬರುತಿಹಳೆಂಬ ಮಾತ ಕೇಳುತ ಮನದಿ—ಪ್ರೀತಿಯಿಂದಾದ ಸಂತೋಷವೊಂದು | ಕಾತರಿಸುತಲಿ ಸೀತೆ ರಾವಣನ ಸೆರೆಯೊಳಗೆ—ರೀತಿಗೆಟ್ಟುದರಿ ಸನುತಾಪವೊಂದು ॥ ಭೂತಲದಿ ಪರಗೃಹದೊಳಿರ್ದ ಸತಿಯನು ಗ್ರಹಿಪು—ದೇತರುತ್ನವವೆಂಬ ರೋಷವೊಂದು | ಈ ತೆರದ ಬಗೆಬಗೆಯ ಭಾವನೆಗಳಿಗೆ ಮನವ—ನೋತಿರ್ದ ರಘುಕುಲದ ನಾಥನಂದು ॥ ಮಾತನಾಡದೆ ತಲೆಯ ಬಗ್ಗಿಸಿರಲು | ಸೀತೆಯನು ನೋಳ್ಪ ವಾನರರ ಸಾಲು | ಪ್ರೀತಿಯಿಂ ನೋಡಲೆಡೆದೊರೆಯದಿರಲು | ಭೀತಿಯಿಂ ಬಂದರೊಡೆಯಗೆ ಹೇಳಿಕೊಳಲು ॥

ಆಗ ರಾಮನು ವಿಭೀಷಣನಿಗೆ ಹೇಳುತ್ತಾನೆ—

**ನೋಟ್**

ಏಕೆ ತಡೆಯುವಿರಿ ಕಪಿಗಳನು? | ನಾಕು ನೋಡಬಿಡಿರಾಕೆಯನು ॥ ಪ ॥ ಅನವರತಾಚಾರನೆ ಜಗದಿ | ಅನವರತಾವರಣವು ನಿಜದಿ ॥ ಅವನಿಯೊಳದನುಳಿದೀ ತೆರದಿ | ಹವಣಗೆಡಿಪುದಲ್ಲುತ್ಸವದಿ ॥ ೧ ॥ ವಾನರರೆಮ್ಮವರಾಗಿರಲು | ವಾನರ ಜನಕೀ ಸ್ಥಿತಿ ಬರಲು ॥ ಹೀನವಿದಲ್ಲವೆ ಯೋಚಿಸಲು? | ನೀನಿದ ತಪ್ಪಿಪುದೈ

ಮೊದಲು ‖ ೨ ‖ ಮುಕ್ಕಳು ತಾಯಿಸು ನೋಡುವೊಡೆ। ಕಕ್ಕುಲಿತೆಯಿಂದಿಷ್ಟಗು ವೊಡೆ ‖ ಕರ್ಕಶನೀ ನುಡಿ ಕೇಳುವೊಡೆ। ತಕ್ಕುದಾಯಿತನು ಮಾಡು ನಡೆ ‖ ೩ ‖

ಇದನ್ನು ಆಚಾರವಿರುದ್ಧವೆಂದು ತಿಳಿಯಬೇಡವೆಂದು ಇನ್ನೂ ಹೇಳುತ್ತಾನೆ—

ಕಂ‖ ಭರದಿಂ ಸ್ವಯಂವರದೊಳಂ। ಪರಿಣಯದೊಳಮಂತೆ ರಣದೊಳಂ ಯಜ್ಞದೊಳಂ ‖ ಉರುವಿಪದಂಗಳೊಳಂ ಸಂ। ದರುಶನಕ್ಕನ್ನು ರಲ್ತು ಸಿರಂಕಿಸೆ ಪರರಿ ‖ —(ರಾ.ಅ.ನಾ)

ಇಷ್ಟೇ ಅಲ್ಲ—

ಶ್ಲೋ‖ ಪಾದಚಾರೇಣ ಸಾ ಯಾತು ಜಾನಕೀ ಮಮ ಸನ್ನಿಧಿಮ್ ‖ —(ಅ.ರಾ)

ಟ‖ ಆ ಸೀತೆಯು ಕಾಲನಡಿಗೆಯಿಂದ ನನ್ನ ಬಳಿಗೆ ಬರಲಿ.

ಎಂಬ ರಾಮಾಜ್ಞೆಯಂತೆ ವಿಭೀಷಣನ ಹಿಂದೆ ಪಾದಚಾರಿಯಾಗಿ ಬಂದ ಸೀತೆಯು—

ಸೀ‖ ಪತಿಯ ಮುಖವನು ಮತ್ತೆ ನೋಳ್ಪ ಯೋಗದೊಳಗಂ—ಗತಿಶಯ ವಿದೆಸಿಸಿದಾಶ್ಚರ್ಯವೊಂದು। ಕ್ಷಿತಿಯೊಳಗೆ ಬಹುಕಾಲದಿಂದಗಲಿದಾ ತನ್ನ—ಪತಿಯ ಕಂಡುದರಿನಾನಂದವೊಂದು ‖ ಪತಿಯರಿಗೆ ಸಹಜವಾಗಿರ್ಪಂತೆ ತನಗು ಮಾ—ಪತಿಯೆ ಗತಿಯೆಂದೆಂಬ ಪ್ರೇಮವೊಂದು। ಪ್ರತಿದಿನಾರುತವು ಮಾರು ಮನದೊಳೊಮ್ಮೆಯೆ ತೋರೆ—ಪತಿವ್ರತಾಮಣಿಯಾದ ಸೀತೆಯಂದು ‖ ಅತಿಹಿತದೊಳಾರ್ಯಪುತ್ರನೆ ನಾಥ ಎಂದು। ಪತಿಯ ಬಳಿಯಲ್ಲಿಯೇ ಬಳಲಿ ನಿಂದು। ಅತುಲ ಸುಖದಿಂದ ಕಣ್ಣೀರನಾಂತು। ಅತಿಲಜ್ಜೆಯಿಂದಿರ್ದಳಳಲಿ ನೊಂದು ‖

ಈ ಪ್ರಕಾರ ಸೀತೆಯನ್ನೊಪ್ಪಿಸಿ ವಿಭೀಷಣನು ರಾವಣನ ಅಪರಾಧವನ್ನು ತಿದ್ದಿದ್ದನ್ನು ನೋಡಿಯೇ ಟೀಕಿಕೆಯಲ್ಲಿ ಭಾಗವತಶಿರೋಮಣಿಗಳು "ಹಿಂದಿನವರ ತಪ್ಪಿಸ್ತರೆ" ಎಂಬ ನುಡಿಯನ್ನು ಹೇಳಿರುವದು.

ಆಗ ರಾಮನು ಎಲ್ಲರಿಗೂ ಆಶ್ಚರ್ಯವಾಗುವಂತೆ ಹುಬ್ಬು ಗಂಟುಹಾಕಿಕೊಂಡು ಹೇಳುತ್ತಾನೆ—

ಷ‖ ಸ್ತ್ರೀಯೆ ಲೋಕನೊಳಿವಳು? ಲೋಕದ। ಮಾಯಕಾತಿಯರಿವಳ ಶಿಷ್ಯರು; । ನೋಯಿಸುತಡಪಿಯಲಿ ಸೂಕಿದಳಿವಳು ಲಕ್ಷ್ಮಣನ; ‖ ಮಾಯ ಬೆರಳೆಯ ನೆಪದಲನುರ। ರಾಮನಲಿ ಸಂಕೇತ ನಡೆದುದು; । ದಾಯ ತಪ್ಪಿತು ಕಡೆಯಲಿದ ನೀವರಿಯಿರೈ ಎಂದ ‖ —(ತೊ.ರಾ)

ಇದರ ಪರಿಣಾಮವೇನಾಯಿತೆಂದರೆ—

ದಿಂ‖ ಎಂದ ಮಾತಂ ಕೇಳುತ್ತ ಸೀತೆಯಾಗ। ನೊಂದು ಕರ್ಣಗಳಂ ಮುಚ್ಚಿ ಮರುಗೆ ಬೇಗ ‖ ನಿಂದು ವಾನರರುಂ ಬೆಚ್ಚಿಬಿದ್ದು ನೋಡೆ। ಅಂದು ಲಂಕೇಶಂ ಬೆದರ್ದನಾಗ ನಾಡೆ ‖

ಆಗ ರಾಮನು ಸೀತೆಗೆ ಹೇಳುತ್ತಾನೆ—

**ಸುರುಟಿ—ಏಕತಾಳ**

ಹೋಗು ಹೋಗು ಸೀತೆ । ಬಿಟ್ಟೆ ನಾ । ನೀಗ ಜನಕಜಾತೆ ॥ ಪ ॥ ನೀಗ ಲೆಂದು ಬಂದವನಾಸನ ನಾ । ಹೀಗೆ ಜಯಿಸಿದೆನು ಕೇಳಪಸೀತೆ ॥ ಅ.ಪ ॥ ಪರ ಗೃಹದೊಳಗಿದ್ದ । ನಿನ್ನನು । ಪರಿಪರಿಶಂಕಿಪೆನು ॥ ತಿರುಗಿ ನಿನ್ನ ನಾ ಸೇರಿಸಲಾ ರೆನು । ಭರದಿ ಸೇರು ನೀ ಮನಬಂದೆಡೆಯನು ॥ ೧ ॥ ದುರುಳನನ್ನು ನೀನು । ಮುಟ್ಟಿಹೆ । ಮರೆಯ ಮಾತದೇನು? ॥ ದುರುಳದೃಷ್ಟಿಯಿಂ ದೂಷಿತಳಾಗಿಹೆ । ತರಣಿವಂಶದವರೊಳಗಿರೆ ಸದರವೆ? ॥ ೨ ॥

**ಅದಕ್ಕೆ ಸೀತೆಯು ದುಃಖಿಸುತ್ತ ಮನಸ್ಸಿನಲ್ಲಿಯೇ ಯೋಚಿಸುತ್ತಾಳೆ—**

✓ಸೀ॥ ವೀರ ಹನುಮಂತನಿದ ತಿಳಿಸಿದೊಡಾಗ ಕೈ–ಸಾರಿ ಪ್ರಾಣಗಳನ್ನ ತ್ಯಜಿಸುತಿದ್ದೆ । ಈ ರೀತಿಯಹ ಘೋರಯುದ್ಧದೊಳು ನಾಥನಿಗೆ -ಭೂರಿಕಷ್ಟಗಳ ತಪ್ಪಿಸುತಲಿದ್ದೆ । ಆರಾಮದೊಳಗಿಪ- ವಾನರರಿಗೀಶ್ವರನೆಯು–ಬಾರದಂಪದೊಳು ನಾ ಗೈಯುತಿದ್ದೆ । ಕ್ರೂರವಾದೀ ವಿರಹಸಂಕಟವನಿನಿತುದಿನ–ವಿಚಾರಿ ಭೋಗಿಪುದ ನಾ ಕಳೆಯುತಿದ್ದೆ ॥ ಆದಯಲ್ ರಾಮನ ರೀತಿಯಿಂದ । ನಾರೀಸ್ವಭಾವದೊಳ್ ದೃಷ್ಟಿಯಿಂದ । ಕಾರುಣ್ಯಮೂರ್ತಿತ್ವವನ್ನು ಮರೆದು । ಈ ರೀತಿ ಜರಿಯುತಿಹ ನೆನ್ನನಿಂತು ॥

ಎಂದು ಉತ್ತರವನ್ನು ಹೇಳುತ್ತಾಳೆ—

**ಕಾನಡಾ—ರೂಪಕ**

ಮನದಿ ತಿಳಿದು ನೋಡು ನೀನು । ಇನಿಯ, ಎನ್ನನು ॥ ಪ ॥ ಜನಗಳೊಪ್ಪ ಬಹುದೆ? ಇದನು ಅನಘ ಪೇಳುವೆನು ॥ ಅ.ಪ ॥ ದುರುಳ ಮುಟ್ಟಲೆನ್ನ ತಪ್ಪೆ? । ಕರೆದು ಕೇಳು ಮೈನನನ್ನು ॥ ಅರಿಯಲಬಲೆಯಲ್ಲವೆ ನಾ? । ಬರಿದೆ ಭಂಗಿಸಬಹುದೆ ಎನ್ನ? ॥ ೧ ॥ ಭೂಮಿಯುದರದಲ್ಲಿ ಹುಟ್ಟಿ । ಕಾಮಿಸುವೆನೆ ಭೂದ್ರೋಹಿಯ? ॥ ಪ್ರೇಮದಿರುವ ತಿಳಿಸಲಿನ್ನು । ಸ್ವಾಮಿ ನಾನಿನ್ನೇನ ಮಾಡಲಿ? ॥ ೨ ॥ ಇಷ್ಟು ಕಾಲ ಜೊತೆಯೊಳಿದ್ದು । ಇಷ್ಟು ಕಾಲ ಕೂಡಿ ಬೆಳೆದು ॥ ಇಷ್ಟು ಸಂಶಯವಾಗ ಬಹುದೇ? । ಕಷ್ಟ ಕಷ್ಟ ಕಷ್ಟ ಹಾ! ಹಾ! ॥ ೩ ॥

✓ಕೀ॥ ಬರಿಯಪವಾದವ ಹೊತ್ತು ಧರಣಿಯೊಳ । ಇರಲಾರೆನು ಲಕ್ಷ್ಮಣ ಕೇಳು ॥ ವಿರಚಿಸಗ್ನಿಯನು ಹೊಗುವೆನು ಮತ್ತೀ । ನರಿಯಲೇತಕಿನ್ನೀ ಬಾಳು ॥

**ಆಗ ಲಕ್ಷ್ಮಣನು ಅಗ್ನಿಯನ್ನುರಿಗೊಳಿಸುತ್ತಲೆ ಈ ಆಶ್ಚರ್ಯವನ್ನು ನೋಡುವದಕ್ಕೆ ದೇವತೆ ಗಳೆಲ್ಲ ನೆರೆದಿರಲು ಸೀತೆ ಅಗ್ನಿಯನ್ನು ಪ್ರಾರ್ಥಿಸುತ್ತಾಳೆ—**

ಶ್ಲೋ॥ ಮನಸಿ ವಚಸಿ ಕಾಯೇ ಜಾಗರೇ ಸ್ವಪ್ನಮಾರ್ಗೇ । ಯದಿ ಮಮ ಪತಿಭಾವೋ ರಾಘವಾದನ್ಯಪುಂಸಿ ॥ ತದಿಹ ದಹ ಮಮಾಙ್ಗಂ ಪಾವಕಂ ಪಾವಕ ತ್ವಮ್ । ಸುಲಲಿತಫಲಭಾಜಾಂ ತ್ವಂ ಹಿ ಕರ್ಮೈಕಸಾಕ್ಷೀ ॥ —(ಸು)

ಅ॥ ಮನಸ್ಸಿನಲ್ಲಾಗಲಿ, ಮಾತಿನಲ್ಲಾಗಲಿ, ಶರೀರದಲ್ಲಾಗಲಿ, ಎಚ್ಚರದಲ್ಲಾಗಲಿ, ಕನಸಿನಲ್ಲಾಗಲಿ, ನನಗೆ ರಾಘವನ ಹೊರತು ಇತರರಲ್ಲಿ ಪತಿಭಾವನೆಯುಂಟಾಗಿದ್ದರೆ ಹೆ, ಅಗ್ನಿ, ನನ್ನ ಪಾಪರೂಪವಾದ ಈ ದೇಹವನ್ನು ನೀನು ಸುಡು.

ಎಂದು ಅಗ್ನಿಪ್ರವೇಶಮಾಡುತ್ತಲಿ ಆದದ್ದೇನೆಂದರೆ—

ಶ್ಲೋ॥ ಪ್ರಾವಿಕ್ಷದಗ್ನಿಂ ಪರಂ ನಿಜಶುದ್ಧಿಹೇತೋಃ। ದೇವೀ ವಿಶುದ್ಧಚರಿತಾ ಜನಕಸ್ಯ ಪುತ್ರೀ ॥ ಅಂಹಶ್ಚಿರಂ ಹಿ ಯದಪಾವನವಸ್ತುಸಙ್ಗಾ। ತ್ತ್ಯಕ್ತುಃ ಸ್ವಯಂ ತದನುಪಾವನತಾಂ ಬಭೂವ ॥ —(ರಾ.ಚಂ)

ಅ॥ ನಿರ್ಮಲವಾದ ಚರಿತ್ರೆಯುಳ್ಳ ಆ ಜನಕನ ಮಗಳಾದ ಸೀತಾದೇವಿಯು ತನ್ನ ಶುದ್ಧಿಗಾಗಿ ಅಗ್ನಿಯನ್ನು ಪ್ರವೇಶಿಸಲಾಗಿ ಆ ಅಗ್ನಿಯು ತಾನೇ ಬಹುಕಾಲದಿಂದ ಅಪವಿತ್ರವಸ್ತುಗಳನ್ನೆಲ್ಲ ತಿಂದ ಸಂಸರ್ಗದ ಪಾಪವನ್ನು ಕಳೆದುಕೊಳ್ಳುವವನಾದನು.

ಆಗ ಎದ್ದ ಜ್ವಾಲೆಯು—

✓ಕಾ॥ ತುಡುಕಿತಂಬರದುದಿಯ ಶಿಖಿ; ಹೊಗೆ-ಹೊಡೆದುದಭ್ರಸಮೂಹಕೆ;। ಸಿಡಿದು ತಾರೆಗಳೆಲ್ಲ ಬಿದ್ದವು-ತಡವರದೆ ಭೂಭಾಗಕೆ; ॥ ಕಿಡಿಗಳೆದ್ದವು ಕೇಸುರಿಗಳಿಂ-ಧುಮುಧುಮಿಸುತಲಿ ನಾಕಕೆ;। ಪೊಡವಿವಧು ಕಣ್ಮುಚ್ಚೆ, ಭಾರತಿ। ನಡುಗಿದಳು ಶಿಖಿಸಂಗಕೆ ॥

ಆಗ ಅಗ್ನಿಪುರುಷನು ಸೀತೆಯನ್ನೆತ್ತಿಕೊಂಡು ಬಂದು ನಿಂತಿದ್ದಾನೆ—

ಷ॥ ಕುಶನೆ ಕೇಳು ಪತಿವ್ರತೆಯುರಿಗೆ। ನಿಷದನಮೃತನಹುದುರಿ ಮಿನಸಾಸ್ತ್ರ। ರಸನಹುದುದು; ಬಲು ಹಾವು ನೇಸಣಾನಹುದು ಬೆಂಬಿಡದೆ; ॥ ಎಸಗಿದಘ ಪಾಪಂಗಳವು ತಾ। ನಸಿಸನಪ್ಪವು; ಸಿದ್ಧ ಸಾಕುಪ। ಶಿಶುಪಿನವೊಲಿಪ್ಪಳು ಸಿದೇಹಜೆ ಕೈಗಳಲಿ ಶಿಖಿಯು ॥ —(ತೊ.ರಾ)

ಟಿ॥ ನೇವಣ—ಹಗ್ಗ. ನಸಿನವಪ್ಪವು—ಕಳೆದುಹೋಗುವವು.

ಹೀಗೆ ಸೀತೆಗೆ ಸೆಕೆ ತಾಕದೆ ಇದ್ದದ್ದನ್ನು ಮತ್ತೊಬ್ಬ ಕವಿ ವರ್ಣಿಸಿರುವದೆಂತೆಂದರೆ—

ಕಂ॥ ಪೊಡವಿಯೊಳಿರ್ಪೆಲ್ಲವುಮಂ। ಸುಡುವಸದೃಶಮಾದ ಶಕ್ತಿಯುಳ್ಳಗ್ನಿಯುಮಂ ॥ ಸುಡುವಳ್ಪತಿವ್ರತೆಯೆನೆ। ಸುಡದಗ್ನಿಯು ಸೀತೆ ಬಿಟ್ಟುದತ್ತಾಶ್ಚರ್ಯಂ? ॥ —(ರಾ.ನಾ)

ಟಿ॥ ಸುಡುವ+ಅಸದೃಶಮಾದ. ಸುಡದೆ+ಅಗ್ನಿಯು.

ಶ್ಲೋ॥ ಅಚಿನ್ತ್ಯಂ ಶೀಲಗುಪ್ತಾನಾಂ ಚರಿತಂ ಕುಲಯೋಷಿತಾಮ್ ॥ —(ಕ.ಸ.ಸಾ)

ಅ॥ ಶೀಲದಿಂದ ರಕ್ಷಿತರಾಗಿರುವಂಥ ಕುಲಸ್ತ್ರೀಯರ ನಡೆವಳಿಕೆಯು ಹೀಗೆಂದೂಹಿಸುವದಕ್ಕೆ ಸಾಧ್ಯವಿಲ್ಲ.

ಅಂಥ ಶೀಲವಿರುವದರಿಂದಲೇ —

ಶ್ಲೋ|| ಅಹಲ್ಯಾ, ದ್ರೌಪದೀ, ಸೀತಾ, ತಾರಾ, ಮಂದೋದರೀ ತಥಾ। ಪಞ್ಚಕಂ ನಾ ಸ್ಮರೇನ್ನಿತ್ಯಂ ಮಹಾಪಾತಕನಾಶನಮ್ || —(ಸು)

**ಅ|| ಅಹಲ್ಯಾ, ದ್ರೌಪದೀ, ಸೀತಾ, ತಾರಾ, ಮಂದೋದರಿ— ಈ ಐವರನ್ನು ಮನುಷ್ಯನು ಯಾವಾಗಲೂ ಸ್ಮರಿಸಬೇಕು. ಇದರಿಂದ ಮಹಾಪಾತಕಗಳು ನಾಶವಾಗುವವು.**

ಎಂಬ ಶ್ಲೋಕದಂತೆ ಸೀತೆ ಪ್ರಾತಃಸ್ಮರಣೀಯಳಾಗಿದ್ದಾಳೆ.

ಈಪ್ರಕಾರ ಅಗ್ನಿಪುರುಷನು ಸೀತೆಯನ್ನು ಎತ್ತಿಕೊಂಡು ಮೇಲಕ್ಕೆ ಬರುತ್ತಲೆ—

ಷ|| ಬಳಿಕ ಮಹಾದೇವಿಯರ ಸೀತೆಯ। ಲಲಿತಹಸ್ತಾಂಬುಜವನಾ ರಘು। ಕುಲಶಿರೋಮಣಿಯು ಮಲಕರಕಮಲದಲಿ ಸಂಘಟಿಸೆ || ಸಲಿಸಭವಸತಿಸಹಿತ ಮುಕ್ತಾಫಲದ ಸೇಸೆಯ ತಳೆದರಮರಾ। ವಳಿಯ ಸುದತಿಯರೊಲಿದು ಹೊಂಪಳಿಗೆಗಳ ಹಂತಿಯಲಿ || —(ತೊ.ರಾ)

ಆಗ ಬ್ರಹ್ಮಾದಿದೇವತೆಗಳೆಲ್ಲರೂ ರಾಮನನ್ನು ಸ್ತೋತ್ರಮಾಡುತ್ತಾರೆ—

✓ ಚೂ|| ರವಿವಂಶಜಲನಿಧಿಯೊಳೊಗೆದ ಚಂದ್ರ, ದಶರಥಪ್ರೀತಿವರಧಿಗೆ ನೀನು ಕೇಂದ್ರ, ಮನುಜವರ್ಗದೊಳೆಲ್ಲ ನೀನೆ ಇಂದ್ರ, ಮುರುಳಿಜನಹೃದಯದೊಳು ಗೈವೆ ರಂಧ್ರ, ರಾಘವೇಂದ್ರ। ಕೌಸಲ್ಯೆಯುದರದೊಳು ಬಂದನೆಸಿಜಾತ, ಮುನಿಪವಿಶ್ವಾಮಿತ್ರಯಜ್ಞದೊಳ್ ತ್ರಾತ, ತಾಟಕಿಯ ನೋಡುತಲೆ ಮಾಡಿದೆಯೊ ಘಾತ, ಜನನಿಜಯತಾತ, ಆಲಿಸುದು ನೀನೆನ್ನ ಮಾತ, ಜನಕಜಾಮಾತಾ, ವಿಷ್ಣ್ವಂಶಜಾತ, ಸಕಲಪ್ರದಾತ, ಭವಜಲಧಿಪೋತ, ದುರ್ಜನರಿಗಪ್ಪಿಯೊ ಕಿರಾತ, ಗುಣಗಣೋಪೇತ, ತ್ರಿಗುಣಾತೀತ। ನಿನ್ನಿಂದಹಲ್ಯೆಯುದ್ಧಾರ, ನಿನ್ನನುಗ್ರಹವು ಬಹುಪ್ರಕಾರ, ನೀನು ಭವಪಂಜರದ ಕೀರ, ರಾಕ್ಷಸರಿಗತಿಕ್ರೂರ, ನಿನ್ನ ದೆಸೆಯಿಂದಾಯ್ತು ಧರ್ಮಪ್ರಚಾರ, ನೀನುಟ್ಟೆ ಅಡವಿಯೊಳು ಚೀರ, ನೀನು ಭಗವಂತನವತಾರ, ಭಾರ್ಗವನ ಗೆಲಿದೆ ನೀ ತೀರ, ಶಿವಧನುಸ್ಸನು ಮುರಿದ ಧೀರ, ಸೀತಾಂಬಕೇಂದುಚಕೋರ, ನೀ ಕಳೆದೆ ದುರ್ಜನರ ಗರ್ವಭಾರ, ಪಿತೃವಾಕ್ಯಪಾಲನೆಯ ದೀಕ್ಷೆಯುದಾರ, ಸುಜನರಿಗೆ ಕ್ಷೀರ, ಕುಜನರಿಗೆ ಕ್ಷಾರ, ದೀನಮಂದಾರ। ಪಾದುಕೆಯ ಕೊಟ್ಟು ಭರತನ ಸಂತಯಿಸಿದೆ, ಮೋದದಿಂ ಚಿತ್ರಕೂಟದಿ ವಾಸಗೈದೆ, ಗುಹನ ನಿನ್ನವನೆಂದು ಮುದದಿ ಭಾವಿಸಿದೆ, ಅಹಹಾ! ಜಟಾಯು ಮೈತ್ರಿಯನು ಒಳಿಯಿಸಿದೆ, ಪಂಚವಟಿಯೊಳು ಪಾದತಲವ ಸುಳಿಯಿಸಿದೆ। ಶೂರ್ಪನಖಿಗಾಯ್ತು ನಿನ್ನಿಂ ಮಾನಭಂಗ, ಶಬರಿಗಾಯ್ತರಿಯಲ್ಕೃಪಾಪಾಂಗ, ಮಾರೀಚಗಾಯ್ತಂತಕನ ಸಂಗ, ಅಪರಿಪರ್ಗೈ ನಿನ್ನಂತರಂಗ, ಆರಿಗೈ ದಕ್ಕುವದು ನಿನ್ನ ರಣರಂಗ?, ರೂಪಿನೊಳನಂಗ, ಮುನಿಹೃತ್ಕಮಲಭೃಂಗ, ರಂಗ। ಶರಣೆಂದ ಕಾಕನನು ಪೊರೆದೆ, ಪೊರೆಯುವದು ನಿನಗೇನು ಹಿರಿದೇ?, ಶರಣಜನಪಾಪಗಳ ಮರೆದೆ, ಎರಗಿದವರೆಡರುಗಳ ಮುರಿದೆ, ಎಣೆಯಿಲ್ಲದವನಾದೆ ಧುರದೆ, ಧರೆಯ ರಕ್ಷಿಪುದು ನಿನಗರಿದೆ?, ವರವಿಭೀಷಣಗೆ

ನೀ ದೊರೆದೆ, ಋಷಿಗಳನು ಪೊರೆದೆ ನೀನಿಂದೆ, ಧರೆಯ ಕಂಟಕರನ್ನು ತರಿದೆ, ಕರು ಣದೊಳು ಮುನಿಗಳನು ಕರೆದೆ. ಪರಮಾರ್ಥತತ್ತ್ವಗಳನೊರೆದೆ, ಧುರಕೆ ನಿಂದ ಪರ ನೀಸರೆದೆ, ದುರ್ಘಟನಾಸಿಗಳ ನೀ ಜರಿದೆ, ನೀನೊಲಿಯದಿರಲೆಲ್ಲ ಬರಿದೇ, ನೀನೆನ್ನ ರಕ್ಷಿಪುದು ಭರದೆ, ಕೃಪಾಶರಧೆ ॥

ಆಗ ವಿಮಾನಾರೂಢನಾಗಿ ಬಂದು ದಶರಥನು ರಾಮನಿಗೆ ಹೇಳುತ್ತಾನೆ—

ಜುಂಜೋಟಿ—ರೂಪಕ

ಪ್ರೀತನಾದೆನು ನಿನ್ನ ಪಡೆದು । ಸಾತಿಶಯದಲಿ । ರಾಮ ॥ ಪ ॥ ಧಾತ್ರಿ ಯೆಲ್ಲ ಪೊಗಳಲೆನ್ನ । ಮಾತ ನಡೆಸಿದೆ ನೀನು ॥ ಅ.ಪ ॥ ಅಡಿದುದನು ನಡೆಸುವ ದಕೆ । ರೂಢಿಯೊಳರಿಯೆ । ರಾಮ ॥ ಅಡಲೇನು ಸ್ವರ್ಗಪದಕೆ । ಈಡೆನಿಸದು ಕೇಳ್ । ರಾಮ ॥ ೧ ॥ ಕೈಕೆ ನಾಟಿಸ ಶೋಕಶಲ್ಯವ । ನೂಕಿರುವೆನು ನಾ । ರಾಮ ॥ ತಾಕದಂತಸತ್ಯದೋಷವು । ಜೋಕೆಯಿಂ ಪೊರೆದೆ । ನೀನು ॥ ೨ ॥ ಇನ್ನು ಹೋಗಯೋಧ್ಯೆಗನುಜ । ನನ್ನು ಸಂತಯಿಸು । ರಾಮ ॥ ಮನ್ನಣೆಯ ಪಟ್ಟಾ ಭಿಷೇಕ । ವನ್ನು ನೀಪಡೆ । ರಾಮ ॥ ೩ ॥

ಎಂದು ಹೇಳಿ ಇಂದ್ರಲೋಕಕ್ಕೆ ಹೋದನು. ಹೀಗೆ ರಾಮನು ತಾನು ಸೀತೆಯ ಸ್ವಭಾವ ವನ್ನು ಚೆನ್ನಾಗಿ ತಿಳಿದವನಾಗಿದ್ದರೂ ಲೋಕಾಪವಾದದ ಭೀತಿಯಿಂದ ನಡೆದ ಈ ನಡೆವಳಿಕೆಯನ್ನು ಲಕ್ಷ್ಯದಲ್ಲಿಟ್ಟುಕೊಂಡೇ ಸಾಧುಗಳು ಪೀಠಿಕೆಯಲ್ಲಿ "ನೀದಿನಿಯಮರಾಟಿಕೆಯ ಪ । ಪಾಪಕೆ ತಾ ಹೆದರಬೇಕು" ಎಂದಾರಂಭವಾಗಿರುವ ನುಡಿಯನ್ನು ಹೇಳಿರುವರು. ಆಮೇಲೆ—

✓ಸಾ॥ ಸುರಪತಿ ಸಂತೋಷಾತಿಶಯದಿ ಪಾ । ಸರಸು ಬರುತಿಸುತಾಗ ॥ ತರಣಿವಂಶಸಂಭವನನುಮತಿಯಿಂ । ತೆರಳ್ದನು ನಾಕಕೆ ಬೇಗ ॥

✓ವಿಂ॥ ಒಡನೆ ಮಂಗಲಮಜ್ಜನವ ಗೆಯ್ಯಲೆಂದು । ಜಡದೆ ಲಂಕೇಶಂ ಬೇಡಿ ಕೊಳ್ಳಲಂದು ॥ ತಡವ ಮಾತಲ್ಲಾಮನೊಪ್ಪದಾಗ । ಮುಡಿಪನಾಗಳ್ಪುಷ್ಪಕವ ತರಲು ಬೇಗ ॥

ವಿಭೀಷಣನು ಪುಷ್ಪಕವನ್ನು ತರುತ್ತಲೆ ರಾಮಚಂದ್ರನು ಸೀತಾಲಕ್ಷ್ಮಣರೊಡನೆ ವಿಮಾನ ವನ್ನು ಹತ್ತಿ ಎಲ್ಲರಿಗೂ ತನ್ನ ಕೃತಜ್ಞತೆಯನ್ನು ತೋರಿಸಿ ಅವರವರ ಸ್ಥಾನಗಳಿಗೆ ಹೋಗುವದಕ್ಕೆ ಅಪ್ಪಣೆಯನ್ನು ಕೊಟ್ಟು ತಾನು ಅಯೋಧ್ಯೆಗೆ ಹೋಗಿಬರುತ್ತೇನೆನ್ನಲು ಸರ್ವರೂ ಪ್ರಾರ್ಥಿಸು ತ್ತಾರೆ—

ಬೇಗಡೆ—ತ್ರಿವುಡೆ

ಚಂದವಾಯಿತ್ತಾಗೆಂಥ ಮಾತುಗಳು । ನೀವಿಂತು ಪೇಳಿದ । ರಿಂದು ಮಾಡು ವದೇನು ನಾವುಗಳು? ॥ ಪ ॥ ಸಿಂಧುಶಯನನೆ ಸಕಲಲೋಕವು । ಹೊಂದಿಹುದು ನಿನ್ನುದರದೇಶದಿ ॥ ಇಂದು ನಿನಗುಪಕಾರ ಪರಜನ । ರಿಂದಲಪ್ಪುದನೊಂದ ಕಾಣೆವು ॥ ಅ.ಪ ॥ ನಿನ್ನ ನಾಮಸ್ಮರಣೆಗೆಯ್ಯುತಲೆ । ಸಂತತವು ರಾಘವ । ನಿನ್ನ ಪದಸೇವೆಯನ್ನು ಮಾಡುತಲೆ । ಧನ್ಯತೆಯನೊಂದಿರುವ ಭಕ್ತರಿ । ಗಿನ್ನು ಮನೆ ಮನೆವಾರ್ತೆ ಭಾಗ್ಯಗ । ಳಿನ್ನು ತೃಣಕೆ ಸಮಾನವಲ್ಲದೆ । ಅನ್ಯವನು ಬಯಸುವರೆ

ಶರಣರು ॥ ೧ ॥ ಕೂಡಿ ಬರುವೆನಯೋಧ್ಯೆಗೇ ನಾವು । ಪಟ್ಟಾಭಿಷೇಕವ । ನೋಡಿ ಸಂತೋಷವನು ತಾಳುವೆವು ॥ ಕಾಡಿನವರಾವೆಂದು ಸತ್ಯಯು । ಮಾಡಿ ಕೃಪೆಯ ಬೇಡ ರಾಘವ । ಬೇಡಿಕೊಂಬೆವು ಎಲ್ಲರಿಂದೊಡ । ಗೂಡಿ ತೆರಳುವೊಡೊಳಿರು ಬೆನನ್ನು ॥ ೨ ॥ ನಿಮ್ಮ ಜನನಿಯರಡಿಗೆ ವಂದಿಸುತ । ದುಃಖದಲಿ ಮರುಗುವ । ನಿಮ್ಮ ಸಹಜಾತರಿಗೆ ಪೊಡಮಡುತ ॥ ಧರ್ಮಸಿಂಹಾಸನದಿ ಸತಿಸಹ । ತಮ್ಮಂದಿ ರೊಡಗೂಡಿರುವುದನು । ನಮ್ಮ ಕಂಗಳ ತುಂಬಿ ನೋಡುವೆ । ನಿಮ್ಮ ಪದಗಳ ಸೇವೆಗೆಯ್ವೆವು ॥ ೩ ॥ —(ದಾ)

ಅದಕ್ಕೊಪ್ಪಿ—

✓ಕೀ॥ ಸೀತಾಲಕ್ಷ್ಮಣರೊಂದಿಗೆ ಬಂದಾ । ನಾಥನೊಡನೆ ವಾನರರೊಡನೆ ॥
ಸೀತಾಪತಿ ಪುಷ್ಪಕದೊಳಯೋಧ್ಯೆಗೆ । ಕಾತರಿಸುತ ತೆರಳಿದನೊಡನೆ ॥

ದಿಂ॥ ಬರುತ ಕಿಷ್ಕಿಂಧಾನಗರವನ್ನು ಕಂಡು । ಅರಿತು ಸೀತಾದೇವಿಯರ ಮನವ ಕೊಂಡು ॥ ಕರೆದು ತಾರಾದೇವಿಯನು ರುಮೆಯನೆಲ್ಲಾ । ತರುಣಿ ಯರನೊಯ್ದಂ ಸಕಲಜಗದ ನಲ್ಲ ॥

ಆಗ ರುಮೆಯು—

ಷ॥ ಹಿಂದೆ ಸೀತಾದೇವಿಯರು ಬಿಸು । ಟಂದಿನಾಭರಣಗಳ ಧರಣೀ । ನಂದನೆಗೆ ಕಾಣಿಕೆಯನಿತ್ತಿರುವಳಲಾ! ಬಳಿಕ ॥ ಕಂದ ಕೇಳ್ಮೆ ಕುಶನೆ ಪರಮಾ । ನಂದದಲಿ ರುಮೆ ತಾರೆಯರ ಮುದದಿಂದ ಮನ್ನಿಸಿ ಸೀತೆ ಸತ್ಕರಿಸಿದಳು ಹರುಷದಲಿ ॥ —(ತೊ.ರಾ)

ಹೀಗೆ ಮುಂದೆ ಬರುತ್ತಿರುವಾಗ ಭರದ್ವಾಜನು ಎದುರುಗೊಂಡು—

ಶ್ಲೋ॥ ಪ್ರಾರ್ಥಯಾಮಿ ಜಗನ್ನಾಥ, ಪವಿತ್ರಂ ಕುರು ಮೇ ಗೃಹಮ್ ।
ಸ್ಥಿತ್ವಾದ್ಯ ಭುಕ್ತ್ವಾ ಸಬಲಃ ಶ್ವೋ ಗಮಿಷ್ಯಸಿ ಪತ್ತನಮ್ ॥ —(ಅ.ರಾ)

ಅ॥ ಹೇ, ದೇವ, ನನ್ನ ಮನೆಯನ್ನು ಪವಿತ್ರವಾಗಿ ಮಾಡಬೇಕೆಂದು ಬೇಡುತ್ತೇನೆ. ಈ ದಿನ ವಿದ್ದು ಸೇನಾಸಮೇತನಾಗಿ ಭೋಜನಮಾಡಿ ನಾಳೆ ಊರಿಗೆ ಹೋಗಬಹುದು.

ಎನಲು ಆಗ ಅವರಿಬ್ಬರಿಗೂ ನಡೆದ ಮಾತೇನೆಂದರೆ—

ಷ॥ ಎಲೆ ಮುನೀಶ್ವರ ಭರತನನು ಕಾಂ । ಬಳತೆಯಿಂದಿನ ದಿವಸ ; ಕಾಣದೊ । ಡಳಿವನಗ್ನಿಯೊಳಿರವು ಸಂಘಟಿಸುವದೆ? ನಮಗೆನಲು ॥ ಕಳುಹ ಸಂಜೀವಿನಿಯ ಕೃಪೆಯ । ತಳೆದು ತಂದ ಮಹಾತಿಶಯಭುಜ । ಬಲನನಲ್ಲಿಗೆಯಲ್ಲಿ ನೀನ್ನಿಂದಿರಲು ಬೇಕೆಂದ ॥ —(ತೊ.ರಾ)

ಟಿ॥ ಕಾಂಬಳತೆ–ಕಾಣುವದಕ್ಕೆ ಗೊತ್ತಾಗಿರುವ ಕಾಲ ಮುಗಿಯುವ ದಿವಸ.

ಆಗ—

✓ಕೀ॥ ರವಿಕುಲತಿಲಕನನುಜ್ಞೆಯಿಂದಲಾ । ಪವನತನಯನಾಗಲೆ ಬಂದು ॥
ಜವದಿ ಶೃಂಗಬೇರದಿ ನಂದಿಗ್ರಾ । ಮವ ಸೇರುತ ನೋಡಿದನಂದು ॥

ಟಿ॥ ಶೃಂಗಬೇರದಿ–ಶೃಂಗಬೇರಪುರದ ಮಾರ್ಗವಾಗಿ.

ಆಗಿನ ಭರತನ ಸ್ಥಿತಿ—

✓ ಸೀ॥ ಸೊರಗಿರುವ ದೇಹದಲಿ ಮಲಿನವಸ್ತ್ರ ಕಾಣುತಿರೆ–ತುರುಗಿರುವ ಜಟೆ ನಾರಿನುಡಿಗೆಯಿರಲು | ಬರಿಯ ಫಲಮೂಲಂಗಳಿಂದಲೇ ಕಷ್ಟದೊಳ್ಯೋಗ–ದಿರವ ನರತು ಚಿಕಿತ್ಸೆ ನಡೆಯುತಿರಲು | ಹರಿನಾಮಜಪವನೇ ರಸನೆ ಯಾವಾಗಲುಂ-ಭರದಿಂದಲೆಡೆಬಿಡದೆ ನುಡಿಯುತಿರಲು | ಧರೆಯಾಧಿಪತ್ಯವನು ಪಾದುಕೆಗಳಿಗೆ ವಹಿಸಿ–ಪರಮಮಂತ್ರಿಗಳು ತಾವ್ ನಡೆಸುತಿರಲು ‖ ತರಣಿಕುಲತಿಲಕ ಬರ್ಪವಧಿಯಾಗ | ಪರಿಪೂರ್ತಿಯಾಯ್ತೆಂದು ಭರತನಾಗ | ಮರುಗುತಗ್ನಿಯನು ಹುತಗೊಳಿಸಿ ಬೇಗ | ನೆರೆ ಪ್ರದಕ್ಷಿಣೆಗೈಯುತಿರ್ದನಾಗ ‖

ಆ ಸಮಯದಲ್ಲಿ ಅವನು ಹಂಬಲಿಸುತ್ತಿದ್ದದ್ದೇನೆಂದರೆ—

ಷ॥ ಪಿತನಳಿದ ಶೋಕವಿಂದುಳಿದನೋ? ಕೈಕೆಗೆ ಕು | ಪಿತನಾಗಿ ಬಾರದಿರ್ದನೋ? ಮುನಿಗಳೊಲ್ಲದ ನುಡಿ | ಪಿತೃವಾಗಪ್ಪುವನೆಂದು ಮುನ್ನಿಸುತ್ತಿರಲಿರ್ದ ಮರೆದನೋ? ನಮ್ಮ ಸಂಕಟಾ! ‖ ಸತಿಗವೇನೆಡರಾಯ್ತೊ? ಸೋದರಂಗಣ್ಣಾಗೆ ಮ | ಸತಿಯೊಂದೊ ಬೇರಾಯ್ತೊ? ಬರ್ಪುದಂ ಕಾಣೆ; ನರ | ಸತಿಯಮರನೆಸ್ಕ ಫಣೆಯೊಳ್ಬರೆದುದೆಂತುಟೋ? ರಾಮನಡಿಯಂ ಕಾಣ್ಬೆನೋ? ‖ —(ಶ್ರೀ.ರಾ.ಪ)

ಹೀಗಿದ್ದ ಭರತನ ಬಳಿಗೆ ಬಂದು ಹನುಮಂತನು ಹೇಳುತ್ತಾನೆ—

ಮುಖಾರಿ—ಆದಿತಾಳ

ಬಂದನಿವನೊ ರಾಮಚಂದ್ರನು | ಈಗ ‖ ಪ ‖ ಸುಂದರಿ ಲಕ್ಷ್ಮಣ ‖ ರಿಂ ದೊಡಗೂಡುತ್ತ ‖ ಅ.ಪ ‖ ವನದಿ ವಿರಾಧನ ಸೀಳುತ | ದೈತ್ಯ | ನನುಜೆಯ ನಾಸಿಕವ ಕೊಯ್ಯುತ | ದುಷ್ಟ | ದನುಜಗರ್ವವ ಬಲಿಹೊಯ್ಯುತ | ಮೃಗ | ವನು ತರಲೈದೆ ರಾ | ವಣನು ಸೀತೆಯನೊಯ್ಯೆ | ವನಿತೆಯನರಸುತ್ತೆ | ಸ್ಸನು ಕಂಡು ಕಾಯ್ದ ದೇವ ‖ ೧ ‖ ತರಿದು ವಾಲಿಯನು ಕಿಷ್ಕಿಂಧೆಯ | ರವಿಯ | ತರಳನಿಗಿತ್ತು ಕಪಿಸೇನೆಯ | ನೆಲ್ಲ | ನೆರಹುತ್ತೆನ್ನಿಂದ ಸೀತಾವಾರ್ತೆಯ ‖ ಕೇಳಿ | ಶರಧಿಗೆ ಸೇತುವ | ವಿರಚಿಸುತವಿುಕವಾ | ನರರಿಂದ ಕೂಡಿ ದಶ | ಶಿರನ ಕೊಂದಿಹ ಧೀರ ‖ ೨ ‖ ದುರುಳ ದೈತ್ಯರನೆಲ್ಲ ಛೇದಿಸಿ | ಹೊತ್ತ | ಧರೆಯ ಭಾರವನೆಲ್ಲ ಜಾರಿಸಿ | ಸಾಧು | ಸುರರ ಸಂಕಟವನ್ನು ಹಾರಿಸಿ | ತನ್ನ | ಅರಸಿಯನಗ್ನಿ ಮುಖದಿ | ಪರಿಸಿ ವಾನರರನ್ನು | ಪೆರಸಿ ಲೋಕವನು | ದ್ಧರಿಸಿದ ಮಹಿಮನು ‖ ‖ ೩ ‖ —(ದಾ)

ಆಗ ಭರತನು ಹನುಮಂತನನ್ನು ಸತ್ಕರಿಸಿ ರಾಮಚಂದ್ರನನ್ನು ಬರಮಾಡಿಕೊಳ್ಳುವದಕ್ಕಾಗಿ ಪಟ್ಟಣದ ಅಲಂಕಾರವು ನಡೆಯುವಂತೆ ಆಜ್ಞೆಮಾಡಿದ್ದಾನೆ—

✓ ರ॥ ಏನೆಂಬೆ ಏನೆಂಬೆ | ಏನೆಂಬೆನವರ ಸಂತಸವ | ಶ್ರೀನಾಥ ಬರುವ ವೈಭವವ ‖ ಪ ‖ ಪುರದೊಳಿರ್ಪ ದೇವಾಲಯಗಳಲಿ | ಪರಮೋತ್ಸವಸೇವೆಗಳೆಸಗುತಲಿ |

ಸುರುಚಿರಗೃಹಗಳ ಶೃಂಗರಿಸುತಲಿ | ಅರಮನೆಗಳನು ಮಲಂಕರಿಸುತಲಿ | ವರ ನವರತ್ನದ ಗೋಪುರಗಳಲಿ | ತರುಣಿಯರೀಕ್ಷಿಸುತಿರಲಲ್ಲಲ್ಲಿ | ಧರಣಿಯು ಕಸ್ತೂರಿ ಸಾರಣೆಗಳಲಿ | ಉರುತರಮೌಕ್ತಿಕರಂಗೋಲಿಯಲಿ | ಮಿರುಗುವ ತೋರಣತತಿಯಲ್ಲಲ್ಲಿ | ತರತರ ಚಿತ್ರದ ಮೇಲ್ಕಟ್ಟಿಸಲಿ | ಮೆರೆಯುವಿಕ್ಷುರಂಭಾದಿಗಳಲ್ಲಿ | ಪರಿಶೋಭಿಸೆ ಮನೆಮನೆ ಬಾಗಿಲಲಿ | ಪರಿಮಳಗಂಧಸುವಾಸನೆಗಳಲಿ | ಸೆರಗೊಳಿಸಿದ ಸುಮಜಾಲಂಗಳಲಿ | ಪುರವದು ರಂಜಿಸೆ ಸೌಭಾಗ್ಯದಲಿ | ಪೊರಟರೆಲ್ಲ ಗಮನೋತ್ಸಾಹದಲಿ || ೧ || ಕರಿರಥತುರಗವು ಕಾಲಾಳುಗಳು | ಮೊರೆವ ವಿವಿಧ ವಾದ್ಯದ ರಭಸಗಳು | ತರುಣೀಜನದಾರತಿಸೊಡಲುಗಳು | ಹರುಷದಿ ಪಾಡುವ ಶೋಭಾನಗಳು | ಸುರಸತಿಯರು ಮಾಡುವ ಗಾನಗಳು | ಸರಸದಿ ನರ್ತಿಪ ಗಣಿಕೆಯರುಗಳು | ತರುಣೀಮಣಿಯರ ಸಂದೋಹಗಳು | ಧರಣಿಪನರಸಿಯರೈತರುತಿರಲು | ಮೊರೆಯುತ್ತಿರುವಂದಣಸಾಲುಗಳು | ವರಕಂಚುಕಿಯರ ಬಹುಗಡಣಗಳು | ಗುರುವಸಿಷ್ಠ ಸತಿಸಹಿತೈತರಲು | ಧರಣೀಸುರನಿಟ್ಟೊದ್ಭಾದಿಗಳು | ಪುರಜನಕಾಣಿಕೆವಿಡಿದೈತರಲು | ಪರಮಾತ್ಮನ ಕಾಂಬುತ್ಸಾಹದೊಳು | ಭರತನು ಪಾದುಕೆದಾಳ್ದು ಶಿರದೊಳು | ಕಿರಿಯನೊಡನೆ ಬಂದನು ಕಾಲ್ನಡೆಯೊಳು || ೨ ||

—(ದಾ)

ಸಾ|| ದೂರದಿಂದ ಪುಷ್ಪಕವಿಳಿಯುತ್ತಿಹ | ದಾರಿಗಂಡು ಭರತನು ಬಂದು || ಸಾರಿ ನಮಿಸಿ ರಾಮಗೆ ಪಾದುಕೆಗಳ | ಸೇರಿಸಿದನು ಪದಗಳಿಗಂದು ||

**ಭರತನು ಆಗ ಹೇಳಿದ್ದೇನೆಂದರೆ—**

ಷ|| ಅಡಿದಂತಪ್ಪುನಡಪಿಗೆ ಪೋದುದರಿದಲ್ಲ; | ಕಾಡೊಳಲ್ತೊಳಲ್ದುದತಿಶಯಮಲ್ಲ; ರಕ್ಕಸರ | ಕೂಡೆ ಕೈಗೈದುದಚ್ಚರಿಯಲ್ಲ; ದೇವರ್ಕಳಂ ಪೊರೆಯೆ ದೊಡ್ಡಿತಲ್ಲ; || ಖೋಡಿ, ಪಾತಕಿ, ಪಿಶುನಸತಿಕೋಪಿ, ಪಾಪಿ, ಕುಲ | ಗೇಡಿ, ಭ್ರಾತೃದ್ರೋಹಿ ತನ್ನೊಳೊರೆದಂತೆ ಕಾ | ಪಾಡಲಿಂತೈತಂದುದಿದುವೆ ಪಿರಿದೆಂದು ಕಾಲ್ಗೆರಗಿದಂ ರಾಘವಂಗೆ ||

—(ಶ್ರೀ.ರಾ.ಪ)

**ಆಗ ವಸಿಷ್ಠರು—**

ಶ್ಲೋ|| ಇದಮೇವ ನರೇನ್ದ್ರಾಣಾಂ ಸ್ವರ್ಗದ್ವಾರಮನರ್ಗಲಮ್ |
ಯದಾತ್ಮನಃ ಪ್ರತಿಜ್ಞಾ ಚ ಪ್ರಜಾ ಚ ಪರಿಪಾಲ್ಯತೇ || —(ಪ್ರ.ರಾ)

**ಅ|| ಹೀಗೆ ತನ್ನ ಪ್ರತಿಜ್ಞೆಯನ್ನೂ ಪ್ರಜೆಗಳನ್ನೂ ರಕ್ಷಿಸುವದೇ ರಾಜರಿಗೆ ತಡೆಯಿಲ್ಲದ ಸ್ವರ್ಗದ ಬಾಗಿಲು.**

**ಎಂದು ರಾಮನನ್ನು ಹೊಗಳಿದರು. ಆಗ ರಾಮನು ಬಂದು ತಾಯಿಯರಿಗೂ ಗುರುಗಳಿಗೂ ತಲೆಬಗ್ಗಿಸಿ ವಂದಿಸಿದ್ದನ್ನು ಕವಿ ವರ್ಣಿಸಿರುವದೇನೆಂದರೆ—**

ಷ|| ಕಿತ್ತಡಿಯ ಜನ್ನವಂ ಕಾದು, ಸೆಣ್ಗೈದವಿಯ | ನೊತ್ತಿ ಕಲ್ಲಂ, ಹರನ ಬಿಲ್ಮುರಿದು, ಭಾರ್ಗವನ | ನೊತ್ತಟ್ಟಿಗುಳಿದಯ್ಯನಾಣೆಯಂ ಬಿಡದಡವಿಯಂ

ಸಾದರ್ಗ, ಕೀಶರ್ಕಳ‖ವೊತ್ತಮಂ ಪೊರೆದು, ಕಡಲಂ ಕಟ್ಟಿ, ದಾನವರ। ನೆತ್ತರಂ ಚೆಲ್ಲಿ, ತಿರೆಪೊರೆಯಿಳಿಸಿದ ಜಸವುಂ। ಪೊತ್ತ ಭಾರಕೆ ಶಿರಂ ಬಾಗಿತೆನೆ ಮಾತೆಯ ಡಿಗೆರಗಿದಂ ಶ್ರೀರಾಮನು ‖ —(ಶ್ರೀ.ರಾ.ಪ)

ಟಿ‖ ಕಿತ್ತಡಿ—ಋಷಿ. ಕೀಶರ್—ಕಪಿಗಳು. ತಿರೆಪೊರೆಯಿಳಿಸಿದ—ಭೂಮಿಯ ಭಾರವನ್ನು ಇಳಿಸಿದ.

ಆಗ ಎಲ್ಲರೂ ಒಬ್ಬರನ್ನೊಬ್ಬರು ಸತ್ಕರಿಸಿದ್ದಾಗುತ್ತಲೇ—

ಕಿ‖ ತನ್ನ ದೇಶವನು ಸೇರುತೆ ರಾಮನು । ಸನ್ನುತವಹ ಪುಷ್ಪಕವನ್ನು ‖ ಇನ್ನು ಕುಬೇರನ ಸೇವಿಸೆನುತ್ತಲಿ । ಮನ್ನಿಸಿ ಕಳುಹಿಸಿದನು ತಾನು ‖

ಆಗ ಭರತನು ರಾಮನನ್ನು ಪ್ರಾರ್ಥಿಸುತ್ತಾನೆ—

ತೋಡಿ — ರೂಪಕ

ಪರಿಪಾಲಿಸೆನ್ನ ಕರುಣದಿಂದ। ಶರಣರಕ್ಷಕ ‖ ಹೊರಲಾರೆ ನಾನು ಧರೆಯ ಭಾರವ । ಕಿರಿಯನಲ್ಲವೇ? ‖ ಪ ‖ ನೀನಿತ್ತ ರಾಜ್ಯಭಾರವನಿಗೋ । ನಾನು ಕೊಟ್ಟಿಹೆ ‖ ದೀನಪಾಲಿಪಾಲ ಸ್ವೀಕರಿಸೈ । ಪ್ರಾಣದೆಲ್ಲವ ‖ ೧ ‖ ಜನರೆಲ್ಲ ನಿನ್ನ ದಾರಿಯನ್ನೆ। ನೆನೆಯುತಿರುವರು ‖ ಅನಿಮಿತ್ತಬಂಧು, ರಾಜನಾಗಿ । ತಣಿವಗೆಯ್ಯದು ‖ ೨ ‖ ಪಿತನನ್ನು ಪೂರ್ಣಕಾಮನೆನಿಸು । ಕ್ಷಿತಿಯ ವಹಿಸುತ ‖ ಕೃತಕೃತ್ಯನಾಗಿ ಮಾಳ್ಪುದೆನ್ನ । ಯತಿಜನಸ್ತುತ ‖ ೩ ‖

ನಿಜವಾಗಿ ಸಹೋದರಭಾವವು ಹೀಗಿರಬೇಕು—

ಷ‖ ಮನೆಗೆಲಸಮಂ ತೊರೆದು, ಕಂಡಕಂಡೆಡೆ ತಿರಿದು, । ದಿನಗಳೆದು ಸುಪರ್ವ್ಯಸನದಿಂ, ಸಿರಿಯ ಹೂಣೆಯಂ।ನೆನೆದು, ಸರಿಹಸುಗೆಗುರಿ ಪುರುಡಿ, ಬೇಗುದಿಗುದಿವವನ ಸಿರಿಗೆ, ಬಲ್ಮೆಯಿಂದ ‖ ತನತಪ್ಪ ಬಗೆಯೊಳಟ್ಟುಳಿಗೆಯ್ದು, ನಾದನ್ನ । ರನೆ ನೆಚ್ಚಿ, ಬರಿದೆ ಪಗೆಗೊಂಡಣ್ಣನಂ ನೋಯಿ। ಪನುಜರ್ಗೆ ಗುರುದೇವರೊಲ್ಮೆಯುಪ್ಪುದೆ? ತಪ್ಪದೆಂದೆಂದಿಗುಂ ನರಕವು ‖ —(ಶ್ರೀ.ರಾ.ಪ)

ಟಿ‖ ಹೂಣೆಯ—ಹೊಟ್ಟೆಯ ಕಿಚ್ಚು. ಹಸುಗೆ—ಹಂಚಿಕೆ. ಬೇಗುದಿಗುದಿದು—ಬಹಳ ಸಂಕಟಪಟ್ಟು. ಅಟ್ಟುಳಿಗೆಯ್ದು—ಪ್ರಯತ್ನಮಾಡಿ.

ಮುಂದಾದದ್ದೇನೆಂದರೆ—

✓ಸೀ‖ ಭರತ ಮೊದಲಾದವರ ಮಜ್ಜನವು ಮೊದಲಾಗೆ—ನೆರೆ ರಾಮನಿಗೆ ಜಟೆಯ ತೆಗೆದುದಾಯ್ತು।ವರವಸ್ತ್ರಗಂಧಪುಷ್ಪಗಳ ಜೋಡಣೆಯದಾಯ್ತು-ಧರಣಿಯಾತ್ಮಜೆಗೆ ಶೃಂಗಾರವಾಯ್ತು।ಪರಮವಿಶ್ವಾಸದಿಂ ಕೌಸಲ್ಯೆ ವಾಸರರ—ತರುಣಿಯರಲಂಕಾರಗೈದುದಾಯ್ತು। ಭರದಿಂ ಸುಮಂತ್ರಸುತ್ತಮಕುದುರೆಗಳ ಕಟ್ಟಿ—ವರರಥನ ತಂದುನಿಲ್ಲಿಸಿದುದಾಯ್ತು‖ಪರಿಜನರು ಪುರಜನರು ನೆರೆದುದಾಯ್ತು। ಇರದೆ ಮಂಗಲವಾದ್ಯ ಮೊರೆದುದಾಯ್ತು । ಧರಣಿಯಮರರ ವೇದಘೋಷವಾಯ್ತು । ನೆರೆ ರಾಮನಾ ರಥವನೇರ್ದುದಾಯ್ತು ‖

ಷ॥ ವಿಮಲಮತಿ ಕುಶ, ಕೇಳಿದೈ ಸಂ । ಭ್ರಮಿಸಿದುದು ವೈಶಾಖಸಿತಸ । ಪ್ತಮಿಯ ದಿನ ಮೂರ್ಧಾಭಿಷೇಚನರಚನೆ ರಘುಪತಿಗೆ; ॥ ಅಮರತತಿ ನೆರೆದುದು; ವಸಿಷ್ಠ । ಪ್ರಮುಖರೊಗ್ಗಾಯ್ತಧಿಕಸೀಮಾ । ಪ್ರಮಿತಪಾರ್ಥಿವನಿಕರ ಕೂಡಿತು ಪಟ್ಟಕವನಿಪನ ॥ —(ತೊ.ರಾ)

✓ ಸೀ॥ ಮುನಿಗಳುಂ ಬ್ರಾಹ್ಮಣರು ಕನ್ಯೆಯರು ಸಾಮಂತ–ಜನಪತಿಯರಭಿಷೇಕಗೈಯಲಾಗ । ಘನಕಿರೀಟವ ತಂದು ಗುರುವಸಿಷ್ಠರು ಮುದದೊ–ಳಿನಕುಲೇಂದ್ರನ ತಲೆಯೊಳಿಡಲು ಬೇಗ । ವಿನಯದಿಂ ಶತ್ರುಘ್ನ ಕೊಡೆಯನಿಸಮತ ವಿಭೀ–ಷಣರು ಚಾಮರಗಳನು ಹಿಡಿಯೆ ನಾಡೆ । ತನನನನ ಗಂಧರ್ವರೊಲಿದು ಪಾಡುತಿರೆ ಸುರ–ವನಿತೆಯರು ನರ್ತಿಸಿದರೆಲ್ಲ ನೋಡೆ ॥ ಅನಿತು ಬಗೆಯಹ ದಾನಮಾನವಾಗೆ । ಅನುಜಭರತಗೆ ಯೌವರಾಜ್ಯವಾಗೆ । ಅನಿಬರಿಗುಪೌತನವು ಪೂರ್ತಿಯಾಗೆ । ಅನುವಾಯ್ತು ಜಗನೆಲ್ಲ ಸೌಖ್ಯವಾಗೆ ॥

**ಈ ಪ್ರಕಾರ ಪಟ್ಟಾಭಿಷೇಕವಾದ ಕಾಲದಲ್ಲಿ—**

ಷ॥ ಯವನ ಕುಕ್ಕುರ್; ಚೈದ್ಯ ಬಂದೆರಗು; ಮುಂತೆ ಸೈಂ । ಧವ ಸುಗರ್ದಿರ್; ಪೊರಮ ಸೌರಾಷ್ಟ್ರ; ಕಾಣಿಕೆಯ । ನನನೀಶಗಿಡು ನಿಷಧ; ಹೂಣನಾರ್? ಸೌವೀರನೆಲ್ಲಿ? ಕರೆ ಮೈಹಯನನು; । ಮನಗಾರಿತು ನಡೆ ಲಾಳ; ಕೈಗೊಟ್ಟು ಚೋಳ; ಪಿಂ । ತನನನೊಡಪೋಗು ಕರ್ನಾಟನೀನೆಂದಲ್ಲಿ । ಮನನಬಂಮಂತಪ್ಪ ಮರ್ಕಟಪ್ರವರರೋಲೈಸುತಿರ್ದನಾಭೆಯೊಳು ॥ —(ಶ್ರೀ.ರಾ.ಪ)

**ಆಗ ರಾಮನು ಆಳಿದ್ದರಲ್ಲಿ ವಿಶೇಷವೇನೆಂದರೆ—**

**ಕೇತಾರಗೌಳ—ಮಿಶ್ರಛಾಪು**

ಧರಣಿಯನಾಳಿದನು । ದಶರಥಸೂನು ॥ ಪ ॥ ಹಿಂದಿನೆಲ್ಲಾ ರಾಜರಂದವ ಮರೆಯಿಸಿ ॥ ಇಂದಿದೆಮಗೆ ಹೊಸ । ದೆಂದು ತಿಳಿಯುವಂತೆ ॥ ೧ ॥

**ರಾಜ್ಯದಲ್ಲಿ ಈ ಭಾವನೆಯು ಜನಗಳಿಗೆ ಬಂದಿತ್ತೆಂಬದು ವ್ಯಕ್ತವಾಗುವದೆಂತೆಂದರೆ—**

ಶ್ಲೋ॥ ಪುನರ್ಜಾತಾ ಇಮೇ ಲೋಕಾಃ ಪುನರ್ಜಾತಾ ಇಮಾಃ ಪ್ರಜಾಃ । ಪುನಶ್ಚೋऽತೇ ತ್ರಯೋ ವೇದಾಃ ಪುನರ್ಯಜ್ಞಾದಿಕಾಃ ಕ್ರಿಯಾಃ ॥ —(ಮ.ವೀ.ಚ.)

ಅ॥ **ಈ ಜಗತ್ತೆಲ್ಲ ಮತ್ತೆ ಹುಟ್ಟಿದಂತಾದವು; ಈ ಜನಗಳೆಲ್ಲ ಮತ್ತೆ ಹುಟ್ಟಿದಂತಾದರು; ವೇದಗಳೆಲ್ಲ ಮತ್ತೆ ಬಂದವುಗಳಾದವು: ಯಜ್ಞಾದಿಕ್ರಿಯೆಗಳು ಮತ್ತೆ ಚಿಗುರಿದವು.**

**ಮತ್ತು—**

**ಕೇತಾರಗೌಳ—ಮಿಶ್ರಛಾಪು**

ಜನರಿಗೆ ಕಷ್ಟವೆಂದೆನಿಸದೆ ಬಹುವಿಧ ॥ ಜನರಂಜನೆಯೊಳು ಸಜ್ಜನರು ಸೈ ಎನುವಂತೆ ॥ ೨ ॥

ಜನರಿಗೆ ಕಷ್ಟವಾಗಬಾರದೆಂಬ ವಿಷಯದಲ್ಲಿ ಕವಿಯು ಹೇಳಿರುವದೇನೆಂದರೆ—

ಷ॥ ಒಲಿದು ವನಪಾಲಕನು ತೋಟವ। ಬೆಳೆಸಿ ವನದಲಿ ಕುಸುಮಫಲ ತತಿ।ಗಳನು ಕೊಯ್ವಂದದಲಿ ಪ್ರಜೆಗಳ ಸಲಹಿ ತೆರಿಗೆಯನು॥ಕೊಳಲು ಬೇಹುದು; ಕಡಿದು ಬಹುತರು। ಗಳನುರುಹಿ ಕೆಂಡವನು ಕೊಂಡಂ। ತಿಳಿಯ ಜನಗಳ ಬಾಧಿ ಪುದು ತಾನುಚಿತವಲ್ಲೆಂದ ॥ —(ಕ.ಭಾರ)

ಇದೇ ಅಭಿಪ್ರಾಯವನ್ನು ಸರ್ವಜ್ಞನೂ ಹೇಳುವದೇನೆಂದರೆ—

ತ್ರಿ॥ ಒಕ್ಕಲನು ನಲುಗಿಸದೆ, ಲೆಕ್ಕದೊಳು ಸಿಕ್ಕಿಸದೆ,। ಕಕ್ಕುಲಿತೆಯಿಂದ ನಡೆಸುವಾ ಅರಸನು। ಚಕ್ಕಂದವಿರುವ ಸರ್ವಜ್ಞ ॥ —(ಸ.ಪ)

ಮತ್ತು—

ಕೇತಾರಗೌಳ—ಮಿಶ್ರಛಾಪು

ರೋಗಾದಿಗಳ ಬಾಧೆ। ತಾಗದೆ ಮಳೆಬೆಳೆ ॥ ಹೋಗದೆಲ್ಲಿಯು ಸುಖ। ವಾಗಿ ಶೋಭಿಸುವಂತೆ ॥ ೩ ॥

ರಾಮರಾಜ್ಯದಲ್ಲಿ ರೋಗದ ಬಾಧೆ ಇರಲಿಲ್ಲವೆಂಬುದನ್ನು ಕವಿ ವರ್ಣಿಸಿರುವದೇನೆಂದರೆ—

ಶ್ಲೋ॥ ಶ್ರೀರಾಮಚನ್ದ್ರೇ ರವಿವಂಶಭೂಪೇ। ಶಾಸತ್ಯಭೂದ್ವ್ಯಾಧಿರನಾಮಯೋऽಯಮ್ ॥ ತಥಾ ಹಿ ಸೋಮಸ್ಯ ವಿಭಾವಸೋಶ್ಚ। ಸಾಮ್ಯೇ ವ್ಯಥಾ ಪ್ರಾಣಭೃತಃ ಕುತಃ ಸ್ಯಾತ್ ॥ —(ಸು.ಲಾ)

ಅ॥ ಸೂರ್ಯವಂಶದ ಅರಸನಾದ ರಾಮಚಂದ್ರನು ಆಳುತ್ತಿರುವಾಗ ಭೂಮಿಯ ಮೇಲೆ ರೋಗಾದ್ಯುಪದ್ರವಗಳಿರಲಿಲ್ಲ. (ಏಕೆಂದರೆ ಸೂರ್ಯನೊಡನೆ) ಚಂದ್ರನೂ ಅಗ್ನಿಯೂ ಸಾಮ್ಯವನ್ನು ಪಡೆದರೆ—ಅಂದರೆ ಒಬ್ಬರಿಗೊಬ್ಬರು ಸೇರಿದರೆ—ಪ್ರಾಣಿಗಳಿಗೆ ವ್ಯಥೆ ಹೇಗಾದೀತು? (ಸೂರ್ಯ ವಂಶವೆಂಬುವದು ಉಷ್ಣತೆ ಮತ್ತು ರಾಮಚಂದ್ರನೆನ್ನುವದು ಶೀತತೆ. ಇವೆರಡೂ ಕೂಡಿದರೆ ಜನರಿಗೆ ಬಾಧೆಯಿಲ್ಲವೆನ್ನುವದು ಸ್ವಾಭಾವಿಕವು.)

ಇನ್ನು ದೇಶವು ಎಲ್ಲಾ ವಿಷಯದಲ್ಲಿಯೂ ಸುಭಿಕ್ಷವಾಗಿದ್ದದ್ದೆಂತೆಂದರೆ—

ಷ॥ ಬರಡುಧೇನುಗಳಿಲ್ಲ; ಭಾಮಿನಿ। ಯರಲಿ ಬಂಜೆಗಳಿಲ್ಲ; ಪುತ್ರರ। ಮರಣಕಂಡವರಿಲ್ಲ; ವಿಧವೆಗಳಿಲ್ಲ; ಬಡತನದಿ ॥ ಮರುಗುತಿಹ ಜನರಿಲ್ಲ; ಬೆಳೆಗೊಡ। ದಿರುವ ಧಾರಿಣಿಯಿಲ್ಲ; ಸುಮಫಲ। ವೆರಸಿರದ ಕುಜವಿಲ್ಲ; ಸಂತತ ರಾಮರಾಜ್ಯದಲಿ ॥ —(ರಾ.ಕ.ಕು)

ಮತ್ತು—

ಕೇತಾರಗೌಳ—ಮಿಶ್ರಛಾಪು

ಪರಿಪೂರ್ಣಸೌಭಾಗ್ಯ। ವಿರೆಯುಮುದರ ಸಂಗ ॥ ವಿರದೆ ಸಾಕ್ಷಿತ್ವದಿ। ಮೆರೆಯುವನೆಂಬಂತೆ ॥ ೪ ॥

ರಾಜರ ಈ ಅಸಂಗತ್ವವನ್ನು ಕವಿ ವರ್ಣಿಸಿರುವದೆಂತೆಂದರೆ—

ವೃ|| ರಾಜ್ಯಶ್ರೀಯೊಳನೇಕಕಾಮಿನಿಯರುಂಟಾಲಾಪನೃತ್ಯಂಗಳುಂ | ಟಾಜಿಹ್ವಾರುಚಿಯುಂಟು; ಕಾಮಿಸಿದನೆಲ್ಲಾವುಂಟು; ವುಂಟಾದೊಡಾ || ರಾಜೀವಂಕೆಸರಳ್ಗಿಯುಳ್ಳದವೊಲಿದರ್ರೊಳ್ರ್ಧಕ್ಕೆ ಕಣ್ಣಿಟ್ಟೊಡಾ | ರಾಜಂ ರಾಜನೆ? ತಾನೆ ರಾಜಋಷಿಯೈ! ರತ್ನಾಕರಾಧೀಶ್ವರಾ || —(ರ.ಶ)

ಮತ್ತು—

ಕೇತಾರಗೌಳ—ಮಿಶ್ರಭಾಪು

ಇವನಿಂದ್ರಸಿಪ ಚಂದ್ರ | ಇವನೆ ದೇವೇಂದ್ರನು || ಇವಗೆಣೆಯಿಲ್ಲೆಂದು | ಬುಧರು ಹೊಗಳುವಂತೆ || ೫೯ ||

ರಾಜನ ಈ ಅದ್ವಿತೀಯತ್ವವನ್ನು ಒಬ್ಬ ಕವಿಯು ಹೇಳಿರುವದೇನೆಂದರೆ—

ಶ್ಲೋ|| ಕಾಮಂ ನೃಪಾಃ ಸನ್ತು ಸಹಸ್ರಶೋಽನ್ಯೇ | ರಾಜನ್ವತೀಮಾಹುರನೇನ ಭೂಮಿಮ್ | ನಕ್ಷತ್ರತಾರಾಗ್ರಹಸಙ್ಕುಲಾಪಿ | ಜ್ಯೋತಿಷ್ಮತೀ ಚನ್ದ್ರಮಸೈವ ರಾತ್ರಿಃ || —(ರ.ವಂ)

ಅ|| ಬೇರೆ ಸಾವಿರಾರು ರಾಜರುಗಳಿದ್ದರೂ ಭೂಮಿಯನ್ನು ಇವನಿಂದಲೇ ರಾಜನುಳ್ಳದ್ದೆಂದು ಹೇಳುತ್ತಾರೆ. ನಕ್ಷತ್ರಗಳೂ ತಾರೆಗಳೂ ಬೇಕಾದಷ್ಟಿದ್ದರೂ ರಾತ್ರಿಯು ಚಂದ್ರನಿಂದಲೇ ಬೆಳಕುಳ್ಳದ್ದೆನಿಸಿಕೊಳ್ಳುತ್ತದೆ.

ಈ ಅದ್ವಿತೀಯತ್ವಕ್ಕೆ ಕಾರಣವಾಗಿ ರಾಮನಲ್ಲಿದ್ದ ಗುಣಗಳೇನೆಂದರೆ—

ಶ್ಲೋ|| ದ್ವಿಃ ಶರಂ ನಾಭಿಸನ್ಧತ್ತೇ ದ್ವಿಃ ಸ್ಥಾಪಯತಿ ನಾಶ್ರಿತಾನ್ | ದ್ವಿರ್ದದಾತಿ ನ ಚಾರ್ಥಿಭ್ಯೋ ರಾಮೋ ದ್ವಿರ್ನಾಭಿಭಾಷತೇ || —(ಹ.ನಾ)

ಅ|| ರಾಮನು ಬಾಣವನ್ನು ಎರಡುಸಲ ಹೂಡುವದಿಲ್ಲ; ಆಶ್ರಿತರನ್ನು ಎರಡುಸಲ ನೆಲೆಗೊಳಿಸುವದಿಲ್ಲ. (ಒಂದೇ ಸಲಕ್ಕೇ ಅವರು ಶಾಶ್ವತವಾದ ಸುಸ್ಥಿತಿಯಲ್ಲಿರುವರೆಂದರ್ಥ); ಯಾಚಕರಿಗೆ ಎರಡುಸಲ ಕೊಡುವದಿಲ್ಲ. (ಒಂದೇ ಸಲ ಕೊಟ್ಟದ್ದೇ ಅವರಿಗೆ ಸಾಕೆನಿಸುತ್ತಿತ್ತೆಂದರ್ಥ); ಎರಡು ಮಾತಾಡುವದಿಲ್ಲ.

ಹೀಗೆ ರಾಮನು 'ರಾಮರಾಜ್ಯ'ವೆಂಬ ಹೆಸರುನಿಲ್ಲುವಂತೆ ತನ್ನ ಹೆಸರನ್ನುಳಿಸಿದ್ದನ್ನು ನೋಡಿಯೇ ಸಾಧುಗಳು ಪೀಠಿಕೆಯಲ್ಲಿ ರಾಜಧರ್ಮವನ್ನುಪದೇಶಮಾಡುವಾಗ 'ತನ್ನ ಹೆಸರ ನುಳಿಸಬೇಕು' ಎಂದು ಆರಂಭವಾಗಿರುವ ನುಡಿಯನ್ನು ಹೇಳಿರುವರು. ಸಾಮಾನ್ಯರು ಅನುಕರಣಮಾಡುವದಕ್ಕೆ ಇದು ಸಣ್ಣತುತ್ತಾಗಿ ತೋರಲಿಲ್ಲವಾದ್ದರಿಂದಲೇ ಸಜ್ಜನರ ಬಾಯಿಂದ 'ಬಲು ಕಠಿನವು ರಾಜಧರ್ಮ' ಎಂಬ ಉಪದೇಶವು ಹೊರಟಿದೆ. ಪ್ರತಿಯೊಬ್ಬನೂ ತನ್ನ ಶಕ್ತಿ ಇದ್ದಷ್ಟು ಇದನ್ನು ಸಾಧಿಸುವ ಪ್ರಯತ್ನವನ್ನು ಮಾಡಬೇಕು.



# ಮಙ್ಗಲಮ್

## ಕೌಸಲ್ಯೆಯು ಶ್ರೀರಾಮನಿಗೆ ಮಾಡಿದ ಆಶೀರ್ವಾದ

ಶ್ಲೋ॥ ಯನ್ಮಙ್ಗಲಂ ಸಹಸ್ರಾಕ್ಷೇ ಸರ್ವದೇವನಮಸ್ಕೃತೇ । ವೃತ್ರನಾಶೇ ಸಮಭವತ್ತತ್ತೇ ಭವತು ಮಙ್ಗಲಮ್ ॥ ೧ ॥ —(ಶ್ರೀ.ರಾ)

ಅ॥ ಸಮಸ್ತದೇವತೆಗಳಿಂದಲೂ ನಮಸ್ಕಾರವನ್ನು ಪಡೆಯುವಂಥ ಇಂದ್ರನಿಗೆ ವೃತ್ರಾಸುರನನ್ನು ಕೊಲ್ಲುವಾಗ ಆದ ಮಂಗಲವು ನಿನಗಾಗಲಿ.

ಶ್ಲೋ॥ ಯನ್ಮಙ್ಗಲಂ ಸುಪರ್ಣಸ್ಯ ವಿನತಾಽಕಲ್ಪಯತ್ಪುರಾ । ಅಮೃತಂ ಪ್ರಾರ್ಥಯಾನಸ್ಯ ತತ್ತೇ ಭವತು ಮಙ್ಗಲಮ್ ॥ ೨ ॥ —(ಶ್ರೀ.ರಾ)

ಅ॥ ಅಮೃತವನ್ನು ತರುವ ಬಯಕೆಯಿಂದ ಹೊರಟ ಗರುಡನಿಗೆ ವಿನತಾದೇವಿಯು ಹೇಳಿದ ಮಂಗಲವು ನಿನಗಾಗಲಿ.

ಶ್ಲೋ॥ ಅಮೃತೋತ್ಪಾದನೇ ದೈತ್ಯಾನ್ಘ್ನತೋ ವಜ್ರಧರಸ್ಯ ಯತ್ । ಅದಿತಿರ್ಮಙ್ಗಲಂ ಪ್ರಾದಾತ್ತತ್ತೇ ಭವತು ಮಙ್ಗಲಮ್ ॥ ೩ ॥ —(ಶ್ರೀ.ರಾ)

ಅ॥ ಅಮೃತವು ಹುಟ್ಟಿದ ಸಂದರ್ಭದಲ್ಲಿ ರಾಕ್ಷಸರನ್ನು ಕೊಲ್ಲುವ ಇಂದ್ರನಿಗೆ ಅದಿತಿಯು ಕೊಟ್ಟ ಮಂಗಲವು ನಿನಗಾಗಲಿ.

ಶ್ಲೋ॥ ತ್ರೀನ್ವಿಕ್ರಮಾನ್ಪ್ರಕ್ರಮತೋ ವಿಷ್ಣೋರಮಿತತೇಜಸಃ । ಯದಾಸೀನ್ಮಙ್ಗಲಂ ರಾಮ, ತತ್ತೇ ಭವತು ಮಙ್ಗಲಮ್ ॥ ೪ ॥ —(ಶ್ರೀ.ರಾ)

ಅ॥ ಅತ್ಯಂತತೇಜಸ್ವಿಯಾದ ವಿಷ್ಣುವಿಗೆ ಮೂರು ಹೆಜ್ಜೆಯಿಂದ ಭೂಮಿಯನ್ನು ಅಳೆಯುವಾಗ ಆದ ಮಂಗಲವು ನಿನಗಾಗಲಿ

ಶ್ಲೋ॥ ಋತವಃ ಸಾಗರಾ ದ್ವೀಪಾ ಲೋಕಾ ವೇದಾ ದಿಶಶ್ಚ ತೇ । ಮಙ್ಗಲಾನಿ ಮಹಾಬಾಹೋ, ದಿಶನ್ತು ತವ ಸರ್ವದಾ ॥ —(ಶ್ರೀ.ರಾ)

ಅ॥ ಋತುಗಳು, ಸಾಗರಗಳು, ದ್ವೀಪಗಳು, ಲೋಕಗಳು, ವೇದಗಳು, ದಿಕ್ಕುಗಳು— ಇವು ನಿನಗೆ ಯಾವಾಗಲೂ ಮಂಗಲವನ್ನುಂಟುಮಾಡಲಿ.



